# ಸ್ಕೂಲ ಮಿಸ್ಟ್ರೆಸ್

ಅಥವಾ

## ಅಡವೀರಾಯಕೃತ ರಾಧಾ-ಕೃಷ್ಣವಿಲಾಸ

(ಸಾಮಾಜಿಕ ಕಥೆ.)




ಲೇಖಕ-ಮುದ್ರಕ ಮತ್ತು ಪ್ರಕಾಶಕ:-

ಬಿ. ಪಿ. ಕಾಳೆ



ಶ್ರೀ ಶೇಷಾಚಲ ಪ್ರೆಸ್ಸ,

ಮದಿಹಾಳ-ಧಾರವಾಡ.





(ದ್ವಿತೀಯ ಮುದ್ರಣ)

೧೯೪೭

೩ ರೂಪಾಯಿ

ಪ್ರಥಮ ಮುದ್ರಣದ ಬಗ್ಗೆ

## ಲೇಖಕನ ಹೃದ್ಗತ



ಈ ಕಥಾಮಂದಿರವು ಕಲ್ಪನಾಸೃಷ್ಟಿಯೊಳಗಿನದು. ಇದರೊಳಗಿನ ಸ್ಥಳ, ಕಾಲ, ಪ್ರಸಂಗ ಮೊದಲಾದವುಗಳು ಕಾಲ್ಪನಿಕವಿದ್ದರೂ, ಪ್ರತ್ಯಕ್ಷ ಸೃಷ್ಟಿಯೊಳಗಿನ ಹಲಕೆಲವು ದೃಶ್ಯಗಳು ಹೆಚ್ಚು-ಕಡಿಮೆ ಪ್ರಮಾಣದಿಂದ ಇದರಲ್ಲಿ ಚಿತ್ರಿಸಲ್ಪಟ್ಟಿರುವವು. ಇಷ್ಟರಿಂದ ಇದು ಇಂತಹ ಮಂದಿರ, ಇದು ಇಂತಹ ವ್ಯಕ್ತಿ ಮುಂತಾಗಿ ಭ್ರಾಮಕ ಕಲ್ಪನೆಗಳನ್ನು ಯಾರೂ ತಂದುಕೊಳ್ಳಬಾರದು.

ವಿದ್ಯಾಲಯದೊಳಗಿನ ಬಾಲ-ಬಾಲಿಕೆಯರು ರಾಷ್ಟ್ರದ ಭಾವೀ ಪ್ರಜೆಗಳು. ಅವರು ಉತ್ತಮ ನಾಗರಿಕರಾಗಿ ಬಾಳಬೇಕಾದರೆ, ಅವರಿಗೆ ಸುಶಿಕ್ಷಣ ದೊರೆಯುವದು ಅತ್ಯವಶ್ಯಕವು. ಅವರ ಹೃದಯುಗಳು ಅನುಕರಣಶೀಲವಿರುವದರಿಂದ ಚಿಕ್ಕಂದಿನಲ್ಲಿ ಬೀಜರೂಪವಾಗಿ ಮೂಡಿದ ವಿಚಾರಗಳೇ ಮುಂದೆ ವೃಕ್ಷರೂಪವಾಗುವವು. ಸದ್ಯಕ್ಕೆ ವಿದ್ಯಾಮಂದಿರಗಳಲ್ಲಿ ನೈತಿಕ ಶಿಕ್ಷಣವು ಎಷ್ಟರ ಮಟ್ಟಿಗೆ ದೊರೆಯುವದೆಂಬದನ್ನು ವಿವೇಚಿಸುವ ಸ್ಥಳವು ಇದಾಗದಿದ್ದರೂ, ಓದು-ಬರೆಹಗಳನ್ನಷ್ಟೇ ಕಲಿಸುವದು ಶಿಕ್ಷಣದ ಧ್ಯೇಯವಾಗಿರಲಾರದು. ದೇಶಕ್ಕೆ ದೇಶವನ್ನೇ ಜಾಗ್ರತಗೊಳಿಸುವಂತಹ ಸಂತ-ಮಹಂತರೂ ಬಾಹುಬಲದಿಂದ ಸ್ವರಾಜ್ಯ-ಸ್ವಾತಂತ್ರ್ಯಗಳನ್ನು ಸಂಪಾದಿಸಿದ ವೀರ-ವಿಭೂತಿಗಳೂ ಓದು ಬರೆಹಗಳ ಪದವೀಧರರಿದ್ದಿಲ್ಲ. ಓದು-ಬರೆಹಗಳನ್ನಷ್ಟೇ ಕಲಿತುಬಿಟ್ಟರೆ ಇತಿ ಕರ್ತವ್ಯವಾಗಲಿಲ್ಲ. ಬಾಲಕರು ಉತ್ತಮ ನಾಗರಿಕರಾಗಿಯೂ, ಬಾಲಿಕೆಯರು ಉತ್ತಮ ಗೃಹಿಣಿಯರಾಗಿಯೂ ಬಾಳಬೇಕಾದರೆ, ಅವರಿಗೆ ಧಾರ್ಮಿಕ, ನೈತಿಕ ಶಿಕ್ಷಣವು ದೊರೆಯುವದು ಅತ್ಯವಶ್ಯಕವು. ಓದು-ಬರೆಹಗಳಿಗಿಂತಲೂ ಈ ಶಿಕ್ಷಣಕ್ಕೆ ಹೆಚ್ಚಿನ ಮಹತ್ವವು ಪ್ರಾಪ್ತವಾಗಲಿಕ್ಕೆ ಬೇಕು. ಬಾಲ-ಬಾಲಿಕೆಯರ ಎಳೆಯ ಮನಸ್ಸುಗಳು ಅನುಕರಣಪ್ರಿಯವಿರುವದರಿಂದ, ಶಿಕ್ಷಕ-ಶಿಕ್ಷಕಿಯರಲ್ಲಿರುವ ಆಚರಣೆಗಳು ಅವರಲ್ಲಿ ಬಿಂಬಿಸುವವು; ಆದ್ದರಿಂದ ವಿದ್ಯಾಲಯದೊಳಗಿನ ಶಿಕ್ಷಕ-ಶಿಕ್ಷಕಿಯರು ನೀತಿಸಂಪನ್ನರಿರಲಿಕ್ಕೇಬೇಕು. ಕೆಲಸಗಾರರು ಹೇಗಿದ್ದರೇನು? ಶಿಕ್ಷಣವ್ಯವಸಾಯವೊಂದು ಸುಸೂತ್ರವಾಗಿ ನಡೆದರಾಯಿತೆಂಬ ವಿಚಾರವು ಘಾತುಕವಾದದ್ದಿರುವದು. ಅಲ್ಲಿಯ ಕೆಲಸಗಾರರು ಸರ್ವೋತ್ಕೃಷ್ಟವಾಗಿದ್ದಷ್ಟು ಒಳಿತು. ಅತ್ಯಾಚಾರಿಗಳೂ ಅನಾಚಾರಿಗಳೂ ಆದ ಕೆಲಸಗಾರರು ಶಿಕ್ಷಣ ಕ್ಷೇತ್ರದಲ್ಲಿ ಪ್ರವೇಶಮಾಡಲು ಪೂರಾ ಅನರ್ಹರೆಂಬ ದೃಷ್ಟಿಯನ್ನಿಟ್ಟಾಗಲೇ ಶಿಕ್ಷಣ

ಮಂದಿರವು ಸೊಬಗುವಡೆಯುವದು; ರಾಷ್ಟ್ರಮಂದಿರವೂ ಶೋಭಾಯಮಾನ ವಾಗುವದು. ರಾಷ್ಟ್ರದ ಭಾವೀ ಪ್ರಜೆಗಳಾದ ಬಾಲ-ಬಾಲಿಕೆಯರ ಚರಿತ್ರ ಗಠನದ ಸ್ಥಳವೆಂದರೆ, ಪ್ರಾಮುಖ್ಯವಾಗಿ ಶಿಕ್ಷಣ ಮಂದಿರವೇ ಆಗಿರುವದು. ಪಾಂಡಿತ್ಯಕ್ಕಿಂತ ನೀತಿಯ ಒರೆಗೆ ಚನ್ನಾಗಿ ಹತ್ತುವ ಕೆಲಸಗಾರರೇ ಶಿಕ್ಷಣ ಕ್ಷೇತ್ರದಲ್ಲಿ ಪ್ರವೇಶಿಸಲು ತಕ್ಕವರಾಗಿರುವರೆಂದು ನಿರ್ವಿವಾದವಾಗಿ ಹೇಳ ಬಹುದು.

ಅತ್ಯಾಚಾರಿಗಳೂ ಅನಾಚಾರಿಗಳೂ ಆದ ಶಿಕ್ಷಕ-ಶಿಕ್ಷಕಿ-ಶಿಕ್ಷಣಾಧಿಕಾರಿ ಗಳ ಹೃದಯಸ್ಪರ್ಶಿಯಾದ ಚಿತ್ರವು ಈ ಕಥಾಮಂದಿರದಲ್ಲಿ ಒಡೆದು ಕಾಣು ವಂತಿದೆ. ನೀತಿ ವಿಹೀನರಾದ ಕೆಲಸಗಾರರಿಂದ ನೀತಿವಂತರು ಎಷ್ಟು ವಿಧದ ಸಂಕಟಗಳಿಗೀಡಾಗುವರೆಂಬ ಕೆಲವು ನೋಟಗಳೂ ಇವರಲ್ಲಿ ಮೂಡಿರುವವು

ಈ ಕಥೆಯನ್ನು ಬರೆಯುವಾಗ ನನಗೆ ಮಹಾರಾಷ್ಟ್ರ ಭಾಷೆಯೊಳಗಿನ ಒಂದೆರಡು ಕಥೆಗಳ ಅವಲೋಕನವು ಚನ್ನಾಗಿ ಉಪಯೋಗವಾಯಿತು; ಆದ್ದ ರಿಂದ ಆ ಕಥೆಗಳ ಲೇಖಕ-ಪ್ರಕಾಶಕರಿಗೆ ನಾನು ತುಂಬಾ ಕೃತಜ್ಞನಾಗಿರು ತ್ತೇನೆ, ಹಾಗು ಇದನ್ನು ಬರೆಯಲಿಕ್ಕೆ ಪ್ರೋತ್ಸಾಹಿಸಿ, ಅನೇಕ ಉಪಯುಕ್ತ ಸೂಚನೆಗಳನ್ನು ಮಾಡಿದ ನನ್ನ ಕೆಲ ಜನ ಮಿತ್ರರಿಗೂ ನಾನು ಆಭಾರಿ ಯಾಗಿರುತ್ತೇನೆ. ಇದನ್ನು ಬರೆದು ಪ್ರಕಟಿಸಬೇಕೆಂಬ ವಿಚಾರವು ನನ್ನ ಮನಸ್ಸಿನಲ್ಲಿ ಬಹು ದಿನಗಳಿಂದಿತ್ತು. ಈ ವಿಚಾರವು ನಮ್ಮ ಪ್ರಿಯ ಕನ್ನಡ ವಾಚಕ ಮಹಾಶಯರ ಬಲುಮೆಯ ಬೇಡಿಕೆಯ ಪ್ರೋತ್ಸಾಹನೆಯಿಂದ ನನ್ನ ಲೆಕ್ಕಣಿಕೆಯ ದ್ವಾರಾ ಇಂದು ಪೂರ್ತಿಗೊಂಡಿದ್ದಕ್ಕಾಗಿ ನನಗೆ ತುಂಬಾ ಆನಂದವೆನಿಸಿದೆ.

ನನ್ನಿಂದ ಈ ಮೊದಲು ಕೆಲವು ಐತಿಹಾಸಿಕ, ಸಾಮಾಜಿಕ, ಪತ್ತೇದಾರಿ ಕಥೆಗಳೂ ಚರಿತ್ರಗಳೂ ಬರೆಯಲ್ಪಟ್ಟಿರುವವು;ಆದರೆ ಈ ಬಗೆಯ ಸಾಮಾಜಿಕ ಸಾಹಿತ್ಯ ಕ್ಷೇತ್ರದಲ್ಲಿ ನಾನು ಪ್ರವೇಶವಾದದ್ದು ಇದೇ ಮೊದಲು. ವಾಚಕರು ಇದರಲ್ಲಿಯ ದೋಷಗಳನ್ನು ಬದಿಗಿರಿಸಿ, ಗುಣಗಳನ್ನಷ್ಟೇ ಗ್ರಹಿಸಬೇಕೆಂದು ವಿನೀತಭಾವದಿಂದ ಬೇಡುವೆನು. ಕರ್ನಾಟಕ ವಾಙ್ಮಯಾಭಿಮಾನಿಗಳಿಂದ ಪ್ರೋತ್ಸಾಹನೆ ದೊರೆತರೆ, ಇನ್ನೂ ಇಂತಹ ಹಲ ಕೆಲವು ಸಾಮಾಜಿಕ ಚಿತ್ರ ಗಳನ್ನು ರೇಖಿಸುವ ಮನಸ್ಸು ಮಾಡಿರುವೆನು.

ಆನಂದವನ
೧-೧-೧೯೩೭



ಕನ್ನಡಿಗರ ಸೇವಕ,
— ಕಾಳೆ

# ಪರಿವಿಡಿ



---

# ಸ್ಕೂಲ ಮಿಸ್ಟ್ರೆಸ್



ತೆಂತು.

“ಇದೀಗ ಪ್ರಾರಂಭವಾಗಿರುವದು ಸ್ತ್ರೀಯರ ಭಾಗ್ಯೋದಯದ ಕಾಲ. ಸ್ತ್ರೀ ಶಿಕ್ಷಣದ ಪ್ರಸಾರಕ್ಕಾಗಿ ಹೀಗೆ ಅಂತಃಕರಣಪೂರ್ವಕವಾಗಿ ಸಾಹಸ ಮಾಡುವ ವಿದ್ಯಾಧಿಕಾರಿಗಳು ನಮ್ಮ ವಿಜಯನಗರ ಸಂಸ್ಥಾನವನ್ನು ಬಿಟ್ಟರೆ ಬೇರೆ ಕಡೆಗೆ ಎಲ್ಲಿಯೂ ಇಲ್ಲವೆಂದು ಹೇಳಬಹುದು. ಸ್ತ್ರೀಯರು ಸುವಿದ್ಯಾವಂತರಾದರೆ ಪುರುಷರಷ್ಟೇ ಕಾರ್ಯಕ್ಷಮತೆಯುಳ್ಳವರಾಗಿ, ಸಮಾಜಕ್ಕೆ ನಿಜವಾದ ಸೌಖ್ಯವು ದೊರಕುವದೆಂದು ನಮ್ಮ ವಿದ್ಯಾಧಿಕಾರಿಗಳ ಅಭಿಪ್ರಾಯವುಂಟು. ಅವರ ಪ್ರಯತ್ನದಿಂದ ವಿಜಯನಗರವು ವಿದ್ಯೆಯ ಆಗರವಾಗುವದೆಂದು ತರ್ಕಿಸಲಿಕ್ಕೆ ಅಡ್ಡಿಯಿಲ್ಲ. ಶಿಕ್ಷಕರಿಂದ ವಿದ್ಯಾರ್ಥಿನಿಯರಿಗೆ ಶಿಕ್ಷಣ ಚೆನ್ನಾಗಿ ದೊರೆಯುವದಿಲ್ಲವೆಂದು ಅವರು ಅನ್ನುತ್ತಾರೆ. ಇತ್ತೀಚೆಗೆ ಅವರು ಹುಡುಗಿಯರ ಶಾಲೆಯಲ್ಲಿ ಶಿಕ್ಷಕಿಯರನ್ನು ನಿಯಮಿಸತೊಡಗಿದ್ದಾರೆ. ನಾನು ಕನ್ನಡ ಆರನೆಯ ಇಯತ್ತೆಯವರೆಗೆ ಶಿಕ್ಷಣ ಪಡೆದಿದ್ದೆನು. ನಮ್ಮ ವಿದ್ಯಾಧಿಕಾರಿಗಳು ನನಗೆ ಪ್ರೋತ್ಸಾಹನೆಯನ್ನಿತ್ತು, ಮೂರು ವರ್ಷಗಳ ವರೆಗೆ ಟ್ರೇನಿಂಗ ಶಿಕ್ಷಣ ಕೊಡಿಸಿದರು. ಪರೀಕ್ಷೆಯಲ್ಲಿ ಉತ್ತೀರ್ಣರಾದ ಸ್ತ್ರೀಯರನ್ನು ಅವರು ಅತ್ಯಾನಂದದಿಂದ ಶಿಕ್ಷಕಿಯರನ್ನಾಗಿ ನಿಯಮಿಸುವರು. ಶಿಕ್ಷಣಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವವರ ಗೃಹಿಣಿಯರು ಶಿಕ್ಷಕಿಯರ ಕೆಲಸ ಮಾಡಲಿಕ್ಕೆ ಒಪ್ಪಿದರೆ, ಸಂಸ್ಥೆಯ ಭಾಗ್ಯವೆಂದೇ ಅವರ ಗ್ರಹಿಕೆಯುಂಟು. ವಿದ್ಯಾಸಂಸ್ಥೆಯ ಮುಖ್ಯಾಧಿಕಾರಿಗಳಾದ ನಾಲ್ಕು ವರ್ಷಗಳಲ್ಲಿ ಅವರಿಂದ ಎಷ್ಟು ಸುಧಾರಣೆ ಮಾಡಲ್ಪಟ್ಟಿರುವವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಸ್ತ್ರೀ ಶಿಕ್ಷಣದಲ್ಲಿ ದಿನವೊಂದಕ್ಕೆ ಹೆಚ್ಚು ಹೆಚ್ಚು ಪ್ರಗತಿಯಾಗತೊಡಗಿರುವದು. ಸುರೇಂದ್ರರಾಯರೆ, ಶಿಕ್ಷಣ ವ್ಯವಸಾಯ ಮಾಡುತ್ತಿರುವ ನಿಮಗೆ ನನ್ನ ಮಾತುಗಳು ಯಥಾಸ್ಥಿತವೆಂದು ತೋರುತ್ತಿರಲಿಕ್ಕೆಬೇಕು

‘ಕೃಷ್ಣರಾಯರು ವಿದ್ಯಾಧಿಕಾರಿಗಳಾಗಿ ನಾಲ್ಕು ವರ್ಷಗಳಾದವು. ಈ ಅವಧಿಯಲ್ಲಿ ಅವರು ಸ್ತ್ರೀ ಶಿಕ್ಷಣದ ಪ್ರಸಾರಕ್ಕಾಗಿ ಮನಮುಟ್ಟಿ ಪ್ರಯತ್ನಿಸು

ತ್ತಿರುವರೆಂಬದು ಸುಳ್ಳಲ್ಲ. ಹುಡಿಗೆಯರ ಶಾಲೆಯಲ್ಲಿದ್ದ ಪುರುಷಶಿಕ್ಷಕರು ಕಡಿಮೆಮಾಡಲ್ಪಟ್ಟು, ಅವರ ಸ್ಥಳದಲ್ಲಿ ಎರಡೆರಡು—ಮೂರುಮೂರು ಇಯುತ್ತಿಗನ್ನು ಕಲಿತಂಥ ಸ್ತ್ರೀಯರು ನಿಯಮಿಸಲ್ಪಡತೊಡಗಿರುವರು. ಇಂಥವರಿಂದ ಶಿಕ್ಷಣಕಾರ್ಯವು ಆಗತಕ್ಕಂತೆ ಆಗುವದೋ ಇಲ್ಲವೋ ಎಂಬ ದನ್ನು ಈಗಲೇ ಹೇಳಲಿಕ್ಕೆ ಬರುವದಿಲ್ಲ. ಏನೇ ಇರಲಿ, ಕೃಷ್ಣರಾಯರು ಶಿಕ್ಷಿಕೆಯರನ್ನು ಹುಡುಗೆಯರ ಶಾಲೆಗೇ ಮೇಲೆ ನಿಯಮಿಸತೊಡಗಿರುವದರಿಂದ, ಶಿಕ್ಷಣ ವ್ಯವಸಾಯುವನ್ನು ಮಾಡಲಿಚ್ಛಿಸುವ ಸಾಕ್ಷರ ಸ್ತ್ರೀಗೆ ಸುಲಭವಾಗಿ, ಶಿಕ್ಷಿಕೆಯೆನಿಸಿಕೊಳ್ಳಲಿಕ್ಕೆ ಸುಸಂಧಿಯು ಪ್ರಾಪ್ತವಾಗಿರುವದೆಂದು ನಿರ್ವಿವಾದವಾಗಿ ಹೇಳಬಹುದು ಪವಿತ್ರವಾದ ಶಿಕ್ಷಣ ಸಂಸ್ಥೆಯಲ್ಲಿ, ಅದರಲ್ಲೂ ಸ್ತ್ರೀ ಶಿಕ್ಷಣದ ವಿಭಾಗದಲ್ಲಿ ನೀತಿವಂತರಾದ ಜನರನ್ನೇ ನಿಯಮಿಸುವ ಪದ್ಧತಿಯನ್ನಿಟ್ಟಿದ್ದರೆ, ಹೆಚ್ಚಿಗೆ ಉಪಯುಕ್ತವೆನಿಸುವದು. ನೀತಿ ಶೂನ್ಯರಾದ ಸ್ತ್ರೀ-ಪುರುಷರಿಂದ ರಾಷ್ಟ್ರದ ಭಾವೀ ಪ್ರಜೆಗಳಾದ ವಿದ್ಯಾರ್ಥಿಗಳಿಗೆ ಸುವಿದ್ಯಾ ಲಾಭವಾಗಲಾರದು. ಬರಿಯ ಓದು-ಬರೆಹ ಬಂದ ಮಾತ್ರಕ್ಕೆ ಅವರು ಸುವಿದ್ಯಾವಂತರಾದಂತಾಗಲಿಲ್ಲ. ನನ್ನ ಅಭಿಪ್ರಾಯವು ಸರಿಯಾಗಿರುವದೇ ಹೇಗೆ? ರಾಧಾದೇವಿ, ಅನೀತಿಯ ಸ್ತ್ರೀ-ಪುರುಷರು ಶಿಕ್ಷಕ-ಶಿಕ್ಷಕಿಯರಾಗಲಿಕ್ಕೆ ಪೂರಾ ಅನರ್ಹರೆಂದೇ ನನ್ನ ಅಭಿಪ್ರಾಯವುಂಟು.'

'ನೀತಿವಂತ ಜನರನ್ನು ಶಿಕ್ಷಣಸಂಸ್ಥೆಯಲ್ಲಿ ಸೇರಿಸಿದರೆ ಹಾನಿಯಾಗದೆ ಲಾಭವಾಗುವದೆಂಬದು ನಿಜವು. ಇನ್ನು ಅನೀತಿವಂತ ಜನರನ್ನು ಸೇರಿಸಿದರೆ ಅನುಚಿತವಾಗುವದೆಂದು ನನ್ನ ದೃಷ್ಟಿಗೆ ತೋರುವದಿಲ್ಲ. ಅವರ ವರ್ತನ-ವ್ಯವಹಾರಗಳು ಹೇಗಿದ್ದರೇನು? ಶಾಲೆಗಳಲ್ಲಿ ಶಿಕ್ಷಣ ಕೆಲಸವನ್ನು ಚನ್ನಾಗಿ ಮಾಡುತ್ತಿದ್ದರಾಯಿತು ಅವರು ಮನೆಯಲ್ಲಿ ಪಂಚಮಹಾಪಾತಕ ಮಾಡುತ್ತಿದ್ದರೂ ಅವರಿಂದ ಶಿಕ್ಷಣದ ಕೆಲಸಕ್ಕೆವ್ಯಾಹತಿಯುಂಟಾಗುವದಿಲ್ಲ ಜಗತ್ತಿನಲ್ಲಿ ಎಲ್ಲ ಸ್ತ್ರೀ-ಪುರುಷರು ಸೀತಾರಾಮರೇ ಹೇಗೆ ಆಗುತ್ತಾರೆ? ಸುರೇಂದ್ರರಾಯರೆ, ನಮ್ಮ ವಿದ್ಯಾಧಿಕಾರಿಗಳ ಮತವೂ ಹೀಗೆಯೇ ಇರುವದು.'

'ವಿದ್ಯಾಧಿಕಾರಿಗಳ ಅಭಿಪ್ರಾಯವನ್ನು ಟೀಕಿಸಬೇಕೆಂದಾಗಲಿ, ನಿಮ್ಮ ಮಾತನ್ನು ಅಲ್ಲಗಳೆಯಬೇಕೆಂಬ ಮನಸ್ಸಿನಿಂದಾಗಲಿ ನಾನು ಮಾತನಾಡುವದಿಲ್ಲ. ಶಿಕ್ಷಣ ಸಂಸ್ಥೆಯೊಳಗಿನ ಎಲ್ಲ ಶಿಕ್ಷಕ-ಶಿಕ್ಷಕಿಯರು ಸೀತಾ-ರಾಮರಾಗಿದ್ದರೆ ಅದರಿಂದ ಲಾಭವೇ ಉಂಟು. ಹಾಗೆ ಎಲ್ಲರೂ ಇರುವದು ಅಸಂಭಾವ್ಯವಾಗಿದ್ದರೂ, ರಾಧಾ-ಕೃಷ್ಣರು ಮಾತ್ರ ಆಗಬಾರದು. ಪರಮ ಪವಿತ್ರವಾದ ಶಿಕ್ಷಣ ಸಂಸ್ಥೆಯಲ್ಲಿ ಶುದ್ಧ ಆಚಾರ ವಿಚಾರಗಳ ಜನರೇ ಇರುತ್ತಿದ್ದರೆ, ಭಾವೀ

ಸಂತತಿಯು ಹೆಚ್ಚು ಸಂಪನ್ನವಾಗುವದು. ಶಿಕ್ಷಕ-ಶಿಕ್ಷಕಿಯರು ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಆದರ್ಶಭೂತವಾಗಿರಬೇಕೆಂಬದಿಷ್ಟೇ ಅಲ್ಲ, ಅವರು ಜನಾಂಗಕ್ಕೂ ಆದರ್ಶರಾಗಿರಬೇಕು.'

'ವಿದ್ಯಾರ್ಥಿಗಳನ್ನು ಸಾಕ್ಷರರನ್ನಾಗಿ ಮಾಡಿಬಿಟ್ಟರೆ ಶಿಕ್ಷಕರ ಕರ್ತವ್ಯ ಭಾರವು ಇಳಿದಂತಾಯಿತು. ಧರ್ಮ, ನೀತಿ, ಆಚಾರ, ವಿಚಾರಗಳ ದ್ರಾವಿಡೀ ಪ್ರಾಣಾಯಾಮದ ಉಸಾಬರಿಯನ್ನು ತೆಗೆದುಕೊಂಡು ಮಾಡುವದೇನು?'

'ನೀವು ಇಲ್ಲಿಯೇ ತಪ್ಪುತ್ತಿರುವಿರಿ. ವಿದ್ಯಾಲಯವೆಂದರೆ ಹುಡುಗರನ್ನು ಸಾಕ್ಷರರನ್ನಾಗಿ ಮಾಡುವ ಕಾರ್ಯಾಲಯವಲ್ಲ. ಅವರು ಸುಶೀಲರೂ, ಸುವಿಚಾರಿಗಳೂ ನೀತಿವಂತರೂ ಆಗುವಂತೆ ಪ್ರತಿಯೊಬ್ಬ ಶಿಕ್ಷಕನೂ ಯತ್ನಿಸಲಿಕ್ಕೆಬೇಕು. ಕ್ರಮಿಕ ಪುಸ್ತಕಗಳಲ್ಲಿ ಅನೇಕ ವಿಧದ ನೈತಿಕ ಪಾಠಗಳಿರುವವು. ಆಯಾ ವಿಷಯಗಳು ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಯತ್ನಿಸಲಿಕ್ಕೆಬೇಕು. ಮಾತೃಧರ್ಮ, ಪಿತೃಧರ್ಮ, ಸತೀಧರ್ಮ, ಸೇವಾಧರ್ಮ, ರಾಷ್ಟ್ರಧರ್ಮ, ಪ್ರಜಾಧರ್ಮ, ರಾಜಧರ್ಮ, ಪರೋಪಕಾರ, ಭೂತದಯೆ ಮೊದಲಾದ ವಿಷಯಗಳನ್ನು ಶಿಕ್ಷಕರು ವಿದ್ಯಾರ್ಥಿ-ವಿದ್ಯಾರ್ಥಿನಿಯರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಉಪದೇಶ ಮಾಡಬೇಕಾಗುವದು. ಧರ್ಮನೀತಿಗಳನ್ನು ಉಪದೇಶಿಸಲಿಕ್ಕೆ ಅಧಿಕಾರಿಯಾದ ಶಿಕ್ಷಕನೇ ಬೇಕು. ಅನಧಿಕಾರಿಗಳಾದ ಶಿಕ್ಷಕ-ಶಿಕ್ಷಕಿಯರ ಉಪದೇಶವು ವ್ಯರ್ಥವಾಗುವದು. ದುರಾಚಾರಿಗಳಾದಂತಹ ನಟ-ನಟಿಯರು ನಾಟಕ ಚಿತ್ರಪಟಗಳಲ್ಲಿ ಸೀತಾ-ರಾಮರಂತೆ ಅವಿರ್ಭಾವ ಮಾಡಿದ್ದು ಹೇಗೆ ನಿರರ್ಥಕವೆನಿಸುವದೋ, ಹಾಗೆಯೇ ಅನೀತಿಯ ಶಿಕ್ಷಕ-ಶಿಕ್ಷಕಿಯರ ನೀತಿ ಶಿಕ್ಷಣದ ಅವಸ್ಥೆಯಾಗುವದು. ಆಚರಣಶೀಲರೇ ಉಪದೇಶ ಮಾಡಲಿಕ್ಕೆ ಅಧಿಕಾರಿಗಳು. ಅಂಥವರ ಉಪದೇಶವೇ ಪರಿಣಾಮಕಾರಕವಾಗುವದು. ರಾಧಾದೇವಿಯವರೆ, ನಾನು ಆಡಿದ ಮಾತುಗಳು ಅಯಥಾರ್ಥವಿದ್ದರೆ ಹಾಗೆ ಸ್ಪಷ್ಟವಾಗಿ ಹೇಳಿರಿ.'

'ಸುರೇಂದ್ರರಾಯರೆ, ಈಗ ಕಲಿಕಾಲವಿರುವದು. ನೀವಾಡುವದು ಸತ್ಯಯುಗದ ಸುದ್ದಿಯು. ನೀವು ಅನ್ನುತ್ತಿರುವಂತೆ ಸ್ಥಿತಿಯಿರುತ್ತಿದ್ದರೆ ಬಹಳೇ ಮೇಲು; ಆದರೆ ಸದ್ಯದ ಕಲಿಕಾಲದಲ್ಲಿ ಅಂತಹ ಜನರು ದೊರೆಯುವದು ಕಠಿಣವು. ನಿಮ್ಮ ಮತದಂತೆ ನಡೆದರೆ, ಸರಕಾರಕ್ಕೆ ಬೆರಳೆಣಿಸಿಂದ ಎಣಿಸುವಷ್ಟು ಶಿಕ್ಷಕ-ಶಿಕ್ಷಕಿಯರು ಸಹ ದೊರೆಯಲಿಕ್ಕಿಲ್ಲ. ಶಿಕ್ಷಣಶಾಸ್ತ್ರದಲ್ಲಿ ತಜ್ಞರಾದ ನಮ್ಮ ವಿದ್ಯಾಧಿಕಾರಿಗಳು ಎಲ್ಲ ವಿಧದಿಂದ ಪರ್ಯಾಲೋಚಿಸಿ ನಿರ್ಧರಿ

ಸಿರುವದೇನೆಂದರೆ, ಶಿಕ್ಷಕ-ಶಿಕ್ಷಕಿಯರು ಬೇಕಾದಂತಹ ನೈತಿಕ ಅಪರಾಧಗಳನ್ನು ಮಾಡುತ್ತಿದ್ದರೂ, ಅವರಿಂದ ಶಿಕ್ಷಣವ್ಯವಸಾಯಕ್ಕೆ ವ್ಯಾಹತಿಯುಂಟಾಗುವದಿಲ್ಲ. ಅಧ್ಯಾಪನ ಕಾರ್ಯವನ್ನು ನೆರವೇರಿಸುವ ಕಾರ್ಯಕ್ಷಮತೆಯು ಅವರಲ್ಲಿ ಇದ್ದರೆ ತೀರಿತು. ಹೀಗೆ ಅವರು ನನ್ನೆದುರಿಗೆ ಎಷ್ಟೋ ಸಾರೆ ಅಂದಿರುವರು. ನೀವು ಅನ್ನುತ್ತಿರುವಂತೆ ಶಿಕ್ಷಕ-ಶಿಕ್ಷಕಿಯರನ್ನು ಆರಿಸತೊಡಗಿದರೆ, ವಿಜಯನಗರ ಸಂಸ್ಥಾನದಲ್ಲಿ ಬೆರಳಿನಿಂದ ಎಣಿಸುವಷ್ಟಾದರೂ ಶಾಲೆಗಳು ಉಳಿಯುವವೋ ಇಲ್ಲವೋ ಹೇಳಲಾಗುವದಿಲ್ಲ.”

‘ವಿದ್ಯಾಧಿಕಾರಿಗಳು ಮನಸ್ಸಿನ ಮೇಲೆ ತೆಗೆದುಕೊಂಡರೆ ಇಂದಿಲ್ಲದಿದ್ದರೆ, ಕೆಲವು ವರ್ಷಗಳ ಮೇಲಾದರೂ ಶಿಕ್ಷಣ ಸಂಸ್ಥೆಯು ನೀತಿ-ಧರ್ಮಗಳ ಬೀಡಾಗುವದು.”

‘ನಿಮ್ಮ ಹುಚ್ಚುತನದ ಮಾತಾಡುವಿರಿ. ಶಿಕ್ಷಕರು ರಾಮ-ಸುಧನ್ವ-ಜನಕ ವಶಿಷ್ಠ ಮೊದಲಾದವರಂತೆ ರಾಜರ್ಷಿ-ಮಹರ್ಷಿಗಳಾಗಿಯೂ, ಶಿಕ್ಷಕಿಯರು ಸೀತಾ-ಸಾವಿತ್ರಿ-ಅನುಸೂಯೆ-ತಾರೆಯರಂತೆ ವ್ರತಸ್ಥರಾಗಿಯೂ ಕಾಲಕಳೆಯಬೇಕೆಂಬುದು ಎಲ್ಲಿಯ ಸಿದ್ಧಾಂತವು? ಸರಕಾರದ ಎಲ್ಲ ಸಂಸ್ಥೆಗಳಲ್ಲಿ ಶಿಕ್ಷಣ ಸಂಸ್ಥೆಯೊಂದು. ಮಿಕ್ಕ ಸಂಸ್ಥೆಯೊಳಗಿನ ಅಧಿಕಾರಿಗಳೂ, ಕೆಲಸಗಾರರೂ ಹೇಗೆ ನಡೆಯುತ್ತಿದ್ದರೂ ಪ್ರತ್ಯವಾಯವಿಲ್ಲ; ಆದರೆ ಶಿಕ್ಷಣಸಂಸ್ಥೆಯಲ್ಲಿಯ ಅಧಿಕಾರಿಗಳೂ, ಕೆಲಸಗಾರರೂ ಮಾತ್ರ ವ್ರತಸ್ಥರಾಗಿಯೇ ಇರಬೇಕೇನು? ನೀವೂ ಶಿಕ್ಷಕರಿರುವಿರಿ. ಅನುಭವಸಿದ್ಧವಾದ ಮಾತಾಡಿರಿ. ವಿಲಾಸ-ಸ್ವಚ್ಛಂದತೆಗಳು ಯಾರಿಗೆ ಅಪ್ರಿಯವು? ನಾನು ಹೀಗೆ ಆಡುತ್ತಿರುವೆನೆಂದು ವಿಕಲ್ಪ ಭಾವನೆ ಮಾಡಬೇಡಿರಿ. ಎಲ್ಲ ಜನರು ಸುವಿಚಾರಿಗಳೂ, ಸುಶೀಲರೂ ಇರಬೇಕೆಂಬುದು ನಿಜ; ಆದರೆ ಹಾಗೆ ಆಗುವ ಸಂಭವವಿಲ್ಲ. ಶಾಸ್ತ್ರಗಳೊಳಗಿನ ಮಾತೇ ಬೇರೆ, ನಡೆವಳಿಕೆಯೊಳಗಿನ ರೀತಿಯೇ ಬೇರೆ. ಶಾಸ್ತ್ರಗಳಿಗೂ ನಡಾವಳಿಗೂ ಸಂಬಂಧವೇ ಇಲ್ಲ. ಆಚಾರವು ಹೇಳುವದಕ್ಕೆಯೇ ಸರಿ. ನಮ್ಮ ವಿದ್ಯಾಧಿಕಾರಿಗಳು ಅನುಭವಶಾಲಿಗಳಿರುವರು. ನೀವು ಹೇಳುತ್ತಿರುವಂತೆ ಅವರು ಕೆಲವು ದಿನ ಪ್ರಯತ್ನ ಮಾಡಿದರು; ಆದರೆ ಈ ಕಲಿಕಾಲದಲ್ಲಿ ಅವರ ಪ್ರಯತ್ನಕ್ಕೆ ಯಶವು ಲಭಿಸಲಿಲ್ಲ. ಒಟ್ಟಿಗೆ ಶಿಕ್ಷಣವ್ಯವಸಾಯವು ಸುರಕ್ಷಿತವಾಗಿ ನಡೆದರೆ ಸಾಕೆಂದು ಅವರು ಈಗೀಗ ಅನ್ನುತ್ತಿರುವರು. ವಸ್ತುಸ್ಥಿತಿಯು ಹೀಗಿದ್ದರೂ, ಸದಾಚಾರಿಯೂ ಸುಶೀಲಳೂ ಆದ ಗೃಹಿಣಿಯು ಶಿಕ್ಷಣಕಾರ್ಯ ಮಾಡಲಿಕ್ಕೆ ಸಿದ್ಧಳಾದರೆ, ಅವಳನ್ನು ಆನಂದದಿಂದ ಶಿಕ್ಷಕಿಯ ಸ್ಥಳದ ಮೇಲೆ ನಿಯಮಿಸುವರು. ಸದ್ಯಕ್ಕೆ ಶಿಕ್ಷಣ

ಸಂಸ್ಥೆಯಲ್ಲಿ ಸೇರ್ಪಡೆಯಾದ ಸದ್ಗುಣಿ ಗೃಹಿಣಿಯರನ್ನು ಅವರು ಮನಃಪೂರ್ವಕವಾಗಿ ಕೊಂಡಾಡುತ್ತಿರುವರು. ಸದಾಚಾರಿಗಳಾದ ಶಿಕ್ಷಕರ ವರ್ಣನೆ ಮಾಡಿದ್ದನ್ನು ನಾನು ಎಷ್ಟೋ ಸಾರೆ ಕೇಳಿದ್ದೇನೆ. ಗುಣಗ್ರಾಹಿಗಳು-ತಪ್ಪಲ್ಲ. ಅವರು ನಿಮ್ಮನ್ನು ಸಹ ಎಷ್ಟೋ ಸಾರೆ ಹೊಗಳಿದ್ದಾರೆ.'

'ಇರಬಹುದು' ಎಂದು ಮಹೇಂದ್ರರಾಯನು ನುಡಿದು:—'ರಾಧಾದೇವಿ, ನೀವು ಇಲ್ಲಿಯ ಶಾಲೆಗೆ ಹೊಸದಾಗಿ ಬಂದಿರುವಿರಿ. ಇಷ್ಟು ದಿವಸ ಕಾಲೇಜದಲ್ಲಿ ವಾಸಿಸಿದ್ದರಿಂದ, ನಿಮಗೆ ಕೆಲವು ಗುಪ್ತಸಂಗತಿಗಳು ಗೊತ್ತಿರಲಿಕ್ಕಿಲ್ಲ. ನಮ್ಮ ವಿದ್ಯಾಧಿಕಾರಿಗಳು ಸದಾಚರಣಶೀಲರಲ್ಲೆಂದು ಜನರು ಅನ್ನುತ್ತಿರುವರು. ನೀವು ವ್ಯವಸಾಯ ಭಗಿನಿಯರಿದ್ದ ಮೂಲಕ ನಿಮ್ಮೆದುರಿಗೆ ಹೇಳಿದೆನು. ನೀವು ಈ ಸುದ್ದಿಯನ್ನು ಕಂಡಕಂಡವರೆದುರಿಗೆ ತೆಗೆಯಬೇಡಿರಿ."

'ಛೀ! ನಾನೇಕೆ ತೆಗೆಯಲಿ?' ಎಂದು ರಾಧಾದೇವಿಯು ನುಡಿದು, ಉಪೇಕ್ಷೆಯಿಂದ—'ಏನಾದರೂ ಇದ್ದೀತು ಬಿಡಿರಿ. ಅದರ ಗೊಡವೆ ನಮಗೇಕೆ? ಎಲ್ಲ ಪುರುಷರು ರಾಮ-ಸುಧನ್ವರಂತೆಯೂ ಎಲ್ಲ ಸ್ತ್ರೀಯರು ಸೀತಾ-ಸಾವಿತ್ರಿಯರಂತೆಯೂ ಇರುವದಿಲ್ಲೆಂದು ನಾನು ಆಗಲೆ ಹೇಳಲಿಲ್ಲವೆ? ಗಂಡಸಿನ ಜನ್ಮ. ಅಲ್ಪ ಸ್ವಲ್ಪ ಜಾರಿದರೆ ವ್ರತಕ್ಕೇನೂ ಭಂಗವಿಲ್ಲ. ಸ್ತ್ರೀಯರಂತೆ ಪುರುಷರಿಗೇನೂ ನೀತಿಯ ಬಂಧನವಿಲ್ಲವಷ್ಟೆ?'

'ರಾಧಾದೇವಿ, ನಿಮ್ಮ ಸಿದ್ಧಾಂತಗಳು ವಿಚಿತ್ರವಾಗಿಯೇ ಇರುವವು," ಎಂದು ಸುರೇಂದ್ರರಾಯನು ನಗುತ್ತ ನುಡಿದನು.

'ಸುರೇಂದ್ರರಾಯರೆ, ಈ ಹಾಳು ರಗಳೆಯಲ್ಲಿ ಮುಖ್ಯ ವಿಷಯವನ್ನೇ ಮರೆತಿದ್ದೆನು."

'ರಾಧಾದೇವಿ, ಆ ವಿಷಯವು ಯಾವದು?' ಎಂದು ಸುರೇಂದ್ರರಾಯನು ಉತ್ಕಂಠೆಯಿಂದ ಕೇಳಿದನು.

"ನಿಮ್ಮ ಸಹಧರ್ಮಚಾರಿಣಿಯು ಸುಶಿಕ್ಷಿತರಿರುವರು. ಅವರನ್ನು ಶಿಕ್ಷಣ ವ್ಯವಸಾಯದಲ್ಲಿ ತೊಡಗಿಸಲಿಚ್ಛಿಸುತ್ತಿದ್ದರೆ ಹೇಳಿರಿ. ಇಲ್ಲಿಯ ಹುಡುಗಿಯರ ಎರಡನೆಯ ನಂಬರ ಶಾಲೆಯಲ್ಲಿ ಒಂದು ಸ್ಥಳವು ತೆರವಿರುವದು. ವಿದ್ಯಾಧಿಕಾರಿಗಳು ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವನ್ನು ಕೇಳತಕ್ಕವರಿರುವರು. ನಿಮ್ಮ ಪತ್ನಿಯವರನ್ನು ಭೆಟ್ಟಿಯಾಗಿ, ಅವರಿಗೆ ತಿಳಿಸಿ ಹೇಳತಕ್ಕವರಿದ್ದಾರೆ. ನೀತಿವಂತ ಗೃಹಿಣಿಯರು ದೊರೆತರೆ ಅವರನ್ನು ಅತ್ಯಾನಂದದಿಂದ ಶಿಕ್ಷಕಿಯರನ್ನಾಗಿ ನಿಯಮಿಸುವೆವೆಂದು ಅವರು ಯಾವಾಗಲೂ ಅನ್ನು

ತ್ತಾರೆ. ವಿಜಯನಗರವು ಪಟ್ಟಣವು. ಸಣ್ಣವೇತನದ ಶಿಕ್ಷಕರಿಗೆ ಇಲ್ಲಿ ಚರಿತಾರ್ಥ ನಡೆಯಿಸಬೇಕಾದರೆ ಬಹಳೇ ಕಷ್ಟವಾಗುವದು. ನಿಮ್ಮ ಪತ್ನಿಯವರೂ ಶಿಕ್ಷಣ ವ್ಯವಸಾಯವನ್ನು ಕೈಕೊಂಡರೆ ವಿಹಿತವಾಗುವದಿಲ್ಲವೆ? ಸುಗೃಹಿಣಿಯರು ಶಿಕ್ಷಣಸಂಸ್ಥೆಯಲ್ಲಿ ಕೆಲಸ ಮಾಡಲೊಪ್ಪಿದರೆ, ಅಂದೇ ಸ್ತ್ರೀಯರ ಭಾಗ್ಯೋದಯದ ಕಾಲವು ಪ್ರಾರಂಭಿಸುವದೆಂದು ನಮ್ಮ ಅಧಿಕಾರಿಗಳು ಮೇಲಿಂದ ಮೇಲೆ ಅನ್ನುತ್ತಿರುವರು. ನೀವು ಆನಂದದಿಂದ ಈ ಕೆಲಸ ಮಾಡಿರಿ. ನಾನಾದರೂ ನಿಮ್ಮ ಪತ್ನಿಯವರಾದ ಮಹಾದೇವಿಯವರನ್ನು ಕಂಡು ಎಲ್ಲ ವಿಷಯಗಳನ್ನು ತಿಳಿಸುವೆನು. ಒಂದೆರಡು ದಿನಗಳಲ್ಲಿ ವಿದ್ಯಾಧಿಕಾರಿಗಳೂ ನಿಮ್ಮಲ್ಲಿಗೆ ಬರಲಿರುವರು. ನೀವು ಅವರ ಹೇಳಿಕೆಯಂತೆ ನಡೆಯಲಿಕ್ಕೆ ಒಪ್ಪಿರಿ; ಅಂದರೆ ನಿಮಗೆ ಸುಖವಾಗುವದು.'

'ರಾಧಾದೇವಿ, ನೀವು ಹೇಳಿದಂತೆ ಸುಗೃಹಿಣಿಯರು ಶಿಕ್ಷಣವ್ಯವಸಾಯದಲ್ಲಿ ಸೇರಿದರೆ ಸ್ತ್ರೀ ಶಿಕ್ಷಣದ ಕಾರ್ಯವು ಚನ್ನಾಗಿ ನಡೆಯುವದೆಂಬದರಲ್ಲಿ ಸಂದೇಹವಿಲ್ಲ. ಶಿಕ್ಷಣಸಂಸ್ಥೆಯಲ್ಲಿ ಕೆಲಸ ಮಾಡುವದೆಂದರೆ, ಸ್ವ-ಪರ ಹಿತಗಳನ್ನು ಸಾಧಿಸುವಂತಹ ಮಾತಾಗಿದೆ; ಆದರೆ ಹಾಗೆ ಪರಿಸ್ಥಿತಿಯಿಲ್ಲ. ಹುಡುಗೆಯರ ಶಾಲೆಯಲ್ಲಿ ಪುರುಷ ಶಿಕ್ಷಕರಿರುವರು ವಿದ್ಯಾಧಿಕಾರಿಗಳೂ ಪುರುಷರೇ. ಸದ್ಯದ ಅನೀತಿವೃದ್ಧಿಯ ಸ್ಥಿತಿಯಲ್ಲಿ ಸುಗೃಹಿಣಿಯರು ಶಿಕ್ಷಕಿಯರಾಗಬಾರದೆಂದೇ ಅನಿಸುತ್ತದೆ.'

'ನೀವು ಹೀಗೆ ವಿಕಲ್ಪ ಭಾವಿಸಬೇಡಿರಿ. ಸದ್ಧರ್ಮಿಗಳಿಗೆ ಎಲ್ಲಿಯೂ ಭಯವಿಲ್ಲ. ಅನೀತಿಗೆ ಎಡೆಯಿದ್ದಲ್ಲಿ ಅನೀತಿಗಳು ನಡೆಯುವವು. ಸುಶೀಲೆಯರ ಕಡೆಗೆ ಕಣ್ಣೆತ್ತಿ ನೋಡುವ ಎದೆಯು ಯಾವನದು? ಎರಡನೆಯ ನಂಬರ ಶಾಲೆಯಲ್ಲಿ ಪುರುಷಶಿಕ್ಷಕರಾರೂ ಇಲ್ಲ. ವಿದ್ಯಾಧಿಕಾರಿಗಳು ಹೇಗಿದ್ದರೂ ಶಿಕ್ಷಕಿಯರಿಗೇನು? ವರ್ಷಕ್ಕೆ ಒಂದೆರಡುಸಾರೆ ಪರೀಕ್ಷೆ ತೆಗೆದುಕೊಂಡು ಹೋಗುವವರಿಗೆ, ಶಿಕ್ಷಕಿಯರು ಅಂಜುವ ಕಾರಣವೇ ಇಲ್ಲ. ನೀವು ಅನ್ನುತ್ತಿರುವಂತೆ ನಮ್ಮ ಅಧಿಕಾರಿಗಳಲ್ಲಿ ದೋಷಾಂಶವೇನಾದರೂ ಇದ್ದರೆ ಇರಬಹುದು; ಆದರೆ ಸ್ಥಾನಮಾನಗಳನ್ನು ನೋಡದಂತಹ ಅಂಧರು ಅವರಿಲ್ಲವೆಂದು ನಾನು ಕೈಯೆತ್ತಿ ಹೇಳುವೆನು. ಜಗತ್ತಿನಲ್ಲಿ ಎಲ್ಲರೂ ಧರ್ಮದ ಮೂರ್ತಿಗಳಿರುವದಿಲ್ಲ. ಎಷ್ಟಾದರೂ ಉಪ್ಪುಂಡ ದೇಹ. ಸುರೇಂದ್ರರಾಯರೆ, ನೀವು ಇಲ್ಲದ ಕಲ್ಪನೆಗಳನ್ನು ತಾರದೆ, ನಿಮ್ಮ ಪತ್ನಿಯವರನ್ನು ಶಿಕ್ಷಣವ್ಯವಸಾಯದಲ್ಲಿ ತೊಡಗಿಸಿರಿ. ಸ್ತ್ರೀ ಶಿಕ್ಷಣದಂತಹ ಪವಿತ್ರ ಕಾರ್ಯದಲ್ಲಿ ತೊಡಗಿ, ಪವಿತ್ರರಾದ ಗೃಹಿಣಿಯರು ಸಮಾಜ ಸೇವೆಯನ್ನು ಮಾಡಲಿಕ್ಕೆ ಬೇಕು.

ರಮಾದೇವಿಯರು ಉಚ್ಚ ಶಿಕ್ಷಣವನ್ನು ಹೊಂದಿರದಿದ್ದರೂ ಪ್ರಾಥಮಿಕ ಶಿಕ್ಷಣದ ನಾಲ್ಕೈದು ಇಯತ್ತೆಗಳನ್ನು ಕಲಿತಿರುವರು. ಅವರ ಇಚ್ಛೆಯಿದ್ದರೆ ಎರಡ-ಮೂರು ವರ್ಷ ಟ್ರೇನಿಂಗ ಶಿಕ್ಷಣವನ್ನು ಹೊಂದಲಿಕ್ಕೆ ಸರಕಾರದಿಂದ ಒಪ್ಪಿಗೆಯೂ ದೊರೆಯುವದು. ಟ್ರೇನಿಂಗ ಶಿಕ್ಷಣ ಹೊಂದಿದೊಡನೆಯೆ ವೇತನವು ಹೆಚ್ಚಾಗುವದಲ್ಲದೆ, ಮುಖ್ಯಶಿಕ್ಷಕಿಯ ಕೆಲಸವೂ ದೊರೆಯುವದು. ನಾನು ಮೊದಲು ಉಪಶಿಕ್ಷಕಿಯಾಗಿದ್ದೆನು; ವೇತನವೂ ಅಲ್ಪವಾಗಿತ್ತು. ವಿದ್ಯಾಧಿಕಾರಿಗಳ ಅನುಗ್ರಹದಿಂದ ಮೂರು ವರ್ಷ ಟ್ರೇನಿಂಗ ಹೊಂದಿ, ಕೇಂದ್ರದ ಶಾಲೆಯ ಮುಖ್ಯಾಧ್ಯಾಪಕಳಾದೆನು. ವೇತನವೂ ಸಾಕಷ್ಟು ದೊರೆಯತೊಡಗಿರುವದು. ನಿಮ್ಮ ಪತ್ನಿಯವರನ್ನು ಶಿಕ್ಷಣಸಂಸ್ಥೆಯಲ್ಲಿ ತೊಡಗಿಸಲಿಕ್ಕೆ ಈಗ ಒಳ್ಳೇ ಸಂಧಿಯಿರುವದು. ಈ ಸಮಯವನ್ನು ವ್ಯರ್ಥಗೊಳಿಸಬೇಡಿರಿ.'

'ರಾಧಾದೇವಿ, ಸದ್ಯಕ್ಕೆ ನಾನು ಈ ವಿಷಯದಲ್ಲಿ ಯಾವ ವಿಧದ ಅಭಿಪ್ರಾಯವನ್ನೂ ವ್ಯಕ್ತಪಡಿಸಲಾರೆನು. ವಿಚಾರ ಮಾಡಿ ಯಾವದೊಂದನ್ನು ನಿಮಗೆ ಹೇಳುವೆನು.'

'ಅಡ್ಡಿಯಿಲ್ಲ, ವಿಚಾರಮಾಡಿಯೇ ತಿಳಿಸಿರಿ. ನೀವು ರಮಾದೇವಿಯವರಿಗೆ ಚನ್ನಾಗಿ ತಿಳಿಸಿ ಹೇಳಿರಿ. ನಾನೂ ಒಮ್ಮೆ ಅವರನ್ನು ಕಾಣುವೆನು. ಅವರು ಸನಾತನೀ ಪಂಥದ ಮಹಿಳೆಯರು. ಸುಧಾರಣೆಯ ಗಂಧವೂ ಅವರನ್ನು ಸೋಂಕಿಲ್ಲ. ಆದಕ್ಕಾಗಿಯೇ ಅವರ ಮನಸ್ಸು ಒಡಂಬಡುವಂತೆ ತಿಳಿಸಿ ಹೇಳಬೇಕಾಗುವದು. ಬರುತ್ತೇನೆ, ಅಪ್ಪಣೆ ಕೊಡಿರಿ.' ಎಂದು ನುಡಿದು, ರಾಧಾದೇವಿಯು ಸುರೇಂದ್ರರಾಯನಿಗೆ ನಮಸ್ಕಾರ ಮಾಡಿ - 'ಅನುವು ದೊರೆತರೆ ಸಂಧ್ಯಾಕಾಲಕ್ಕೆ ಇತ್ತ ಕಡೆಗೇ ತಿರುಗಾಡಲಿಕ್ಕೆ ಬರುತ್ತೇನೆ.'

'ಒಳ್ಳೇದು!' ಎಂದು ಸುರೇಂದ್ರರಾಯನು ನುಡಿದು, ಕೈಜೋಡಿಸಿ— 'ಹೋಗಿ ಬನ್ನಿರಿ; ನಮಸ್ಕಾರ!'

---

## ವಿದ್ಯಾಸಂಸ್ಥೆಯ ವಿಘಾತ.

ಸುರೇಂದ್ರರಾಯನು ವಿಜಯಿನಗರದ ಗಂಡು ಹುಡುಗರ ಶಾಲೆಯಲ್ಲಿ ಉಪಶಿಕ್ಷಕನಾಗಿದ್ದನು. ಅವನಿಗೆ ತಿಂಗಳೊಂದಕ್ಕೆ ಇಪ್ಪತ್ತೈದು ರೂಪಾಯಿಗಳ ವೇತನವು ದೊರೆಯುತ್ತಿತ್ತು. ವಿಜಯನಗರದಂತಹ ಪಟ್ಟಣದಲ್ಲಿ ಅವನಿಗೆ ದೊರೆಯುವ ಸಣ್ಣ ವೇತನದಿಂದ ಸಂಸಾರರಥವು ಸರಳವಾಗಿ ಸಾಗುವದು

ದುಸ್ತರವಾಗಿತ್ತು. ಅವನ ಸುಗೃಹಿಣಿಯಾದ ರಮಾದೇವಿಯು ಬಡವರ ಮನೆಯಲ್ಲಿ ಹುಟ್ಟಿ ಬೆಳೆದು, ಬಡವರ ಮನೆಯ ಒಡತಿಯಾಗಿದ್ದುದರಿಂದ, ಹಾಗೆ ದೊರೆಯುವ ಅಲ್ಪವೇತನದಲ್ಲೇ ಜಾಣತನದಿಂದ ಚರಿತಾರ್ಥ ನಡೆಯಿ ಸುತ್ತಿದ್ದಳು. ಸುರೇಂದ್ರರಾಯನ ವ ನೆತನವೆಂದರೆ ಅದೇನೂ ದೊಡ್ಡದಿದ್ದಿಲ್ಲ. ಗಂಡ-ಹೆಂಡಿರಿಬ್ಬರೇ ಮನೆಯುಳ್ಳದ್ದಾರು ಪಟ್ಟಣದ ಸ್ಥಳದಲ್ಲಿ ಪತಿಗೆ ದೊರೆಯುವ ಅಲ್ಪ ವೇತನದಿಂದ ಇಬ್ಬರ ಚರಿತಾರ್ಥವು ನಡೆಯುವದು ಕಠಿಣ ವೆನಿಸಹತ್ತಿದ್ದರಿಂದ, ಧನೋತ್ಪಾದನೆಯ ಯಾವದೊಂದು ಉದ್ಯೋಗವನ್ನು ಕೈಕೊಳ್ಳಬೇಕೆಂದು ರಮಾದೇವಿಯ ವಿಚಾರವಿತ್ತು. ಅವಳು ನಾಲ್ಕೈದು ಇಯತ್ತೆಗಳ ವರೆಗೆ ಕನ್ನಡವಿದ್ಯಾಭ್ಯಾಸ ಮಾಡಿದ್ದಳು. ಹೆಚ್ಚಿನ ವಿದ್ಯಾಭ್ಯಾಸ ವಾಗದ್ದರಿಂದ, ಹುಡುಗೆಯರ ಶಾಲೆಯಲ್ಲಿ ಶಿಕ್ಷಕಿಯ ಸ್ಥಳವು ದೊರೆಯುವ ದೆಂಬ ಆಶೆಯು ಅವಳಿಗಿದ್ದಿಲ್ಲ. ಅವಳಿಗೆ ತಕ್ಕಮಟ್ಟಿಗೆ ಹೊಲಿಗೆಯ ಕೆಲಸ, ರಂಗವಲ್ಲಿ, ಕಸೂದೆ ಮೊದಲಾದ ಕಲೆಗಳು ಗೊತ್ತಿದ್ದವು. ಈ ಕೈಗೆಲಸಗಳನ್ನು ಹುಡುಗೆಯರಿಗೆ ಕಲಿಸಿ, ಧನೋತ್ಪಾದನೆ ಮಾಡಿ, ಪತಿಗೆ ನೆರವಾಗಬೇಕೆಂದು ಅವಳು ಪ್ರಯತ್ನಿಸಹತ್ತಿದ್ದಳು. ಈಗಾಗಲೆ ಅವಳಲ್ಲಿ ನಾಲ್ಕೈದು ಜನ ಹುಡುಗಿಯರು ಆ ಶಿಕ್ಷಣ ಹೊಂದಹತ್ತಿದ್ದರು.

ಸ್ಕೂಲ ಮಿಸ್ಟ್ರೆಸ್ ರಾಧಾದೇವಿಯು ಇದೇ ವರ್ಷ ಕಾಲೇಜದಿಂದ ಹೊರಬಿದ್ದವಳು. ಅವಳು ಮೂರುವರ್ಷ ಟ್ರೆಸಿಂಗ ಪಡೆದದ್ದರಿಂದ ವಿಜಯ ನಗರದ ಹೆಣ್ಣುಹುಡುಗೆಯರ ಒಂದನೇ ನಂಬರ ಶಾಲೆಯಲ್ಲಿ ಮುಖ್ಯಾಧ್ಯಾಪ ಕಳಾಗಿ ನಿಯಮಿಸಲ್ಪಟ್ಟಿದ್ದಳು. ಅವಳಿಗೆ ಸುರೇಂದ್ರರಾಯನ ಹಾಗು ಅವನ ಪತ್ನಿಯ ಪರಿಚಯವು ಚನ್ನಾಗಿತ್ತು. ರಮಾದೇವಿಯಂತಹ ಯುವತಿ ಯನ್ನು ಶಿಕ್ಷಣ ವ್ಯವಸಾಯದಲ್ಲಿ ತೊಡಗಿಸಿದರೆ, ತನ್ನ ಪಾಲಿಗೆ ಕೀರ್ತಿ ಬರುವದೆಂದು ಅವಳ ಬಲವಾದ ಗ್ರಹಿಕೆಯಿತ್ತು. ಅವಳು ವಿದ್ಯಾಧಿಕಾರಿ ಗಳಾದ ಕೃಷ್ಣರಾಯರೆದುರಿಗೆ ಈ ಪ್ರಸ್ತಾಪವನ್ನು ತೆಗೆದಳು. ಕೃಷ್ಣರಾಯರು ಈ ವಿಷಯದಲ್ಲಿ ಅತ್ಯಂತ ಉದಾರಿಗಳಾಗಿದ್ದರು. ಚಲುವೆಯರಾದ ತರುಣಿ ಸುಗುಣೆಯರು ವಿದ್ಯಾ ಸಂಸ್ಥೆಯಲ್ಲಿ ಸೇರ್ಪಡೆಯಾದರೆ, ಅದೊಂದು ಮಹ ದ್ಭಾಗ್ಯವೆಂದೇ ಅವರು ತಿಳಿಯುತ್ತಿದ್ದರು. ರಮಾದೇವಿಯು ನಾಲ್ಕೈದು ಇಯತ್ತೆಗಳನ್ನಷ್ಟೇ ಕಲಿತಿದ್ದರೂ, ಶಿಕ್ಷಕಿಯ ಸ್ಥಳದಲ್ಲಿ ನಿಯಮಿಸುವೆವೆಂದು ಅವರು ರಾಧಾದೇವಿಗೆ ತಿಳಿಸಿದ್ದರು.

ರಾಧಾದೇವಿಯು ಸುರೇಂದ್ರರಾಯನಿಗೆ ಈ ಸಂಗತಿಯನ್ನು ತಿಳಿಸಿ ದ್ದಲ್ಲದೆ, ರಮಾದೇವಿಯನ್ನು ಕಂಡು ಶಿಕ್ಷಕಿಯ ಕೆಲಸ ಮಾಡಲಿಕ್ಕೆ ಒಪ್ಪಿ

ಬೇಕೆಂದು ಒತ್ತಾಯ ಪಡಿಸಹತ್ತಿದ್ದಳು. ಸ್ವಲ್ಪ ಮಟ್ಟಿಗೆ ವಿದ್ಯಾಭ್ಯಾಸ ಮಾಡಿದ ತನ್ನಿಂದ ಶಿಕ್ಷಣ ವ್ಯವಸಾಯವು ಸಮಾಧಾನಕಾರಕವಾಗಿ ಜರುಗುವದೋ-ಇಲ್ಲವೋ ಎಂಬ ಭಯವು ರಮಾದೇವಿಗೆ ಬಾಧಿಸತೊಡಗಿದ್ದರಿಂದ, ಅವಳು ರಾಧಾದೇವಿಗೆ ಯಾವುದನ್ನೂ ನಿಷ್ಕರ್ಷೆಯಾಗಿ ಹೇಳಲಾರದವಳಾಗಿದ್ದಳು. ಅವಳಿಗೆ ಇನ್ನೊಂದು ವಿಷಯವು ಭಯಪ್ರದವಾಗಿ ಕಾಣುತ್ತಿತ್ತು. ವಿದ್ಯಾಧಿಕಾರಿಗಳು ಪುರುಷರಿದ್ದುದರಿಂದ ಅವರ ಕೈ ಕೆಳಗೆ ಕೆಲಸ ಮಾಡಲಿಕ್ಕೆ ಅವಳ ಮನಸ್ಸು ಒಪ್ಪದಾಗಿತ್ತು. ವಿದ್ಯಾಸಂಸ್ಥೆಯ ಮುಖ್ಯಾಧಿಕಾರಿಗಳಾದ ಕೃಷ್ಣರಾಯರ ವರ್ತನದ ಬಗ್ಗೆ ಜನರಲ್ಲಿ ಆಕ್ಷೇಪಣೆ ಹುಟ್ಟಿದ್ದನ್ನೂ ಅವಳು ಕೇಳಿದ್ದಳು. ಸಂಸಾರದ ಕಡೆಗೆ ಲಕ್ಷ್ಯಗೊಟ್ಟರೆ, ಕೆಲಸವನ್ನು ಕೈಕೊಳ್ಳಬೇಕೆಂದು ಮನಸ್ಸಾಗುತ್ತಿತ್ತು. ಇನ್ನುಳಿದ ವಿಷಯಗಳ ಕಡೆಗೆ ಲಕ್ಷ್ಯಗೊಟ್ಟರೆ, ಮನೆಯಲ್ಲಿ ಉಪವಾಸವಿದ್ದರೂ ಚಿಂತೆಯಿಲ್ಲ; ನೀತಿಶೂನ್ಯರ ಕೈಯಲ್ಲಿ ಕೆಲಸ ಮಾಡಬಾರದೆಂಬ ವಿಚಾರವು ಅವಳಲ್ಲಿ ಹುಟ್ಟುತ್ತಿತ್ತು. ರಾಧಾದೇವಿಯು ವಾಕ್ಚತುರಳೂ ಕುಶಲಳೂ ಇದ್ದುದರಿಂದ, ಅವಳ ಮನಸ್ಸಿನಲ್ಲಿ ಹುಟ್ಟಿದ ಶಂಕೆ-ಕುಶಂಕೆಗಳನ್ನು ದೂರಮಾಡಲಿಕ್ಕೆ ಹೆಣಗಾಡಿ, ತಕ್ಕಮಟ್ಟಿಗಾದರೂ ಯಶಸ್ಸು ಸಂಪಾದನೆ ಮಾಡಿದ್ದಳು.

ಅಂದು ರವಿವಾರವಿದ್ದುದರಿಂದ ಸುರೇಂದ್ರರಾಯನು ಮನೆಯಲ್ಲಿಯೇ ಇದ್ದನು. ಶಿಕ್ಷಣವ್ಯವಸಾಯವನ್ನು ಕೈಕೊಳ್ಳಲಿಕ್ಕೆ ತನ್ನ ಪತ್ನಿಯು ಒಪ್ಪುವಳೋ-ಹೇಗೋ ತಿಳಿದುಕೊಳ್ಳಬೇಕೆಂದು ಆವಳನ್ನು ಕೂಗಿದನು. ರಮಾದೇವಿಯು ಪತಿಯು ಕುಳಿತುಕೊಂಡಿದ್ದ ಕೋಣೆಗೆ ಬಂದಳು ಆಗ ಸುರೇಂದ್ರರಾಯನು—'ರಾಧಾದೇವಿಯವರು ನಿನ್ನೆದುರಿಗೆ ಒಂದು ವಿಷಯಕ್ಕಾಗಿ ಪ್ರಸ್ತಾಪ ತೆಗೆದಿದ್ದರೇನು?'

'ಅವರು ನನ್ನೆದುರಿಗೆ ಎಷ್ಟೋ ವಿಷಯಗಳನ್ನು ಹೇಳುತ್ತಿರುವರು. ಕಾಲೇಜದಲ್ಲಿದ್ದಾಗ ತಾವು ಹೇಗೆ ಸ್ವಚ್ಛಂದಪ್ರವೃತ್ತಿಯಿಂದ ಕಾಲ ಕಳೆದೆವು; ಇಲ್ಲಿಗೆ ಬಂದ ಬಳಿಕ ದಯಾಳುಗಳಾದ ವಿದ್ಯಾಧಿಕಾರಿಗಳಿಂದ ಯಾವ ಯಾವ ಸೌಕರ್ಯಗಳು ಒದಗಿಸಲ್ಪಟ್ಟವು; ಒಂದೇ ವರ್ಷದಲ್ಲಿ ಎರಡು ಸಾರೆ ಐದೈದು ರೂಪಾಯಿಗಳಂತೆ ಸಂಬಳ ಹೆಚ್ಚಾಗಿ, ಅವರಿಂದ ಹೇಗೆ ಹೇಗೆ ಉತ್ತೇಜನವು ದೊರೆಯಹತ್ತಿದೆ; ವ್ಯವಸಾಯವನ್ನು ಕೈಕೊಳ್ಳುವ ಪೂರ್ವದಲ್ಲಿ ತನ್ನ ಸ್ಥಿತಿಯು ಹೇಗಿತ್ತು; ಈಗ ಹೇಗಿದೆ; ಮಹಾನುಭಾವರಾದ ವಿದ್ಯಾಧಿಕಾರಿಗಳು ಅಡಿಗೆ-ನೀರುಗಳ ಕೆಲಸ ಮಾಡುತ್ತಿದ್ದ ತನ್ನ ಪತಿಯನ್ನು ಶಿಕ್ಷಣ ವ್ಯವಸಾಯಕ್ಕೆ ತೊಡಗಿಸಿ, ಹೇಗೆ ತಮ್ಮನ್ನು ಚಿರ ಋಣಿಗಳನ್ನಾಗಿ ಮಾಡಿಕೊಂಡಿರು

ವರು ಮೊದಮೊದ ವಿಷಯುಗಳನ್ನು ಅವರು ಸವಿಸ್ತರವಾಗಿ ಬಣ್ಣಿಸಿರುವರು', ಎಂದು ರಾಧಾದೇವಿಯು ಹೇಳಿ, ಹಸನ್ಮುಖಿಯಾಗಿ ಪತಿಯ ಮುಖವನ್ನು ನಿರೀಕ್ಷಿಸತೊಡಗಿದಳು.

'ನೀನು ಇಷ್ಟು ಮಾತು ಹೇಳಿದರೂ ಅವರ ಬಾಯಿಯಿಂದ ಹೊರಟ ಒಂದು ಮುಖ್ಯ ವಿಷಯುವನ್ನೇ ತಿಳಿಸಲಿಲ್ಲವಲ್ಲ?'

'ತಿಳಿಸದಿರಲಿಕ್ಕೇನಾಗಿದೆ? ಶಿಕ್ಷಣ ವ್ಯವಸಾಯವನ್ನು ಕೈಕೊಳ್ಳ ಬೇಕೆಂದು ಅವರು ನನಗೆ ಹೇಳಿದರು. ನಾಲ್ಕೈದು ಇಯತ್ತೆ ಕಲಿತವಳಾದ ನನ್ನನ್ನು ಶಿಕ್ಷಕಿಯ ಕೆಲಸಕ್ಕೆ ತೆಗೆದುಕೊಳ್ಳುವದಿಲ್ಲವೆಂದು ನನ್ನ ತಿಳುವಳಿಕೆ ಯಿತ್ತು. ರಾಧಾದೇವಿಯರ ಮಾತು ಕೇಳಲಾಗಿ, ಓದು-ಬರೆಹ ಬಲ್ಲಂತಹ ಮಹಿಳೆಯರಿಗೆ ಶಿಕ್ಷಣವ್ಯವಸಾಯುವನ್ನು ಕೈಕೊಳ್ಳಲಿಕ್ಕೆ ಸೌಕರ್ಯವಿರುವ ದೆಂಬದು ಗೊತ್ತಾಯಿತು. ಸದ್ಯದ ವಿದ್ಯಾಧಿಕಾರಿಗಳು ಸ್ತ್ರೀಶಿಕ್ಷಣದ ಪ್ರಸಾರ ಮಾಡಲಿಕ್ಕೆ ಟೊಂಕ ಕಟ್ಟಿರುವರಂತೆ. ಸಂಸ್ಥಾನದೊಳಗಿನ ಎಲ್ಲ ಬಾಲಿಕಾ ಶಾಲೆಗಳಲ್ಲಿ ಶಿಕ್ಷಕಿಯರನ್ನೇ ನಿಯಮಿಸತಕ್ಕವರಿರುವರಂತೆ. ಅಂತೆಯೇ ಅಲ್ಪ ಸ್ವಲ್ಪ ಕಲಿತ ಸ್ತ್ರೀಯರಿಗೆ ಸಹ ಕೆಲಸ ದೊರೆಯುವ ಸಂಭವಿರುವದೆಂದು ಅವರು ಹೇಳಿದರು.'

'ನೀನು ಶಿಕ್ಷಣವ್ಯವಸಾಯವನ್ನು ಮಾಡಲೊಪ್ಪುವೆಯಾ?'

'ನಾನೂ 'ದುಡಿಯತೊಡಗಿದರೆ ನಮ್ಮ ಬಡತನದ ಸಂಸಾರದಲ್ಲಿ ನನ್ನಿಂದ ಅಲ್ಪವುಟ್ಟಿಗಾದರೂ ನೆರವು ದೊರೆತಂತಾಗಿ, ನಿಮಗೆ ಸ್ವಲ್ಪ ಹಗುರೆನಿಸಬಹುದು. ಅದರಲ್ಲಿ ನಾವು ಪಟ್ಟಣವಾಸಿಗಳಾಗಿರುವದರಿಂದ, ಅಲ್ಪ ವೇತನದಿಂದ ಚರಿತಾರ್ಥ ನಡೆಯುವದು ಕಠಿಣವಿದೆ. ಶಿಕ್ಷಣವ್ಯವಸಾಯ ವನ್ನು ಕೈಕೊಂಡರೆ ಲೋಕಸೇವೆಯೂ ಘಟಿಸುವದು. ವಿದ್ಯಾದಾನವು ಲೋಕಸೇವೆಯ ಉತ್ತಮವಾದ ಸಾಧನವು. ನೀವಾದರೂ ಇದೇ ಉದ್ದೇಶ ದಿಂದ ವಿದ್ಯಾದಾನ ವ್ಯವಸಾಯ ಕೈಕೊಂಡಿರುತ್ತೀರಿ. ಪುರುಷಶಿಕ್ಷಣಕ್ಕಿಂತ ಸ್ತ್ರೀಶಿಕ್ಷಣವು ಮಹತ್ವದ್ದು. ಸ್ತ್ರೀಯರು ಸುಶಿಕ್ಷಿತರಿದ್ದರೆ ತಮ್ಮ ಸಂತತಿಗೆ ಉತ್ತಮವಾದ ಗೃಹಶಿಕ್ಷಣವನ್ನು ಕೊಟ್ಟು ಅದನ್ನು ವಿದ್ಯಾವಿನಯ ಸದ್ಗುಣ ಸಂಪನ್ನರಾಗಿ ಮಾಡುವರು ಸ್ತ್ರೀಯರು ಸುಶಿಕ್ಷಿತೆಯರಿರದಿದ್ದರೆ ಅವರಿಗೆ ಸುಗೃಹಿಣಿ, ಸುಮಾತೆ ಮೊದಲಾದ ಪದವಿಗಳು ಬರಲಾರವು. ಸುಗೃಹಿಣಿಯು ತನ್ನ ಸಂಸಾರವನ್ನು ಅಂದಗೊಳಿಸುವಳು. ಅದನ್ನು ಇಂದ್ರನ ನಂದನವನ ವನ್ನಾಗಿ ಮಾಡುವಳು. ಸುಮಾತೆಯು ತನ್ನ ಮಕ್ಕಳನ್ನು ಉತ್ತಮ ನಾಗ ರಿಕರನ್ನಾಗಿ ಮಾಡುವಳು. ಬಾಲಕರಿಗೆ ವಿದ್ಯಾದಾನ ಮಾಡುವದು ಹೇಗೆ

ಲೋಕಸೇವೆಯೆನಿಸಿಕೊಳ್ಳುವದೋ, ಹಾಗೆಯೇ ಕಿಂಬಹುನಾ, ಅದಕ್ಕಿಂತಲೂ ಹೆಚ್ಚಾದ ಲೋಕಸೇವೆಯು ಬಾಲಕಿಯರಿಗೆ ವಿದ್ಯಾದಾನ ಮಾಡುವದರಿಂದ ಘಟಿಸುವದು. ವಿದ್ಯಾಧಿಕಾರಿಗಳ ಔದಾರ್ಯದಿಂದಲೂ, ರಾಧಾದೇವಿಯವರ ಪ್ರಯತ್ನದಿಂದಲೂ ಲೋಕಸೇವೆಯು ನನ್ನಿಂದ ಘಟಿಸುವಂತಹ ಸುಯೋಗವು ಪ್ರಾಪ್ತವಾಗಿದೆ. ಸದ್ಯಕ್ಕೆ ನಾನು ಕೈಕೊಳ್ಳುವ ವ್ಯವಸಾಯದಲ್ಲಿ ಕೇವಲ ಪರಹಿತವೇ ಇರುವದಿಲ್ಲ; ಪರಹಿತದೊಡನೆ ಸ್ವಹಿತವೂ ಸಾಧಿಸುವದು. ನಾನೂ ಉದ್ಯೋಗರತಳಾದರೆ ಸಂಸಾರಶಕಟ ಸಾಗಿಸುವಾಗ ನಿಮಗೊದಗುವ ತೊಂದರೆಯು ಕಡಿಮೆಯಾಗಬಹುದು.'

'ಒಟ್ಟಿನ ಮೇಲೆ ಶಿಕ್ಷಣವ್ಯವಸಾಯವನ್ನು ಕೈಕೊಳ್ಳಲಿಕ್ಕೆ ನೀನು ಸಿದ್ಧಳಾಗಿರುವೆಯೆಂದಂತಾಯಿತು.'

'ತಮ್ಮ ಆಜ್ಞೆಯಾದರೆ ಕೈಕೊಳ್ಳುವೆನು. ಯಾಕೆ? ಆ ವ್ಯವಸಾಯವನ್ನು ಕೈಕೊಳ್ಳಬಾರದೆಂದು ನಿಮ್ಮ ಅಭಿಪ್ರಾಯವಿರುವದೇನು?' ಎಂದು ರಮಾದೇವಿಯು ಉತ್ಕಂಠಿತಳಾಗಿ ಕೇಳಿದಳು.

'ಈ ವಿಷಯದಲ್ಲಿ ಸ್ಪಷ್ಟವಾದ ಅಭಿಪ್ರಾಯವೀಯಲಿಕ್ಕೆ ನನ್ನ ಬುದ್ಧಿ ಸಾಲದಾಗಿದೆ.'

'ಇದರಲ್ಲೇನು ಅಂತಹ ಗಹನ ವಿಚಾರವಿದೆ? ಶಿಕ್ಷಣದಾನವು ಲೋಕಸೇವೆಯ ಉತ್ತಮವಾದ ಸಾಧನವೆಂದು ನೀವು ಎಷ್ಟೋ ಸಾರೆ ಅಂದಿರುವಿರಿ. ನೀವಾದರೂ ಮಿಕ್ಕ ವ್ಯವಸಾಯಗಳನ್ನು ಬಿಟ್ಟು ಶಿಕ್ಷಣವ್ಯವಸಾಯವನ್ನು ಕೈಕೊಂಡದ್ದರ ಕಾರಣವೂ ಇದೇ ಇರುವದು. ನನ್ನನ್ನು ದುಡಿಯಲಿಕ್ಕೆ ಹಚ್ಚಬಾರದೆಂದು ನಿಮ್ಮ ವಿಚಾರವಿದ್ದರೆ ಮಾತ್ರ ಹೇಳಿರಿ.'

'ನೀನು ದುಡಿಯಬಾರದೆಂದೂ, ಲೋಕಸೇವೆಯಲ್ಲಿ ತೊಡಗಬಾರದೆಂದೂ ನನ್ನ ಮತವಿಲ್ಲ. ಲೋಕಸೇವೆ ಮಾಡುವ ಅಥವಾ ದುಡಿಯುವ ಕ್ಷೇತ್ರವು ಚನ್ನಾಗಿದ್ದರೆ ಒಳಿತು; ಇಲ್ಲವಾದರೆ ಪಶ್ಚಾತ್ತಾಪ ಪಡುವ ಪ್ರಸಂಗವೊದಗುವದು.'

'ಲೋಕಸೇವೆ ಮಾಡಲಿಕ್ಕೆ ವಿದ್ಯಾದಾನದಂತಹ ಸುಂದರವಾದ ಸಾಧನವು ಇನ್ನಾವುದಿರುವದು?'

'ವಿದ್ಯಾದಾನವು ಸುಂದರವಾದ ಸಾಧನವಲ್ಲೆಂದು ನಾನು ಅನ್ನುವದಿಲ್ಲ. ವಿದ್ಯಾಸಂಸ್ಥೆಯಲ್ಲಿ ಕೆಲಸ ಮಾಡುವವರು ಸಚ್ಚರಿತ್ರರೂ ಸುಶೀಲರೂ ಇದ್ದರೆ ಒಳಿತು; ಇಲ್ಲದಿದ್ದರೆ ಒಳ್ಳೇ ತೊಂದರೆಯೂ ಕ್ಲೇಶವೂ ಒದಗುವವು. ಸದ್ಯದ ಮುಖ್ಯ ವಿದ್ಯಾಧಿಕಾರಿಗಳಾದ ಕೃಷ್ಣರಾಯರ ವಿಷಯದಲ್ಲಿ ಲೋಕಮತವು

ಕಲುಷಿತವಿದ್ದಂತೆ ಭಾಸವಾಗುವದು. ಅಂತೆಯೇ ನಿನ್ನನ್ನು ಆ ಕೆಲಸದಲ್ಲಿ ತೊಡಗಿಸಲಿಕ್ಕೆ ಮನಸ್ಸು ಹಿಂಜರಿಯುತ್ತೊಡಗಿದೆ.'

'ಚನ್ನಾಗಿ ಪರಿಶೀಲಿಸಿ ನೋಡಿರಿ. ನಿಮ್ಮ ಆಜ್ಞೆಯಾದರೆ ನಾನು ಶಿಕ್ಷಣವ್ಯವಸಾಯವನ್ನು ಕೈಕೊಳ್ಳುವೆನು.'

'ನಿನ್ನನ್ನು ಕೆಲಸದಲ್ಲಿ ತೊಡಗಿಸದಿರುವದೂ ಅಪರಿಹಾರ್ಯವಿದೆ; ಯಾಕಂದರೆ, ಕೃಷ್ಣರಾಯರು ನನಗೆ ಬಹಳೇ ಒತ್ತಾಯ ಪಡಿಸತೊಡಗಿರುವದರಿಂದ ಅವರ ಮಾತನ್ನು ಮೀರುವದು ಕಠಿಣವೆನಿಸಿದೆ. ಎಷ್ಟಾದರೂ ಅವರು ಮುಖ್ಯ ವಿದ್ಯಾಧಿಕಾರಿಗಳು. ವಿದ್ಯಾಸಂಸ್ಥೆಯ ಮಟ್ಟಿಗಾದರೂ 'ಕರ್ತುಮಕರ್ತುಮನ್ಯಥಾಕರ್ತುಂ' ಶಕ್ತಿಯುಳ್ಳ ವಿಧಾತರೇ ಅವರಾಗಿರುವರು. ಅವರ ಆಜ್ಞೆಯನ್ನುಲ್ಲಂಘಿಸಿದರೆ, ಕ್ಷೋಭೆಗೊಂಡು ನನಗೆ ತೊಂದರೆ ಕೊಡತೊಡಗುವರು. ಅವರ ದೋಷಗಳು ಸ್ಪಷ್ಟವಾಗಿದ್ದರೆ ನಾನು ಅವರ ಸಂತಾಪಕ್ಕೆ ಸೊಪ್ಪುಹಾಕದೆ ನಿಚ್ಚಳವಾಗಿ ಉತ್ತರ ಕೊಡುತ್ತಿದ್ದೆನು; ಆದರೆ ಅವರ ಚಾರಿತ್ರ್ಯಹೀನತೆಯ ಲಕ್ಷಣಗಳು ನನಗೆ ಚನ್ನಾಗಿ ತಿಳಿದಿಲ್ಲ. ಏನೋ ಜನರಲ್ಲಿ ಗುಪ್ತವಾದ ಗುಸಿವಿಸಿಯಿದೆ. ಸ್ಕೂಲ ಮಿಸ್ಟ್ರೆಸ್ ರಾಧಾದೇವಿಯು ಸಾಹೇಬರಿಂದ ಅನುಗ್ರಹೀತಳಾಗಿರುವಳೆಂದು ವಿರಲವೂ ಗುಪ್ತವೂ ಆದ ಲೋಕವಾರ್ತೆಯಿದೆ.'

ಸುರೇಂದ್ರರಾಯನು ಹೀಗೆ ನುಡಿಯುವಷ್ಟರಲ್ಲಿ ವಿದ್ಯಾಧಿಕಾರಿಗಳ ಪೇದೆಯು ಬಂದು—'ಮಾಸ್ತರರೆ, ಇನಸ್ಪೆಕ್ಟರ ಸಾಹೇಬರೂ ಹೆಡ್ ಮಿಸ್ಟ್ರೆಸ್ ರಾಧಾದೇವಿಯವರೂ ನಿಮ್ಮ ಭೆಟ್ಟಿಗಾಗಿ ಬರುವರು.'

'ಯಾವಾಗ ಬರುವರು?' ಸುರೇಂದ್ರರಾಯನು ಉತ್ಕಂಠೆಯಿಂದ ಕೇಳಿದನು.

'ಈಗಾಗಲೆ ಅವರು ಮನೆಯಿಂದ ಹೊರಟಿರಬಹುದು.'

'ಅವಶ್ಯವಾಗಿ ಬರಲಿ.'

ಸುರೇಂದ್ರರಾಯನು ಹೀಗೆ ನುಡಿದು, ಪತ್ನಿಯನ್ನು ಕುರಿತು--'ವಿದ್ಯಾಧಿಕಾರಿಗಳ ಆಗಮನದ ಉದ್ದೇಶವು ನಿನಗೆ ತಿಳಿಯಿತೇನು?.'

'ತಿಳಿಯುದೇನು?'

'ಅವರಿಗೆ ಏನು ಉತ್ತರ ಕೊಡಬೇಕೆಂದು ನಿನ್ನ ಮತವಿದೆ?'

'ನಿಮ್ಮ ಇಚ್ಛೆಯಿದ್ದಂತೆ ಉತ್ತರಿಸಿರಿ. ಹೀಗೆಯೇ ಉತ್ತರ ನೀಡಬೇಕೆಂದು ತಿಳಿಸಲಿಕ್ಕೆ ನನ್ನ ಬುದ್ಧಿಗೆ ತೋಚದಾಗಿದೆ.'

'ಒಳ್ಳೇದು. ನೀನು ಕಾಫಿ-ಉಪ್ಪಿಟ್ಟು ಮುಂತಾದ ಉಪಾಹಾರಗಳನ್ನು ಸಿದ್ಧಪಡಿಸು'

ರಮಾದೇವಿಯು ಎದ್ದು ಒಳಗೆ ಹೋದಳು. ವಿದ್ಯಾಧಿಕಾರಿಗಳ ಸೇವಕನ ಬಾಗಿಲದ ಹೊರಗಿದ್ದ ಕಟ್ಟೆಯ ಮೇಲೆ ಕುಳಿತುಕೊಂಡನು. ಮುಂದೆ ಕಾಲು ಗಳಿಗೆಯಲ್ಲಿ ವಿದ್ಯಾಧಿಕಾರಿಯೂ ರಾಧಾದೇವಿಯೂ ಸುರೇಂದ್ರರಾಯನ ಮನೆಗೆ ಬಂದರು. ಸುರೇಂದ್ರರಾಯನು ಅವರನ್ನು ಸ್ವಾಗತಿಸಿ ಕುರ್ಚಿಯಾಸನಗಳ ಮೇಲೆ ಕುಳ್ಳಿರಿಸಿದನು.

ರಾಧಾದೇವಿಯು ವಿದ್ಯಾಧಿಕಾರಿಗಳ ಜೊತೆಗಿರಿಸಿದ್ದ ಕುರ್ಚಾಸನದ ಮೇಲೆ ಯಾವ ಬಗೆಯ ಸಂಕೋಚವೂ ಇಲ್ಲದೆ ಕುಳಿತುಕೊಂಡದ್ದನ್ನು ನೋಡಿ, ಸುರೇಂದ್ರರಾಯನಿಗೆ ಆಶ್ಚರ್ಯವೆನಿಸಿತು. ಕುರ್ಚಿಯನ್ನು ಸ್ವಲ್ಪ ಬದಿಗೆ ಸರಿಸಿಕೊಂಡು ಕುಳಿತುಕೊಳ್ಳುವಷ್ಟು ವಿಚಾರವೂ ರಾಧಾದೇವಿಯಲ್ಲಿ ಹುಟ್ಟದ್ದಕ್ಕಾಗಿ ಅವನಲ್ಲಿ ಸಂತಾಪವು ಹುಟ್ಟಿತು. ಮೂರು ವರ್ಷದ ಟ್ರೇಂಡಳು. ದೊಡ್ಡ ಪಗಾರ. ವರ್ಷದಲ್ಲಿ ಎರಡು ಸಾರೆ ವೇತನಾಭಿವೃದ್ಧಿಯ ಸುಯೋಗ. ಈ ಕಾರಣಗಳಿಂದ ಆ ಸ್ಕೂಲ ಮಿಸ್ಟ್ರೆಸ್ಸು ಅಹಂಕಾರಿಯಾಗಿರುವಳೆಂದು ಅವನ ಗ್ರಹಿಕೆಯಾಯಿತು

ವಿದ್ಯಾಧಿಕಾರಿಗಳು ಕುರ್ಚಿಯ ಮೇಲೆ ಕುಳಿತ ಬಳಿಕ ಸುರೇಂದ್ರರಾಯನನ್ನು ಕುರಿತು—'ಮಾಸ್ತರರೆ, ನಿಂತಿರೇಕೆ? ಇಲ್ಲಿ ಕುಳಿತುಕೊಳ್ಳಿರಿ' ಎಂದು ತಮ್ಮ ಬದಿಯಲ್ಲಿದ್ದ ಮತ್ತೊಂದು ಕುರ್ಚಿಯ ಕಡೆಗೆ ಬೆರಳುಮಾಡಿದರು.

'ಇರಲಿ. ಸಾಹೇಬರೆ, ನಾನು ಇಲ್ಲಿ ಕುಳಿತುಕೊಳ್ಳುತ್ತೇನೆ,' ಎಂದು ಸುರೇಂದ್ರರಾಯನು ವಿನಯದಿಂದ ನುಡಿದು, ಹಾಸುಗೆಯಮೇಲೆ ಕುಳಿತನು.

'ನೀವು ಬಹಳ ಸಂಕೋಚದವರು ಕಾಣುತ್ತೀರಿ. ಸೇವ್ಯ-ಸೇವಕ ಭಾವನೆಗಳು ಮನೆಯಲ್ಲಿರಬಾರದು. ನಾವು ಶಾಲೆಯಲ್ಲೇ ಅಧಿಕಾರಿಗಳು. ಮನೆಯಲ್ಲಿ ಎಲ್ಲರೂ ಸರಿಸಮಾನಸ್ಕಂದರೇ,' ಎಂದು ಕೃಷ್ಣರಾಯರು ಹೇಳಿದರು.

'ಸಾಹೇಬರೇ!' ರಾಧಾದೇವಿಯು ಒಳ್ಳೇ ಆಢ್ಯತೆಯಿಂದ-'ಸುರೇಂದ್ರರಾಯರೆಂದರೆ ನೀವು ಏನೆಂದು ತಿಳಿದಿರುವಿರಿ? ಇವರಲ್ಲಿಯ ವಿಚಾರಗಳು ಬಹಳೇ ವಿಚಿತ್ರವಿರುವವು. ನವ್ಯ ವಿಚಾರಗಳೂ ನವ ಸುಧಾರಣೆಗಳೂ ಇವರಲ್ಲಿಲ್ಲ. ಇವರು ಪುರಾಣ ಪುರುಷರು! ಜಗತ್ತು ಹೇಗೆ ಓಡುತ್ತಿರುವದೆಂಬದರ ಕಡೆಗೆ ಇವರ ಲಕ್ಷ್ಯವೇ ಇಲ್ಲ. ಕಣ್ಣಿದ್ದ ಕುರುಡರೂ, ಕಿವಿಯಿದ್ದ ಕಿವುಡರೂ, ಕಾಲಿದ್ದ ಕುಂಟರೂ, ಬುದ್ಧಿಯಿದ್ದ ಹುಚ್ಚರೂ ಯಾರೆಂದು ಕೇಳಿದರೆ,

ಯಾವ ವಿಚಾರವನ್ನೂ ಮಾಡದೆ ಈ ಸುರೇಂದ್ರರಾಯರ ಕಡೆಗೆ ಬೆರಳು ತೋರಿಸಲಿಕ್ಕೆ ಏನೂ ಸಂದೇಹವಿಲ್ಲ ನೋಡಿರಿ!'

ರಾಧಾದೇವಿಯು ಹೀಗೆ ನುಡಿದು ಗಹಗಹಿಸಿ ನಗತೊಡಗಿದಳು. ಅವಳ ಮಾತುಗಳನ್ನು ಕೌತುಕಗೊಂಡು ಕೇಳಿದ ಕೃಷ್ಣರಾಯರೂ ನಗತೊಡಗಿದರು. ಉಭಯತರ ನಗುವೂ ಸುರೇಂದ್ರರಾಯನಿಗೆ ಅಸಹ್ಯವಾಯಿತು. ಆಗ ಅವನು ಯಾವ ವಿಕಾರವನ್ನೂ ವ್ಯಕ್ತಪಡಿಸದೆ, ವಿನಮ್ರಭಾವದಿಂದ-'ರಾಧಾದೇವಿಯವರೆ, ನೀವು ಅನ್ನುತ್ತಿರುವಂತೆ ನನ್ನ ಸ್ಥಿತಿಯು ಇಲ್ಲವೆಂದು ಅನ್ನಲಿಕ್ಕೆ ನನಗೆ ಧೈರ್ಯ ಸಾಲದು; ಯಾಕಂದರೆ, ನಾನು ನಿಮ್ಮಂತೆ ಟ್ರೇನಿಂಗ ಹೊಂದಿದವನಲ್ಲ. ನಿಮ್ಮ ಹೊಸ ಆಚಾರ-ವಿಚಾರಗಳು ನನ್ನಲ್ಲಿ ಹೇಗೆ ಬರಬೆ ಕು? ಉಗಿಬಂಡಿಯ ಜೊತೆಗೆ ಎತ್ತಿನ ಬಂಡಿ ಓಡುವದು ಸಾಧ್ಯವುಂಟೇ? ಓಡುವವರು ಓಡಲಿ. ನಮ್ಮಂಥ ಮೇಧಾಹೀನರು ಮೆಲ್ಲಗೆನಡೆಯುತ್ತಿರುವೆವೆಂದೇ ನಿಮ್ಮಂತಹರ ಓಟದ ಕಡೆಗೆ ಜನರು ಕುತೂಹಲದೃಷ್ಟಿಯಿಂದ ನೋಡುವರು. ಓಡುವ ಉಬ್ಬಿನಲ್ಲಿಕಾಲುಮುರಿಯದಂತೆ ಜಾಗ್ರತೆಗೊಂಡರೆ ಮಾತ್ರ ಓಟವು ಕೌತುಕಪೂರ್ಣವಾಗುವದು; ಇಲ್ಲದಿದ್ದರೆ ನಗೆಗೇಡಾಗುವ ಸಂಭವ!'

'ಇರಲಿ. ಸುರೇಂದ್ರರಾಯರೆ.' ವಿದ್ಯಾಧಿಕಾರಿಗಳು ಆ ಮಾತನ್ನು ಬುದ್ಧಿಪೂರ್ವಕವಾಗಿ ಅಷ್ಟಕ್ಕೇ ಪೂರ್ತಿ ಮಾಡಬೇಕೆಂಬ ಉದ್ದೇಶದಿಂದ— 'ನಾವು ಇಲ್ಲಿಗೆ ಯಾವ ಕಾರ್ಯಕ್ಕಾಗಿ ಬಂದಿರುವೆವೆಂಬದು ನಿಮಗೆ ಗೊತ್ತಿರಲಿಕ್ಕೆ ಬೇಕು.' 'ಸಾಹೇಬರೆ, ನನಗೆ ಅದು ಗೊತ್ತಿಲ್ಲ.'

'ಹಾಂ! ಹೀಗೇಕೆ ಹೇಳುವಿರಿ? ರಾಧಾದೇವಿಯವರು ನಿಮ್ಮೆದುರಿಗೆ ಯಾವ ಪ್ರಸ್ತಾಪವನ್ನೂ ತೆಗೆದಿಲ್ಲವೆ?'

'ಸುರೇಂದ್ರರಾಯರೆ, ಮೊನ್ನೆ ನಾನು ನಿಮ್ಮೆದುರಿಗೆ ಹೇಳಿದ ವಿಷಯದ ವಿಚಾರಣೆಗಾಗಿ ಸವಾರಿಯ ಆಗಮನವಾಗಿದೆ. ಇವರ ಆಗ್ರಹದ ಮೂಲಕ ನಾನೂ ಬಂದೆನು' ಎಂದು ರಾಧಾದೇವಿಯು ನುಡಿದಳು.

'ಒಳಿತಾಯಿತು. ಸಾಹೇಬರಂತಹರು ನಮ್ಮಂತಹ ಬಡವರ ಮನೆಯಲ್ಲಿ ಪಾದಧೂಳಿಯನ್ನು ಕೆಡಹಿದ್ದು ಸುಕೃತವೆಂದು ಭಾವಿಸುವೆನು' ಎಂದು ಸುರೇಂದ್ರರಾಯನು ಮಾತಾಡಿ-''ರಾಧಾದೇವಿಯವರು ನನಗೆ ಎಲ್ಲ ಸಂಗತಿಗಳನ್ನು ಹೇಳಿರುವರು; ಆದರೆ ನನ್ನ ಹೆಂಡತಿಯು ಆ ವಿಷಯದಲ್ಲಿ ಇನ್ನೂ ಸಮ್ಮತಿಯನ್ನಾಗಲಿ-ಅಸಮ್ಮತಿಯನ್ನಾಗಲಿ ವ್ಯಕ್ತಪಡಿಸಿಲ್ಲ.'

'ಮಾಸ್ತರರೆ, ಅಸಮ್ಮತಿಯನ್ನು ವ್ಯಕ್ತಪಡಿಸಲು ಕಾರಣವಿಲ್ಲ. ರಮಾದೇವಿಯವರು ಶಿಕ್ಷಣವ್ಯವಸಾಯವನ್ನು ಕೈಕೊಳ್ಳಲಿಕ್ಕೇಬೇಕು. ಸ್ತ್ರೀ

ಶಿಕ್ಷಣಪ್ರಸಾರಣೆಗಾಗಿ ಸಾಹಸಮಾಡತೊಡಗಿದ ನನಗೆ, ಅವರಂತಹ ಸುಗೃಹಿಣಿಯರಿಂದ ಬಹಳೇ ನೆರವಾಗುವದು. ವಿಜಯನಗರದ ವಿದ್ಯಾಸಂಸ್ಥೆಯು, ಅದರಲ್ಲಿಯೂ ಸ್ತ್ರೀ ಶಿಕ್ಷಣದ ವಿಭಾಗವು ಆದರ್ಶವಾಗಬೇಕೆಂದೇ ನನ್ನ ಮಹತ್ವಾಕಾಂಕ್ಷೆಯುಂಟು ವಿಜಯನಗರದ ಬಾಲಿಕಾಶಾಲೆಯಲ್ಲಿ ರಮಾದೇವಿಯವರನ್ನು ಆರು ತಿಂಗಳು ಉಪಶಿಕ್ಷಕಿಯೆಂದು ನಿಯಮಿಸುವೆನು. ಅನಂತರದಲ್ಲಿ ಅವರನ್ನು ಮುಖ್ಯಶಿಕ್ಷಕಿಯರನ್ನಾಗಿ ಮಾಡುವೆನು. ಇಚ್ಛೆಯಿದ್ದರೆ ಟ್ರೇನಿಂಗ ಶಿಕ್ಷಣ ಹೊಂದುವ ಸೌಕರ್ಯವನ್ನೂ ಒದಗಿಸಿಕೊಡುವೆನು. ನನ್ನ ಮಾತಿಗೆ ಮಾನ್ಯತೆಯಿತ್ತರೆ, ನಿಮಗೂ ಲಾಭವಾಗುವದೆಂಬದನ್ನು ಮರೆಯಬೇಡಿರಿ. ಸಣ್ಣ ಸಂಬಳದ ನಿಮಗೆ ನಿಮ್ಮ ಪತ್ನಿಯಿಂದ ಉಪಯೋಗವಾಗಿ, ಸಂಸಾರವು ಸುಸೂತ್ರದಿಂದ ನಡೆಯುವದು. ನಾನು ಅವರನ್ನು ನಿಯಮಿಸಬೇಕೆಂದಿರುವ ಶಾಲೆಯಲ್ಲಿ ಒಬ್ಬರೂ ಪುರುಷಶಿಕ್ಷಕರಿಲ್ಲ. ಅವರನ್ನು ನಾನು ನನ್ನ ಹೊಟ್ಟೆಯ ಮಗಳೆಂದು ಭಾವಿಸಿ ಕೆಲಸ ತೆಗೆದುಕೊಳ್ಳುತ್ತ ಹೋಗುವೆನು. ನಿಮ್ಮ ಪತ್ನಿಯವರನ್ನು ಕರೆಯಿರಿ. ನಾನು ಅವರಿಗೆ ಚನ್ನಾಗಿ ಉಪದೇಶ ಮಾಡಿ, ಒಪ್ಪುವಂತೆ ಮಾಡುವೆನು.' ಎಂದು ಕೃಷ್ಣರಾಯರು ನುಡಿದು, ಸುರೇಂದ್ರರಾಯನ ಮುಖದಿಂದ ಯಾವ ಉತ್ತರ ಬರುವದೆಂಬದನ್ನು ಆತುರದಿಂದ ನಿರೀಕ್ಷಿಸುತ್ತ ಕುಳಿತರು.

ಸುರೇಂದ್ರರಾಯನ ಮನಸ್ಸು ಇತ್ತಂಡವಾಗಿತ್ತು. ಯಾವದೊಂದನ್ನು ಖಂಡಿತವಾಗಿ ಹೇಳಲಿಕ್ಕೆ ಅವನು ಅನುಮಾನಪಡಹತ್ತಿದ್ದನು. ಆಗ ರಾಧಾದೇವಿಯು—'ಸುರೇಂದ್ರರಾಯರೆ, ಇದರಲ್ಲಿ ಅಷ್ಟೊಂದು ವಿಚಾರ ಮಾಡುವಂತಹದೇನಿದೆ? ಸಾಹೇಬರಂತಹ ದೊಡ್ಡ ಜನರ ಮಾತನ್ನು ಉಪೇಕ್ಷಿಸಿದರೆ ಸುಖವಾಗಲಿಕ್ಕಿಲ್ಲ. ಅವರು ನಿಮ್ಮ ಹಿತಕ್ಕಾಗಿಯೇ ಹೇಳುತ್ತಿರುವರೆಂದು ತಿಳಿಯಿರಿ. ತಮ್ಮ ಕೈಕೆಳಗಿನ ಕೆಲಸಗಾರರ ವಿಷಯವಾಗಿ ಇವರಿಗೆ ಬಲು ಅಭಿಮಾನ. ಇಂತಹ ಮಹಾನುಭಾವರಾದ ಅಧಿಕಾರಿಗಳು ಮಿಕ್ಕ ಪ್ರಾಂತಗಳಲ್ಲಿ ದೊರೆಯುವದು ಅಪರೂಪ. ಈ ಧರ್ಮವಂತರು ನನ್ನ ಕೈಹಿಡಿಯದಿದ್ದರೆ, ಇಷ್ಟೊತ್ತಿಗೆ ನಾನು ಯಾವ ದುರವಸ್ಥೆಗೀಡಾಗುತ್ತಿದ್ದೆನೆಂಬದನ್ನು ಹೇಳಲಾಗುವದಿಲ್ಲ. ನನ್ನ ಪತಿರಾಯರು ನಿರಕ್ಷರ ಕುಕ್ಷಿಗಳಿದ್ದರೆಂದೇ ಹೇಳಬಹುದು. ಅಂತಹರನ್ನು ಸಹ ಇವರು ಶಿಕ್ಷಣ ವ್ಯವಸಾಯದಲ್ಲಿ ಸೇರಿಸಿ, ಸುಧಾರಿಸಿ ಕೆಲಸ ತೆಗೆದುಕೊಳ್ಳತೊಡಗಿರುವರು. ಶಿಶುವರ್ಗದ ಮಟ್ಟಿಗಾದರೂ ಶಿಕ್ಷಣ ಕೊಡುವಂತೆ ಅವರನ್ನು ಸಜ್ಜುಗೊಳಿಸಿದರು. ನಿಮ್ಮ ಪತ್ನಿಯವರನ್ನು

ಕರೆಯಿರಿ; ಸಾಹೇಬರ ಹೇಳಿಕೆಯ ಮೇರೆಗೆ ನಡೆಯಲಿಕ್ಕೆ ಹೇಳಿರಿ.'

ರಾಧಾದೇವಿಯು ಹೀಗೆ ನುಡಿದಮೇಲೆ ಸುರೇಂದ್ರರಾಯನು ಸಾಹೇಬರನ್ನು ಕುರಿತು—'ರಾವಸಾಹೇಬರೇ, ಅವಳೇನೂ ನನ್ನ ಮಾತಿಗೆ ಹೊಂತಿಲ್ಲ. ಸರಕಾರೀ ಸಂಸ್ಥೆಯಲ್ಲಿ ಸ್ತ್ರೀಯರು ಪ್ರವೇಶಿಸಿದರೆ, ಅವರ ಶೀಲಕ್ಕೂ ಮಾನಕ್ಕೂ ಭಂಗಬರುವ ಪ್ರಸಂಗವೊದಗುವದೆಂಬ ಅಂಜಿಕೆಯು ಅವಳಿಗಿರುವದು.'

'ಮಾಸ್ತರರೆ!' ಸಾಹೇಬರು ವಿಕಟಹಾಸ್ಯದಿಂದ-'ಶಿಕ್ಷಣ ಸಂಸ್ಥೆಯಲ್ಲಿ ಅನೀತಿಗೆ ಆಸ್ಪದವಿರುವದೆ? ಸುಶಿಕ್ಷಿತರಾದ ನಿಮ್ಮ ಮುಖದಿಂದ ಈ ವಿಧದ ಮಾತು ಹೊರಟದ್ದನ್ನು ಕೇಳಿ ನನಗೆ ನಗೆ ಬರುವದು. ನಾನು ವಿದ್ಯಾಖಾತೆಯಲ್ಲಿ ಮುಖ್ಯಾಧಿಕಾರಿಯಿರುವವರೆಗೆ ನೀವು ಯಾವ ಯೋಚನೆಯನ್ನೂ ಮಾಡಲಾಗದು. ನಿಮ್ಮ ಪತ್ನಿಯವರನ್ನು ಕರೆಯಿರಿ. ನಾನು ಅವಂಗೆ ತಿಳಿಯ ಹೇಳುವೆನು.

ವಿದ್ಯಾಧಿಕಾರಿಗಳ ಆಶ್ವಾಸನೆಯಿಂದ ಸುರೇಂದ್ರರಾಯನಿಗೆ ಸಮಾಧಾನವೆನಿಸಿತು. ಆಗ ಅವನು-'ರಮಾ, ಕಾಫಿ ಮುಂತಾದ ಉಪಾಹಾರಗಳನ್ನು ತೆಗೆದುಕೊಂಡು ಬಾ.'

ರಮಾದೇವಿಯು ಕಾಫಿ-ಉಪಾಹಾರಗಳನ್ನು ತೆಗೆದುಕೊಂಡು ಕೋಣೆಯಲ್ಲಿ ಬಂದಳು. ಕೂಡಲೆ ಕೋಲ್ಮಿಂಚು ಹೊಡೆದಂತಾಗಿ, ಸಾಹೇಬರ ಕಣ್ಣುಗಳು ಕತ್ತಲೆ ಗೂಡಿಸಿದವು! ಅವರು ನೇತ್ರಕ್ಕೆ ಹಾಕಿದ ಕನ್ನಡಕವನ್ನು ಹಣೆಯಮೇಲಿರಿಸಿ, ಎರಡೂ ಕೈಗಳಿಂದ ಕಣ್ಣುಗಳನ್ನು ತಿಕ್ಕಿಕೊಂಡು ರಮಾದೇವಿಯನ್ನು ದಿಟ್ಟಿಸಿ ನೋಡಹತ್ತಿದರು. ರಮಾದೇವಿಯೆಂದರೆ, ಗುಣದಲ್ಲಿಯೂ ರೂಪದಲ್ಲಿಯೂ ರಾಮನ ರಮೆಯೇ ಆಗಿದ್ದಳು. ರಮಾದೇವಿಯು ಸುರೇಂದ್ರರಾಯನ ನವಪರಿಣೀತ ವಧುವು. ಅವಳು ಗೃಹಿಣೀ ಪದವನ್ನು ಹೊಂದಿ ಇನ್ನೂ ಒಂದು ವರ್ಷವಾಗಿದ್ದಿಲ್ಲ. ಅವಳು ಹೆಚ್ಚಿನ ವಸ್ತ್ರಾಲಂಕಾರಗಳನ್ನು ಧರಿಸಿರದಿದ್ದರೂ, ಮೊದಲೇ ರೂಪವತಿಯಾಗಿದ್ದ ಅವಳಿಗೆ ಸಾಹೇಬರಂತಹರ ಕಣ್ಣುಗಳನ್ನು ಕುಕ್ಕಿಸುವದಕ್ಕೆ ಇದ್ದ ಸಾಮಾನ್ಯ ವಸ್ತ್ರಾಲಂಕಾರಗಳೇ ಸಾಕಾಗಿದ್ದವು. ಸುರಾಂಗನೆಯರಲ್ಲಿ ಸಹ ಇಂತಹ ರೂಪವತಿಯು ಇರಲಿಕ್ಕಿಲ್ಲೆಂದು ಸಾಹೇಬರು ಮನಸ್ಸಿನಲ್ಲಿ ಅಂದುಕೊಂಡರು.

ರಮೆಯ ರೂಪವನ್ನು ನೋಡಿ ಸಾಹೇಬರು ದಿಗ್ಭ್ರಾಂತರಾಗಿರುವರೆಂಬದನ್ನು ತಿಳಿದುಕೊಳ್ಳಲಿಕ್ಕೆ ರಾಧಾದೇವಿಗೆ ಅವಕಾಶವಾಗಲಿಲ್ಲ. ಅವರ ವರ್ತನವು ಅವಳಿಗೆ ಯಾಕೋ ವೈಷಮ್ಯವೆನಿಸಿತು; ಆದರೆ ಮರಿಸ್ತರಿಗೆ ಅವಳ ಈ ವಿಷಮ ಭಾವನೆಯಿಂದ ಆಗುವ ಹಾನಿಯೇನು? ಸಾಹೇಬರ ಈ ಬಗೆಯ

ಸ್ಕೂಲ ಮಿಸ್ಟ್ರೆಸ್ ಪುಟ ೧೭



ಆನಂತರ ಸಾಹೇಬರೂ ರಾಧಾದೇವಿಯೂ ಒಂದೇ ಮೇಜಿಗೆ ಕುಳಿತು
ಉಪಾಹಾರ ಮಾಡುತ್ತಿದ್ದರು.

ನೋಟದಿಂದ ಸುರೇಂದ್ರರಾಯನಾಗಲಿ, ರಮಾದೇವಿಯಾಗಲಿ ವಿಪರೀತ ಭಾವನೆ ಹೊಂದಿದರೆ ಸ್ವೀಕೃತಕಾರ್ಯಕ್ಕೆ ಬಾಧೆಯುಂಟಾಗುವದೆಂಬವೂ ಅವಳಿಗೆ ತಿಳಿಯಿತು. ಕೂಡಲೆ ಅವಳು ಸಾಹೇಬರನ್ನು ಕುರಿತು-'ಇವರೇ ನಮ್ಮ ಸುರೇಂದ್ರರಾಯರ ಧರ್ಮಪತ್ನಿಯವರಾದ ರಮಾದೇವಿಯವರು. ಇವರು ಸುಶೀಲರು; ವಿನಯಸಂಪನ್ನರು. ಸತೀಶಿರೋಮಣಿಗಳು.'

ಸಾಹೇಬರು ಗುಂಗಿನಿಂದ ಎಚ್ಚತ್ತರು. ಸುರೇಂದ್ರರಾಯನು ಪೇಲೆಗಳಲ್ಲಿ ಕಾಫಿಯನ್ನು ತುಂಬಿ ಸಾಹೇಬರ ಹಾಗು ರಾಧಾದೇವಿಯ ಮುಂದಿರಿಸಿದನು. ರಮಾದೇವಿಯು ತಟ್ಟೆಯಲ್ಲಿ ಉಪಾಹಾರ ಸಾಮುಗ್ರಿಗಳನ್ನು ಬಡಿಸಿ ಸಾಹೇಬರ ಸಮೀಪದಲ್ಲಿಟ್ಟಳು ಅನಂತರದಲ್ಲಿ ರಾಧಾದೇವಿಗೂ ಉಪಾಹಾರ ಬಡಿಸಿದಳು.

'ರಮಾದೇವಿ!' ಸಾಹೇಬರು ರಮಾದೇವಿಯ ಮುಖವನ್ನು ಕಣ್ಣಿಟ್ಟು ನೋಡುತ್ತ-'ನೀನು ಕಾಫಿ-ಉಪಾಹಾರಗಳನ್ನು ತೆಗೆದುಕೊಳ್ಳುವದಿಲ್ಲವೆ?'

'ಈಗಲೆ ಬೇಡ. ಹಿಂದಿನಿಂದ ತೆಗೆದುಕೊಳ್ಳುವೆನು', ಎಂದು ರಮಾದೇವಿಯು ನುಡಿದಳು.

'ರಮಾದೇವಿಯವರೆಂದರೆ ಈಗಿನ ಸ್ತ್ರೀಯರಲ್ಲ; ಅವರು ದ್ವಾಪರಗದವರೋ ತ್ರೇತಾಯುಗದವರೋ ಎಂಬಂತೆ ಇರುವರು', ಎಂದು ರಾಧಾದೇವಿಯು ನುಡಿದು, ನಗತೊಡಗಿದಳು.

'ತಪ್ಪಿಲ್ಲ', ಎಂದು ಕೃಷ್ಣರಾಯನು ನುಡಿದು--'ರಮಾದೇವಿ, ಸದ್ಯದ ಸುಧಾರಣೆಯ ಕಾಲದಲ್ಲಿ ನಿಮ್ಮ ಈ ವಿಧದ ಪ್ರಾಚೀನ ಸಂಸ್ಕೃತಿಯು ಕೆಲಸದ್ದಲ್ಲ. ನೀವು ಬುನಾದಿಯ ಪದ್ಧತಿಯಂತಿದ್ದರೆ ದೊಡ್ಡ ತಪ್ಪೆಂದು ಅನ್ನುವದಿಲ್ಲ. ಇರಲಿ ನಿಮ್ಮ ಪದ್ಧತಿಗೆ ನಾವೇಕೆ ವಿರೋಧವನ್ನುಂಟುಮಾಡಬೇಕು?'

ಕಾಫಿ-ಉಪಾಹಾರ ಸೇವನೆಗೆ ಪ್ರಾರಂಭವಾಯಿತು. ಚಕ್ಕುಲಿಯ ತುಣುಕನ್ನು ಬಾಯಲ್ಲಿ ಸಾಕಿಕೊಳ್ಳುವಾಗಲೂ, ಕಾಫಿಯ ಪೇಲೆಯನ್ನು ಬಾಯಿಗೆ ಹಚ್ಚಿ ಜುರಿ ಎಳೆಯುವಾಗಲೂ ಸಾಹೇಬರ ದೃಷ್ಟಿಯು ರಮಾದೇವಿಯ ಮುಖದಲ್ಲಿ ನೆಟ್ಟುಕೊಂಡಿತ್ತು.

ಉಪಾಹಾರವು ಮುಗಿದ ಮೇಲೆ ಸಾಹೇಬರು ರಮಾದೇವಿಯನ್ನು ಕುರಿತು—'ರಮಾದೇವಿ, ನಿಮ್ಮನ್ನು ಮುಖ್ಯ ಶಿಕ್ಷಕಿಯ ಸ್ಥಳದಲ್ಲಿ ನಿಯಮಿಸುವೆನು. ನಿಮ್ಮನ್ನು ಉಪಶಿಕ್ಷಕೆಯನ್ನಾಗಿ ನಿಯಮಿಸಬೇಕೆಂದು ಮೊದಲು ನನ್ನ ಇಚ್ಛೆಯಿತ್ತು, ಆದರೆ ನಿಮ್ಮನ್ನು ನೋಡಿದೊಡನೆಯೆ ನನ್ನ ವಿಚಾರವು ಬೇರೆಯಾಯಿತು. ನಿಮ್ಮನ್ನು ಮೊದಲೇ ಮುಖ್ಯ ಶಿಕ್ಷಿಕೆಯನ್ನಾಗಿ ನಿಯಮಿ

ಸುವೆನು. ನೀವು ಮುಖ್ಯ ಶಿಕ್ಷಕಿಯ ಕೆಲಸ ಮಾಡಲಿಕ್ಕೆ ತಕ್ಕವರಾಗಿರುವಿ ರೆಂಬದನ್ನು ನಾನು ನಿಮ್ಮ ಮುಖಲಕ್ಷಣಗಳಿಂದಲೇ ಮನವರಿಕೆ ಮಾಡಿ ಕೊಂಡಿರುವೆನು. ನೀವು ಯಾವ ವಿಧದ ಯೋಚನೆಗೂ ಒಳಗಾಗದೆ, ಶಿಕ್ಷಣ ವ್ಯವಸಾಯವನ್ನು ಕೈಕೊಳ್ಳಿರಿ ಸ್ತ್ರೀಶಿಕ್ಷಣವು ನಿಮ್ಮಂತಹರಿಂದಲೇ ಪ್ರಸಾರ ವಾಗಿ, ನನ್ನ ಅಂತಿಮ ಇಚ್ಛೆಯು ಸಫಲ ಹೊಂದಬೇಕಾಗಿದೆ. ನಾನು ನಿಮ್ಮನ್ನು ಪ್ರತಿಯೊಂದು ಬಗೆಯಿಂದಲೂ ಸುಧಾರಿಸಿಕೊಂಡ ಹೋಗುವೆನು. ವೇಳೆ ವೇಳೆಗೆ ಭೆಟ್ಟಿಯಾಗಿ ತಕ್ಕ ಸೂಚನೆಗಳನ್ನು ಮಾಡುವೆನು ನಿಮ್ಮ ಪತಿಗಳು ಶಿಕ್ಷಕರೇ ಇರುವದರಿಂದ, ಅವರಿಂದಲಾದರೂ ನಿಮಗೆ ನೆರವು ದೊರೆತೇ ದೊರೆಯುವದು ನನಗೆ ನನ್ನ ಮಗಳಾದ ಚಂದ್ರಲೇಖೆಯು ಹೇಗೋ, ನೀವೂ ಹಾಗೆ. ಮತ್ತಿನ್ನೇನು ಹೇಳಲಿ? ಹೂಂ ಹೇಳಿರಿ. ನೀವು ನನ್ನ ಮಾತಿಗೆ ಮಾನ್ಯತೆಯನ್ನೀಯುವಿರೊ-ಇಲ್ಲವೊ?"

ರಮಾದೇವಿಯು ಉತ್ತರವೀಯದೆ, ಪತಿಯ ಮುಖವನ್ನು ನಿರೀಕ್ಷಿಸ ತೊಡಗಿದಳು.

'ಇಷ್ಟೇಕೆ ಅನುಮಾನಿಸುವಿ? ಸಾಹೇಬರು ನಿಮ್ಮಲ್ಲಿ ಈ ಬಗೆಯು ಮಮತೆಯುಳ್ಳವರಾಗಲು, ಅಂತಹರ ಮನಸ್ಸು ಮುರಿಯುವಂತೆ ವರ್ತಿಸುವ ಸಾಹಸ ಮಾಡಬೇಡಿರಿ,' ಎಂದು ರಾಧಾದೇವಿಯು ನಹುವೇ ಹೇಳಿದಳು.

'ಸಾಹೇಬರೆ, ಶಿಕ್ಷಣವ್ಯವಸಾಯವೆಂದರೆ, ಕೇವಲ ಉದರಪೋಷಣೆ ಗೆಂದು ಕೈಕೊಂಡ ಕೂಲಿಯ ಉದ್ಯೋಗವಲ್ಲ. ಅದರಲ್ಲಿ ಲೋಕಸೇವೆಯು ಸಾಧಿಸುವದರಿಂದಲೆ ನಾನ ನನ್ನ ಹತ್ನಿಯನ್ನು ಶಿಕ್ಷಣವ್ಯವಸಾಯಕ್ಕೆ ತೊಡಗಿಸ ಲೊಪ್ಪುವೆನು. ನನ್ನ ರಮೆಗೆ ಶೀಲವು ಪ್ರಾಣಕ್ಕಿಂತಲೂ ಮೇಲು. ಈ ವಿಷ ಯದ ಕಡೆಗೆ ವರಿಷ್ಠರಾದ ತಾವು ಜಾಗ್ರತೆಗೊಳ್ಳತಕ್ಕದ್ದು. ವ್ಯವಸಾಯ ಬಂಧುಗಳಾದ ಶಿಕ್ಷಕರಿಂದಾಗಲಿ, ವರಿಷ್ಠ ಅಧಿಕಾರಿಗಳಿಂದಾಗಲಿ ಅವಳ ನೀತಿಗೆ ವಿರೋಧವಾದ ವರ್ತನವು ಘಟಿಸದಂತೆ ಕಾಯಿರಿ. ನಿಮ್ಮ ಆಶ್ವಾಸ ನೆಯ ಮೇಲೆ ಭರವಸೆಯಿಟ್ಟು ನಾನು ಇವಳನ್ನು ಆ ಕೆಲಸಕ್ಕೆ ತೊಡಗಿಸ ಲೊಪ್ಪಿರುವೆನು."

ಸುರೇಂದ್ರರಾಯನ ಮಾತುಗಳಿಂದ ಸಾಹೇಬರ ಆನಂದವು ಹೃದಯಾ ಕಾಶವನ್ನು ತುಂಬಿ ಹೊರಚೆಲ್ಲತೊಡಗಿತು. ಆಗ ಅವರು—'ನೀವು ನಿಶ್ಚಿಂತ ರಾಗಿರಿ. ಶಿಕ್ಷಕಿಯರ ವಿಷಯದಲ್ಲಿ ನಾನು ಎಷ್ಟು ಜಾಗ್ರತೆಯಿಂದ ವ್ಯವಸ್ಥೆ ಯಿಟ್ಟಿರುವೆನೆಂಬುದರ ಬಗ್ಗೆ ಈ ನಮ್ಮ ರಾಧಾದೇವಿಯವರನ್ನು ಕೇಳಿರಿ. ತಿರುಗಿ ಕೇಳಿದರೆ ಬೇರೆಯವರನ್ನು ವಿಚಾರಿಸುವ ಅವಶ್ಯಕತೆಯೇ ಇಲ್ಲ;

ಯೂಕಂದರೆ, ನೀವು ಶಿಕ್ಷಣಸಂಸ್ಥೆಯ ಹೊರಗಿನವರಲ್ಲ. ನಿಮಗೆ ನನ್ನ ಕಟ್ಟುನಿಟ್ಟಿನ ವ್ಯವಸ್ಥೆಯ ಬಗ್ಗೆ ಮನವರಿಕೆಯಾಗಿರಲಿಕ್ಕೆಬೇಕು ನೀವು ನನ್ನ ಮಾತಿಗೆ ಮಾನ್ಯತೆಯಿತ್ತದ್ದರಿಂದ ಪರಮಾನಂದವಾಗಿದೆ. ನಿಮ್ಮ ಗೃಹಿಣಿಯ ಮೇಲೆ ನನ್ನ ಕೃಪಾದೃಷ್ಟಿಯಿರುವದೆಂದು ನಂಬಿರಿ.' ಎಂದು ನುಡಿದು, ರಮಾದೇವಿಯವರನ್ನು ಕುರಿತು—'ರಮಾದೇವಿ, ನಿಮ್ಮ ಪತಿ ದೇವರ ಆಜ್ಞೆಯಂತು ಆಯಿತು. ನೀವು ಅವರ ಹಾಗು ನನ್ನ ಮಾತಿಗೆ ಮಾನ್ಯತೆಯಿತ್ತಬಗ್ಗೆ ಮಾತಾಡಿರಿ. ನಾನು ನಿಮ್ಮ ಮುಖದಿಂದಲೇ ಒಪ್ಪಿಗೆ ಯನ್ನು ಕೇಳಲಿಚ್ಛಿಸಿರುವೆನು.'

'ಸಾಹೇಬರೇ, ಪತಿಯ ಆಜ್ಞೆಯನ್ನು ದೇವಾಜ್ಞೆಗಿಂತಲೂ ಹೆಚ್ಚೆಂದು ನಾನು ಭಾವಿಸಿರುವೆನು. ನಾನು ಶಿಕ್ಷಣ ವ್ಯವಸಾಯವನ್ನು ಮಾಡಲಿಕ್ಕೆಸ್ವಸಂ ತೋಷದಿಂದ ಸಿದ್ಧಳಾಗಿರುವೆನು' ಎಂದು ರಮಾದೇವಿಯು ಒಪ್ಪಿಗೆಯಿತ್ತಳು

'ನಿಮ್ಮನ್ನು ಹೆಣ್ಣು ಹುಡುಗೆಯರ ಎರಡನೇ ನಂಬರ ಶಾಲೆಯ ಮುಖ್ಯ ಶಿಕ್ಷಕಿಯರನ್ನಾಗಿ ನಿಯಮಿಸಿರುವೆನು ನಾಳೆನಿಂದ ಕೆಲಸಕ್ಕೆ ತೊಡಗಿರಿ. ಸಧ್ಯದಲ್ಲಿ ತಿಂಗಳೊಂದಕ್ಕೆ ಇಪ್ಪತ್ತೈದು ರೂಪಾಯಿಗಳ ವೇತ ನವು ನಿಮಗೆ ದೊರೆಯುವದು.'

ಸಾಹೇಬರ ಅನುಗ್ರಹದಿಂದ ಆ ಬಡ ದಂಪತಿಗಳಿಗಾದಆನಂದವನ್ನು ಬಣ್ಣಿಸಲಳವಲ್ಲ. ಪರೀಕ್ಷೆಯ ಸಂಭಾವನಾ ಪತ್ರ ಹೊಂದಿದ್ದ ಹಾಗು ನಾಲ್ಕೈದು ವರ್ಷ ಕೆಲಸ ಮಾಡಿದ ಸುರೇಂದ್ರರಾಯನ ಸಂಬಳವೂ ಇಪ್ಪ ತ್ತೈದು ; ಯಾವ ಸಂಭಾವನಾಪತ್ರಗಳಿಲ್ಲದ ಹಾಗು ಇಂದೇ ಕೆಲಸ ಮಾಡ ತೊಡಗುವ ರಮಾದೇವಿಯ ವೇತನವೂ ಇಪ್ಪತ್ತೈದು! ಇಷ್ಟರಿಂದಲೇ ಕೃಷ್ಣರಾಯರು ನಿಗ್ರಹಾನುಗ್ರಹ ಶಕ್ತಿಸಂಪನ್ನರೂ ಕರ್ತುಮಕರ್ತುಂ ಶಕ್ತಿ ಯುಳ್ಳವರೂ ಆಗಿದ್ದರೆಂದು ತರ್ಕಿಸಬಹುದು. ಅವರು ವಿದ್ಯಾಸಂಸ್ಥೆಯ ಮಟ್ಟಿಗಾದರೂ ವಿಧಾತರಾಗಿದ್ದರೆನ್ನಲಿಕ್ಕೆ ಅಡ್ಡಿಯಿಲ್ಲ.

ಬಡತನದ ಬಾಳಿನ ಆ ದಂಪತಿಗಳು ಸಾಹೇಬರ ಅನುಗ್ರಹದಿಂದ ಸಂಭ್ರಮಗೊಂಡರು. ಅವರು ಕೃತಜ್ಞತೆಯಿಂದ ಸಾಹೇಬರನ್ನು ನೋಡ ತೊಡಗಿದರು. ಸಾಹೇಬರಾದರೋ ಯಾವದೋ ಒಂದು ದೃಷ್ಟಿಯಿಂದ ರಮಾದೇವಿಯನ್ನು ನೋಡುತ್ತಲಿದ್ದರು ಮುಂದೆ ಸ್ವಲ್ಪ ವೇಳೆಯ ಮೇಲೆ ಅವರು ರಾಧಾದೇವಿಯನ್ನೊಡಗೊಂಡು ಸುರೇಂದ್ರರಾಯನ ಮನೆಯಿಂದ ಹೊರಟು ಹೋದರು.

——

# ಕೃಷ್ಣನ ಗೋಕುಲ.

ವಿದ್ಯಾಧಿಕಾರಿಗಳಾದ ಕೃಷ್ಣರಾಯರು ತಮ್ಮ ದಿವಾಣಖಾನೆಯಲ್ಲಿ ಕುರ್ಚಾಸನದ ಮೇಲೆ ಕುಳಿತು, 'ವಾರಂಗನೆ' ಎಂಬ ಕಥೆಯನ್ನು ಓದತೊಡಗಿದ್ದರು. ಇಚ್ಛಿತವಿಷಯವಿದ್ದುದರಿಂದಲೋ-ಏನೋ ಅವರು ಅದರಲ್ಲಿ ತಲ್ಲೀನರಾಗಿ ಹೋಗಿದ್ದರು. ಎದುರಿಗೆ ಇಬ್ಬರು ನಿಂತುಕೊಂಡು ನಾಲ್ಕೆಂಟು ಸಾರೆ ನಮಸ್ಕಾರ ಮಾಡಿದ್ದರೂ, ಅವರ ಕಡೆಗೆ ಕೃಷ್ಣರಾಯರ ಲಕ್ಷ್ಯವಿದ್ದಿಲ್ಲ. ಎಷ್ಟೋ ವೇಳೆಯ ಮೇಲೆ ಎದುರಿಗೆ ನಿಂತವರಲ್ಲೊಬ್ಬನು ಧೈರ್ಯದಿಂದ—'ರಾವಸಾಹೇಬ!' ಎಂದು ನುಡಿದು, ಕೈಜೋಡಿಸಿದನು. ರಾವಸಾಹೇಬರ ಮುಖವು ಮೇಲಾಯಿತು. ಮತ್ತೊಬ್ಬನೂ ಅಭಿವಂದಿಸಿದನು. ಅನಂತರದಲ್ಲಿ ಸಾಹೇಬರು ಅವರನ್ನು ಕುರಿತು—'ಯಾರು? ಆನಂದರಾಯ ಮಾಸ್ತರರೇನು? ಇನ್ನೊಬ್ಬರಾರು? ಗೋವಿಂದರಾಯ ಮಾಸ್ತರರಲ್ಲವೆ?'

'ಹೌದು ರಾವಸಾಹೇಬ!' ಎಂದು ಗೋವಿಂದರಾಯನು ಹೇಳಿದನು.

'ಇದೇನು? ಆನಂದ-ಗೋವಿಂದರಿಬ್ಬರೂ ಬಂದಿರುವಿರಿ?'

'ತಾವು ನಮ್ಮನ್ನು ಕರೆತರಲಿಕ್ಕೆ ಪೇದೆಯನ್ನು ಕಳುಹಿಸಿದ್ದರಿಂದ ಬಂದೆವು' ಎಂದು ಆನಂದರಾಯನು ಹೇಳಿದನು.

'ಓಹೋ! ನೆನಪಾಯಿತು. ಹೌದು. ಒಂದು ಕೆಲಸದ ಸಲುವಾಗಿ ನಾನು ನಿಮ್ಮನ್ನು ಕರೆಯಿಸಿದೆನು.'

'ಯಾವ ಕೆಲಸವು?' ಆನಂದರಾಯನು ಕೇಳಿದನು.

'ಆನಂದರಾಯರೆ, ಗೋವಿಂದರಾಯರೆ, ಇತ್ತೀಚೆಗೆ ನೀವು ಮದಾಂಧರಾದಂತೆ ಭಾಸವಾಗುವದು. ಕರ್ತುಮಕರ್ತುಂ ಶಕ್ತಿಯುಳ್ಳ ನನ್ನ ಅಜ್ಞೆಯನ್ನು ನೀವು ಬಾಲಕರ ಪ್ರಳಾಪವೆಂದು ತಿಳಿದಂತೆ ಸ್ಪಷ್ಟವಾಗುವದು' ಎಂದು ಕೃಷ್ಣರಾಯರು ದರ್ಪೋಕ್ತಿಯಿಂದ ನುಡಿದರು.

'ಖಾವಿಂದ! ನಿಮ್ಮ ಆಜ್ಞೆಯೆಂದರೆ ಅದು ಅಮಗೆ ದೇವಾಜ್ಞೆಗಿಂತಲೂ ಅಧಿಕವಾದದ್ದು. ಒಂದು ವೇಳೆ ದೇವಾಜ್ಞೆಯನ್ನು ಧಿಃಕರಿಸೇವು; ಆದರೆ ನಿಮ್ಮ ಆಜ್ಞೆಯೊಳಗಿನ ಒಂದು ಅಕ್ಷರವನ್ನು ಸಹ ನಾವು ತೆಗೆದು ಹಾಕಲಾರೆವು' ಎಂದು ಗೋವಿಂದರಾಯನು ಕೈಜೋಡಿಸಿ ನುಡಿಯುವಾಗ ಆನಂದರಾಯನು 'ಹೌದು ಖಾವಿಂದ, ಹೌದು ರಾವಸಾಹೇಬ, ಹೌದು ಮೆಹರ್ಬಾನ!' ಎಂದು ಅನ್ನತೊಡಗಿದ್ದನು.

'ಮಾತಿನಲ್ಲಿ ವ್ಯಕ್ತವಾಗುವ ಭಕ್ತಿಯೂ, ಕರ್ತವ್ಯದಕ್ಷತೆಯೂ ಕೃತಿಯಲ್ಲಿಲ್ಲ ನೀವಿಬ್ಬರೂ ಉನ್ಮತ್ತರಾಗಿರುವಿರಿ. ನನ್ನ ಸಹಾಯಕರೆಂಬ ಉದ್ದೇಶದಿಂದ ನಿಮಗೆ ಎಷ್ಟು ವಿಧದಿಂದ ಉತ್ತೇಜನ ಕೊಟ್ಟಿರುವೆನೆಂಬದನ್ನು ನೆನಪಿನಲ್ಲಿಟ್ಟಿರ ವಿರೇನು? ನಿಮಗಿಂತ ಉತ್ತಮ ಕೆಲಸ ಮಾಡುವವರೂ, ನಿಮಗಿಂತ ಹೆಚ್ಚು ದುಡಿದವರೂ ಆದ ಜನರನ್ನು ಹಿಂದೆ ಹಾಕಿ, ನಿಮ್ಮನ್ನು ಮುಂದೆ ತಂದದ್ದರ ಅರಿವು ನಿಮಗಿದ್ದಂತೆ ತೋರಲಿಲ್ಲ. ನನ್ನ ಆಜ್ಞೆಯನ್ನು ಉಪೇಕ್ಷಿಸಿದ್ದಕ್ಕಾಗಿ ನಿಮ್ಮಿಬ್ಬರಿಗೂ ತೀವ್ರವೇ ದಂಡಣೆ ವಿಧಿಸಲ್ಪಡುವದು ಒದ್ ಮಾಪರೆ, ಈ ವಿದ್ಯಾಧಿಕಾರಿಯನ್ನು ವಿದ್ಯಾರ್ಥಿಯೆಂದು ತಿಳಿದಿರುವಿರಾ?'

ಕೃಷ್ಣರಾಯರ ಗರ್ಜನೆಯಿಂದ ಆನಂದರಾಯ-ಗೋವಿಂದರಾಯರ ಎದೆಯೊಡೆಯಿತು. ಅವರಿಬ್ಬರೂ ಪರಸ್ಪರರನ್ನು ಮಿಕಿಮಿಕಿ ನೋಡಹತ್ತಿದರು ಈಗ ಅವರ ಸರ್ವಾಂಗವು ಥರಥರನೆ ನಡುಗತೊಡಗಿತ್ತು. ಅವರ ಅವಸ್ಥೆಯನ್ನು ಕಂಡು ಕೃಷ್ಣರಾಯರ ಸಂತಾಪವು ದ್ವಿಗುಣಿತವಾಯಿತು. ತಮ್ಮ ತಿಳುವಳಿಕೆಯ ಮೇರೆಗೆ ಅವರಿಬ್ಬರೂ ಅಪರಾಧಿಗಳಿರುವರೆಂದು ಅವರು ಬಗೆದರು.

'ಮೂರ್ಖರೇ, ನಿಮ್ಮ ವೇತನವನ್ನು ಕಡಿಮೆ ಮಾಡಿ ನಿಮ್ಮನ್ನು ಮಲೆನಾಡಿನ ಪ್ರದೇಶಕ್ಕೆ ಕಳುಹಿಸುವೆನು!'

ವಿದ್ಯಾಧಿಕಾರಿಗಳ ಈ ಕ್ರುದ್ಧವಾಣಿಯಿಂದ ಆ ಮಾಸ್ತರರಿಬ್ಬರ ಜೀವವು ನೆತ್ತಿಯಿಂದಲೇ ಹೋದಂತಾಯಿತು! ವರಿಷ್ಠರಿಗೆ ಏನು ಉತ್ತರ ಕೊಡಬೇಕೆಂಬುದು ಇಬ್ಬರಿಗೂ ತಿಳಿಯದಾಯಿತು. ಕೆಲವು ವೇಳೆಯ ಮೇಲೆ ಆನಂದರಾಯನು ಧೈರ್ಯ ತಂದುಕೊಂಡು-'ಖಾವಿಂದ, ನಮ್ಮಿಂದ ತಿಲಾಂಶವಾದರೂ ಅಪರಾಧ ಘಟಿಸಿಲ್ಲ. ನಮ್ಮ ತಪ್ಪು ನಮ್ಮ ಕೊರಳಿಗೆ ಕಟ್ಟಿ, ನಮಗೆ ಬೇಕಾದಂತಹ ಶಾಸನವನ್ನು ವಿಧಿಸಿರಿ.'

'ಕತ್ತೆ! ಹೀಗೆ ಮಾತನಾಡಲಿಕ್ಕೆ ನಿನಗೆ ನಾಚಿಕೆ ಬರುವದಿಲ್ಲವೆ? ಕತ್ತೆ ಕಾಯಲು ಯೋಗ್ಯರಾದ ನಿಮ್ಮನ್ನು ಶಿಕ್ಷಣವ್ಯವಸಾಯದಲ್ಲಿ ತೆಗೆದುಕೊಂಡು ನಾನೇ ಕತ್ತೆಯಾಗಿರುವೆನು.'

'ನಮ್ಮ ತಪ್ಪು ತೋರಿಸಿಕೊಟ್ಟು ಬೇಕಾದಂತಹ ದಂಡನೆ ವಿಧಿಸಿರಿ' ಎಂದು ಗೋವಿಂದರಾಯನೂ ಧೈರ್ಯ ತಂದುಕೊಂಡು ಮಾತಾಡಿದನು.

'ತಪ್ಪು ತೋರಿಸಿಕೊಡಬೇಕೇ?' ಎಂದು ಕೃಷ್ಣರಾಯರು ನುಡಿದು, ಧ್ವನಿಯಲ್ಲಿ ಶಕ್ಯವಿದ್ದಷ್ಟು ಕರ್ಕಶತನವನ್ನು ತಂದುಕೊಂಡು,-'ರಮಾದೇವಿಯನ್ನು ಶಿಕ್ಷಣವ್ಯವಸಾಯದಲ್ಲಿ ತೊಡಗಿಸಿಕೊಳ್ಳಬೇಕೆಂದು ನಾನು ಸಾಹಸ

ನಡೆಯಿಸಿರುವದು ನಿಮ್ಮ ಲಕ್ಷ್ಯದಲ್ಲಿರುವದೇ?'

'ಹೌದು ಸಾಹೇಬರೆ!' ಇಬ್ಬರು ಮಾಸ್ತರರೂ ಏಕಕಂಠದಿಂದೆಂದರು.

'ಸುರೇಂದ್ರರಾಯನಿಗೆ ಚನ್ನಾಗಿ ಉಪದೇಶಿಸಿ ಅವನ ಹೆಂಡತಿಯನ್ನು ಶಿಕ್ಷಣವ್ಯವಸಾಯಕ್ಕೆ ತೊಡಗಿಸುವಂತೆ ಮಾಡಬೇಕೆಂದು ನಾನು ನಿಮಗೆ ತಿಳಿಸಿದ್ದೆನು. ಆಗ ನಿಮ್ಮಿಂದ ನನಗೆ ತಿಲಾಂಶವೂ ಸಹಾಯವಾಗಲಿಲ್ಲ.'

'ನಾವು ಸುರೇದ್ರರಾಯನನ್ನು ಕಂಡು ಈ ವಿಷಯದಲ್ಲಿ ಬಹು ಪರಿಯಾಗಿ ಹೇಳಿದೆವು. ರಾಧಾದೇವಿಯವರಿಗೂ ಈ ಸಂಗತಿ ಗೊತ್ತಿದೆ. ಸುರೇಂದ್ರರಾಯನು ನಮ್ಮ ಮಾತನ್ನು ಆಗ ದುರ್ಲಕ್ಷಿಸಿದನು. ನೀವೇ ಮನೆತನಕ ಹೋಗಿ ದುಂಬಾಲಬಿದ್ದ ಮೇಲೆ, ವರಿಷ್ಠರ ಆಜ್ಞೆಯನ್ನು ಮೀರಲಿಕ್ಕಾಗದೆ ಸಮ್ಮತಿಸಿದನು' ಎಂದು ಆನಂದರಾಯನು ಹೇಳಿದನು.

'ನೀವು ಮನಸ್ಸಿನ ಮೇಲೆ ತೆಗೆದುಕೊಂಡು ಕೆಲಸ ಮಾಡಿಲ್ಲ. ನಾನು ಸುರೇಂದ್ರರಾಯನ ಮನವೊಲಿಸಲಿಕ್ಕೆ ಹೆಚ್ಚು ಶ್ರಮ ತೆಗೆದುಕೊಳ್ಳಲಿಲ್ಲ.' ಎಂದು ಕೃಷ್ಣರಾಯರು ನುಡಿದು, 'ಆ ಮಾತಿರಲಿ. ದಿವಾಣರ ಶಕುಂತಲೆಯ ವಿಷಯವೇನಾಯಿತು?'

'ಖಾವಿಂದ, ನಿಮ್ಮಿಂದ ಅನೇಕ ವಿಧದ ಪ್ರೋತ್ಸಾಹನೆ ಹೊಂದಿದವರಾದ ನಮ್ಮಿಂದ ನಿಮ್ಮ ಒಂದೆರಡು ಕೆಲಸಗಳು ನೆರವೇರದ್ದಕ್ಕಾಗಿ ಮನಸ್ಸು ಉದಾಸವಾಗಿದೆ. 'ಗೋಕುಲದಲ್ಲಿ ರಾಸಕ್ರೀಡೆಯಾಡಲಿಕ್ಕೆ ಕುಲಯುವತಿಯರು ಬರುತ್ತಿರುವದಿಲ್ಲ; ವಾರಾಂಗನೆಯರನ್ನು ಹುಡುಕಿ ತರುವದಕ್ಕೆ ನಿಮ್ಮ ಸಾಹೇಬರಿಗೆ ಹೇಳು' ಎಂದು ದಿವಾಣ ಮಾಧವರಾಯನು ನಿಷ್ಠುರವಾಗಿ ಹೇಳಿದನು.' ಎಂದು ಆನಂದರಾಯನು ಅಂಜುತ್ತಂಜುತ್ತ ನುಡಿದನು.

ಮಾಧವರಾಯನ ವಿಶೇಷಣದಿಂದ ಕೃಷ್ಣರಾಯನ ಹೃದಯವು ಸಂತಪ್ತವಾಯಿತು; ಆದರೆ ಅವನು ಮಾಡುವದೇನ? ಸಾಹೇಬರ ಸಿಟ್ಟು-ಸಿಡುಕುತನಗಳಿಗೆ ಬೆದರಲಿಕ್ಕೆ ಅವನೇನು ಶಿಕ್ಷಣಸಂಸ್ಥೆಯೊಳಗಿನ ಶಿಕ್ಷಕನಿದ್ದಿಲ್ಲ. ಕೃಷ್ಣರಾಯನು ಸಂತಾಪಯುಕ್ತವಾಣಿಯಿಂದಲೆ-'ಮಾಧವರಾಯನು ಹೀಗೆ ನುಡಿದನೆ?'

'ಖಾವಿಂದರೆದುರಿಗೆ ನಾನು ಸುಳ್ಳಾಡುವದಿಲ್ಲ. ವಿಜನಗರ ಸಂಸ್ಥಾನದ ವಿದ್ಯಾಸಂಸ್ಥೆಯೆಂದರೆ, ಕೃಷ್ಣನ ಗೋಕುಲವಾಗಿರುವದೆಂದು ಅವನು ಆಡಿ ತೋರಿಸಿಗನು,' ಎಂದ ಗೋವಿಂದರಾಯನೂ ಹೇಳಿದನು.

'ಒಳ್ಳೇದು. ಪ್ರಸಂಗವೊದಗಿದಾಗ ನೋಡೋಣ!' ಎಂದು ಕೃಷ್ಣರಾಯನು ಮಾನವನ್ನು ತುಂಬಿಕೊಂಡು, ನಾನು ವಿದ್ಯಾಸಂಸ್ಥೆಯನ್ನು

ಗೋಕುಲವನ್ನಾದರೂ ಮಾಡುವೆನು; ವೃಂದಾವನವನ್ನಾದರೂ ಮಾಡುವೆನು; ಇಲ್ಲವೆ ಕುಂಜವನವನ್ನಾದರೂ ಮಾಡುವೆನು. ಅಧಿಕಾರ ಬಲದಿಂದ ನಾನು ಗೋಕುಲದ ಕೃಷ್ಣನಾಗುವೆನು; ವೃಂದಾವನದ ಮಾಧವನಾಗುವೆನು; ಕುಂಜವನದ ವೇಣುಗೋಪಾಲನಾಗುವೆನು. ಅದರ ಗೊಡವೆ ತನಗೇನು? ಹೇಗೆ ನಡೆದರೂ ನನ್ನನ್ನು ಕೇಳುವವರಾರು?'

'ತಮ್ಮ ಅಧಿಕಾರದ ಮಹತಿಯು ಮಾಧವರಾಯನಿಗೆ ಗೊತ್ತಿಲ್ಲ. ಅಂತೆಯೇ ಹಾಗೆ ಮೂರ್ಖನಂತೆ ಮಾತಾಡಿಬಿಟ್ಟನು.' ಆನಂದರಾಯನು ಕೃಷ್ಣರಾಯರನ್ನು ಉಬ್ಬಿಸಬೇಕೆಂದು ಮಾತನಾಡಿದನು.

'ಇರಲಿ. ಈ ವಿಷಯದ ಇತ್ಯರ್ಥವನ್ನು ಯಥಾವಕಾಶವಾಗಿ ಕಾಣುತ್ತೇನೆ,' ಎಂದು ನುಡಿದು, ಕೃಷ್ಣರಾಯರು—'ವಕೀಲ ಗೋವರ್ಧನರಾಯನು ರಾಧಾದೇವಿಯ ಶೀಲಕ್ಕೆ ಭಂಗವನ್ನುಂಟುಮಾಡುವಂತಹ ವರ್ತನವನ್ನಿರಿಸಿರುವನೆಂದು ಗೊತ್ತಾಗಿದೆ. ಇಂದು ಅವನು ಒಂದು ಇಳಕಲ್ಲ ಸೀರೆಯನ್ನು ರಾಧಾದೇವಿಗೆ ಕಳಿಸಿದ್ದನು. ಅಕಸ್ಮಾತ್ತಾಗಿ ನನಗೆ ಈ ಸುದ್ದಿಯು ತಿಳಿಯಿತು. ಕೂಡಲೆ ನಾನು ರಾಧಾದೇವಿಗೆ ಸಿಟ್ಟು ಮಾಡಿ, ಸೀರೆಯನ್ನು ಅವನ ಕಡೆಗೆ ಕಳುಹಿಸುವಂತೆ ಹೇಳಿದೆನು. ರಾಧಾದೇವಿಯು ಶಿಕ್ಷಕಿಯಿರುವಳು. ಅವಳ ಶೀಲಕ್ಕೂ ಮಾನಕ್ಕೂ ಭಂಗ ತರುವಂತಹ ಕೃತಿಗಳು ಜರುಗಿದರೆ, ಮುಂದೆ ಪ್ರಸಂಗವು ಕಠಿಣವಾಗುವದೆಂದು ಅವನಿಗೆ ಹೇಳು. ಮೊದಲಿನ ಸ್ನೇಹದ ಗುಂಗಿನಲ್ಲಿ ಅವನು ಮನಬಂದಂತೆ ವರ್ತಿಸತೊಡಗಿರುವನು. ರಾಧಾದೇವಿಯು ಎಷ್ಟು ಕಟ್ಟುನಿಟ್ಟಿನವಳಾಗಿರುವಳೆಂಬದನ್ನು ಆ ಕಾಮಾಂಧನು ಅರಿತಿಲ್ಲ. ಅಡ್ಡದಾರಿ ಹಿಡಿಯಲಿಕ್ಕೆ ಅವಳಿಗೇನು ನೌಕರಿ ಬೇಡಾಗಿರುವದಿಲ್ಲೆಂದು ಗೋವರ್ಧನರಾಯನಿಗೆ ತಿಳಿಸಲಿಕ್ಕೆ ಬೇಕು. ಈ ಕಾರ್ಯವನ್ನು ನೀವು ಇಂದೇ ನೆರವೇರಿಸಿರಿ.'

'ಅವಶ್ಯವಾಗಿ ನೆರವೇರಿಸುವೆವು' ಎಂದು ಮಾಸ್ತರರಿಬ್ಬರೂ ನುಡಿದರು.

'ನಿಮಗೆ ಇನ್ನೊಂದು ಮಹತ್ವದ ವಿಷಯ ಹೇಳಬೇಕಾಗಿದೆ.'

'ಯಾವ ವಿಷಯ?' ಎಂದು ಆನಂದರಾಯನು ಆತುರದಿಂದ ಕೇಳಲು,

'ಸುರೇಂದ್ರರಾಯನ ಹೆಂಡತಿಯಾದ ರಮಾಬಾಯಿಯನ್ನು ಮುಖ್ಯ ಶಿಕ್ಷಕಿಯನ್ನು ಮಾಡಿ, ಹುಡುಗಿಯರ ಎರಡನೇ ನಂಬರಶಾಲೆಯಲ್ಲಿ ನಿಯಮಿಸಿರುವದನ್ನು ನೀವು ಬಲ್ಲಿರಿ. ಸುರೇಂದ್ರರಾಯನು ಬಡವನು. ಅವನು ದ್ರವ್ಯದಾಶೆಯಿಂದಲೂ. ರಮಾದೇವಿಯು ಅಲಂಕಾರಗಳ ಆಶೆಯಿಂದಲೂ

ನನ್ನ ಸೂತ್ರದ ಗೊಂಬೆಯಂತೆ ಆಗುವರೆಂಬುದರಲ್ಲಿ ಸಂದೇಹವಿಲ್ಲ. ನೀವು ಅವರ ಮನಸ್ಸನ್ನು ಸಂತುಷ್ಟಗೊಳಿಸಿ, ನನಗೆ ಆಜ್ಞಾಧಾರಕರಾಗುವಂತೆ ಮಾಡಬೇಕು. ಈ ಕೆಲಸವನ್ನು ನೆರವೇರಿಸಿದರೆ ನಿಮಗೆ ಲಾಭವಾಗುವದು. ರಾಧಾದೇವಿಯೂ ಈ ಕಾರ್ಯದಲ್ಲಿ ನನಗೆ ಅನುಕೂಲೆಯಾಗಿರುವಳು. ಒಬ್ಬರಿಗಿಂತ ಇಬ್ಬರು-ಮೂವರು ಲೇಸು.'

'ನಿಮ್ಮ ಮಾತು ನಿಜವು' ಎಂದು ಆನಂದರಾಯನು ನುಡಿದು— 'ನಾನು ರಮಾದೇವಿಯ ಮನವೊಲಿಸಲಿಕ್ಕೆ ಪ್ರಯತ್ನಿಸುವೆನು

'ಸುರೇಂದ್ರರಾಯನನ್ನು ಎಳೆಗೆ ತರುವದು ಎಷ್ಟೊತ್ತಿನ ಕೆಲಸ!' ಎಂದು ಗೋವಿಂದರಾಯನು ಆತ್ಮೈತೆಯಿಂದ ಮಾತಾಡಿದನು.

'ಹಾಗಾದರೆ ಈ ಕಾರ್ಯವನ್ನು ಮನವಟ್ಟಿ ಮಾಡಿರಿ' ಎಂದು ಕೃಷ್ಣರಾಯನು ಹೇಳಿ—'ರಾಧಾದೇವಿಯನ್ನು ಇತ್ತಕಡೆಗೆ ಕಳುಹಿಸಿ ನೀವು ಮನೆಗೆ ಹೋಗಿರಿ.'

ಕೃಷ್ಣರಾಯರ ಆಜ್ಞೆಯನ್ನು ಶಿರಸಾವಹಿಸಿ, ಆನಂದ-ಗೋವಿಂದರು ಅಲ್ಲಿಂದ ತೆರಳಿದರು. ವಿದ್ಯಾಧಿಕಾರಿಗಳು ತಮ್ಮ ಮೇಲೆ ಹೊರಿಸಿದ ಆ ಪ್ರಚಂಡ ಕಾರ್ಯಗಳನ್ನು ಹೇಗೆ ಈಡೇರಿಸಬೇಕೆಂಬುದರ ವಿಷಯವಾಗಿ ಅವರಿಬ್ಬರೂ ದೀರ್ಘ ವಿಚಾರಗ್ರಸ್ತರಾಗಿದ್ದರು.

ದಿವಾಣರ ಮಾಧವರಾಯನ ವಿಶೇಷಣದಂತೆ ಕೃಷ್ಣರಾಯನು ವಿದ್ಯಾ ಸಂಸ್ಥೆಯನ್ನು ಕೃಷ್ಣನ ಗೋಕುಲವನ್ನೇ ಮಾಡಬೇಕೆಂಬ ಸಾಹಸವಿಟ್ಟಂತೆ ಭಾಸವಾಗುತ್ತಿತ್ತು. ರಾಧಾದೇವಿಯು ಕೃಷ್ಣರಾಯನ ಪಟ್ಟಶಿಷ್ಯಿಣಿಯು ಳಾಗಿದ್ದಳು. ಅವಳು ವರಿಷ್ಠರ ಸಲುವಾಗಿ ಬೇಕಾದಂತಹ ಉಚ್ಚನೀಚ ಕೃತ್ಯ ಗಳನ್ನು ನೆರವೇರಿಸುವಂತಹ ಏಕನಿಷ್ಠಳಿದ್ದಳು. ಇನ್ನು ಉಪಶಿಷ್ಯರೆಂದರೆ, ಆನಂದ-ಗೋವಿಂದರು. ಇವರಾದರೂ ಕೃಷ್ಣರಾಯರನ್ನು ಸಂತುಷ್ಟಗೊಳಿಸ ಲಿಕ್ಕೆ ಅನುಪಮ ಸ್ವಾರ್ಥತ್ಯಾಗ ಮಾಡುತ್ತಿದ್ದರು ಕೃಷ್ಣರಾಯರ ಕೃಷ್ಣವೃತ್ತಿ ಯನ್ನು ಶಾಂತಪಡಿಸಲಿಕ್ಕೆ ಇವರು ಎಷ್ಟೋ ಪರಾಕ್ರಮದ ಕೆಲಸ ಮಾಡಿ ದ್ದರು. ಆನಂದರಾಯನಂತೂ ಕಡುಗಲಿಯು. ಇವನು ಶಿಕ್ಷಣಸಂಸ್ಥೆಯೊಳಗಿನ ಚಲುವೆಯರಾದ ಶಿಕ್ಷಕಿಯರ ಮನವೊಲಿಸಿ, ಅವರನ್ನು ಕೃಷ್ಣರಾಯರ ಸ್ನೇಹಾಂಕಿತರನ್ನಾಗಿ ಮಾಡಿದ್ದನು. ರಾಧಾ-ಕೃಷ್ಣರ ಪ್ರಥಮ ಸ್ನೇಹಮಿಲ ನಕ್ಕೆ ಇವನೇ ಕಾರಣನಾಗಿದ್ದನು ಈಗ ಕೃಷ್ಣನಿಗೆ ರಾಧೆಯಂತಹ ಸ್ನೇಹಿ ತೆಯು ದೊರೆತಿರಲು, ಅವನ ರಾಸಕ್ರೀಡೆಯ ಸಮಾರಂಭವು ನಡೆಯಲಿಕ್ಕೆ ಆನಂದ ಗೋವಿಂದರಂತಹ ಸ್ವಯಂಸೇವಕರ ಸಹಾಯದ ಆವಶ್ಯ

ಕತೆಯು ವಿಶೇಷವಾಗಿದ್ದಿಲ್ಲ. ಕೆಲಕೆಲವು ಪ್ರಸಂಗಗಳಲ್ಲಿ ರಾಧಾದೇವಿಯ ಸಾಹಸವು ಕುಂಠಿತವಾಗುತ್ತಿದ್ದರೆ ಮಾತ್ರ ಅವರು ಆನಂದ-ಗೋವಿಂದ ನ್ನು ಬಯಸುತ್ತಿದ್ದರು ಗೋವಿಂದರಾಯನಿಂದ ನೆರವಾಗದಂತಹ ಎಷ್ಟೋ ಕೆಲಸ ಗಳು ಆನಂದರಾಯನಿಂದ ನೆರವೇರಿದ್ದರಿಂದ ಅವನು ಏಕನಿಷ್ಠ ಸಾಹಸಿ ಯೆಂಬ ವಿಷಯವಾಗಿ ಕೃಷ್ಣರಾಯನಿಗೆ ಬಲವಾದ ನಂಬಿಕೆಯಾಗಿತ್ತು. ಆನಂದರಾಯನು ವೇತನಾಭಿವೃದ್ಧಿಯ ಸಲುವಾಗಿ ಬೇಕಾದಂತಹ ಕಾರ್ಯ ಗಳನ್ನು ಮಾಡುತ್ತಿದ್ದನು. ಕಂಕಣನಾದವು ಕರ್ಣರಂಧ್ರದಲ್ಲಿ ನಿನಾದಗೊಂಡ ಹೊರತು ವಿದ್ಯಾಧಿಕಾರಿಗಳ ಲೆಕ್ಕಣಿಕೆಯಲ್ಲಿ ಮಾರ್ದ್ರವತೆಯೂ ಅನುಗ್ರಹ ಶಕ್ತಿಯೂ ಉಂಟಾಗಲಾರವೆಂದು ಅವನ ಮನವರಿಕೆಯಾಗಿತ್ತು. ವರಿಷ್ಠರ ಮನವನ್ನು ಪ್ರಫುಲ್ಲಿತ ಮಾಡುವದಕ್ಕಾಗಿ ಅವನು ಎಷ್ಟೋ ಸಾರೆ ತನ್ನ ಧರ್ಮಪತ್ನಿಯ ಬಳೆಗಳ ವಶೀಲಿ ಸಹ ಹಚ್ಚಿದ್ದನು!

ಕೃಷ್ಣರಾಯರು ಮೊದ ಮೊದಲು ವಾರವನಿತೆಯರ ಒರಿಗೆ ಹತ್ತುವಂತಹ ಎಷ್ಟೋ ಸ್ತ್ರೀಯರನ್ನು ಶಿಕ್ಷಕಿಯರನ್ನಾಗಿ ಮಾಡಿದ್ದರು. ಸಾಮಾನ್ಯ ತರಗತಿಯ ಕುಲೀನ ಮನೆತನದಲ್ಲ ಸುಶಿಕ್ಷಿತರೂ ರೂಪವತಿಯರೂ ಆದ ಗೃಹಿಣಿಯರಿದ್ದರೆ, ಅವರಿಗೆ ಹೆಚ್ಚಿನ ವೇತನದ ಆಶೆ ಹಚ್ಚಿ, ಕೃಷ್ಣರಾಯರು ಅವರನ್ನು ಇತ್ತೀಚೆಗೆ ಶಿಕ್ಷಣಸಂಸ್ಥೆಯಲ್ಲಿ ಸೇರಿಸಿಕೊಳ್ಳತೊಡಗಿದ್ದರು. ಅವರ ಗುಪ್ತವೂ ಘಾತುಕವೂ ಅನೀತಿಯುಕ್ತವೂ ಆದ ಕಾರಸ್ಥಾನದ ರಹಸ್ಯವು ಎಷ್ಟೋ ಜನರಿಗೆ ತಿಳಿದಿತ್ತು. ಮಾಧವರಾಯನು ಈ ಗುಪ್ತ ರಹಸ್ಯವನ್ನು ಬಲವನಿದ್ದುದರಿಂದಲೇ ಅವನು ತನ್ನ ಪತ್ನಿಯನ್ನು ಶಿಕ್ಷಣವ್ಯವಸಾಯಕ್ಕೆ ತೊಡಗಿಸಲೊಪ್ಪಲಿಲ್ಲ. ಕೃಷ್ಣರಾಯರ ಸ್ತ್ರೀಶಿಕ್ಷಣ ಪ್ರಸಾರಣೆಯ ಉಚ್ಚತಮವಾದ ಧ್ಯೇಯದ ಬುಡದಲ್ಲಿ ಬಲವತ್ತರವಾದ ಪಾಪವು ಸಂಚಿತವಾಗಿರುವದೆಂಬದು ಅವನ ಅನುಭವಕ್ಕೆ ಬಂದಿತ್ತು.

ಕೃಷ್ಣರಾಯರ ಕೃಷ್ಣಕೃತ್ಯದ ಕೃಷ್ಣಚಿತ್ರವು ತಡವಾಗಿಯಾಗಲೊಲ್ಲದೇಕೆ, ವಿಜಯನಗರ ದರಬಾರದ ದೃಷ್ಟಿಗೆ ಬಿದ್ದಿತ್ತು, ಆದರೆ ವಿದ್ಯಾಧಿಕಾರಿಗಳಂತಹ ದೊಡ್ಡ ಗೃಹಸ್ಥರ ಈ ಆಚರಣೆಯನ್ನು ನಿಷೇಧಿಸಲಿಕ್ಕೆ ಅದು ಮನಸ್ಸು ಮಾಡಲಿಲ್ಲ. ದರಬಾರದೊಳಗಿನ ದೊಡ್ಡದೊಡ್ಡ ಅಧಿಕಾರಿಗಳು ಕೃಷ್ಣರಾಯರಿಗೆ ಪರಮ ಸ್ನೇಹಿತರಾಗಿದ್ದರು. ಸಂಸ್ಥಾನಾಧಿಪತಿಗಳಂತೂ ಅವರ ಕಡೆಗೆ ಕಣ್ಣೆತ್ತಿಸಹ ನೋಡುತ್ತಿದ್ದಿಲ್ಲ; ಯಾಕಂದರೆ, ವಿದ್ಯಾಧಿಕಾರಿಗಳುಅವರ ದೂರಿನ ಆಪ್ತರಾಗಿದ್ದರು ಈ ಹತ್ತುಗಡೆಯ ಮೂಲಕ ಓಲಗದ ದೊಡ್ಡ ಅಧಿಕಾರಿಗಳು ಕೃಷ್ಣರಾಯರ ಕೃಷ್ಣಕೃತ್ಯಗಳ ಕಡೆಗೆ ದುರ್ಲಕ್ಷ್ಯ ಮಾಡಿದ್ದರು.

ವಿಜಯನಗರ ರಾಜಧಾನಿಯೊಳಗಿನ ಪ್ರಜಾಜನರೂ, ಸಂಸ್ಥಾನದೊಳಗಿನ ಪ್ರಜಾಜನರೂ ಕೃಷ್ಣರಾಯನ ವಿರುದ್ಧವಾಗಿ ಸರಕಾರಕ್ಕೆ ವಿನಂತಿಪತ್ರಿಕೆಗಳನ್ನು ಕಳುಹಿಸಿದ್ದರು; ಹಾಗು ಕೆಲವು ಪ್ರಮುಖರು ಸಮಕ್ಷಮ ಹೇಳಿದ್ದರು; ಆದರೆ ಅವರ ಸಾಹಸವು ಅರಣ್ಯರೋದನದಂತಾಗಿತ್ತು. ತಮ್ಮ ವಿರುದ್ಧವಾಗಿ ಪ್ರಜೆಗಳಲ್ಲಿ ಚಲನವಲನ ಮಾಡತೊಡಗಿರುವ ಸಂಶಯದಿಂದ ಕೃಷ್ಣರಾಯರು ಕೆಲ ಜನ ಶಿಕ್ಷಕರಿಗೆ ಕಠಿಣವಾದ ಶಾಸನಗಳನ್ನು ವಿಧಿಸಿದ್ದರು; ಒಬ್ಬಿಬ್ಬರಂತು ಕೆಲಸದಿಂದ ತಳ್ಳಲ್ಪಟ್ಟಿದ್ದರು.

ಶಿಕ್ಷಣ ವ್ಯವಸಾಯದಲ್ಲಿ ಪಂಗ್ತಿಪ್ರಪಂಚಕ್ಕೆ ಮೇರೆದಪ್ಪಿತ್ತು. ಕೃಷ್ಣರಾಯರ ಕಾಮದೇವನ ಕಾರಭಾರವನ್ನು ನಡೆಯಿಸುವ ಶಿಕ್ಷಕ-ಶಿಕ್ಷಕಿಯರ ಸುಖ-ಸೌಕರ್ಯಗಳಿಗೆ ಯಾವ ಬಗೆಯ ವ್ಯಾಹತಿಯೂ ಇದ್ದಿಲ್ಲ. ಅವರು ತಮ್ಮ ಕರ್ತವ್ಯವಾದ ಶಿಕ್ಷಣಕಾರ್ಯವನ್ನು ಸ್ವಚ್ಛಂದವಾಗಿ ಆದಷ್ಟು ಮಾಡುತ್ತಿದ್ದರೂ, ಪ್ರತಿವರ್ಷ ಅವರಿಗೆ ಸಂಭಾವನೆ-ಪ್ರಶಂಸಾಪತ್ರಗಳು ದೊರೆಯದೆ ಇರುತ್ತಿದ್ದಿಲ್ಲ. ಮೇಲ್ತರಗತಿಯ ವರ್ಗದಲ್ಲಿ ಗಣಿಸಲ್ಪಟ್ಟ ಈ ಜನರು ನಿತ್ಯದಲ್ಲಿ ವಿದ್ಯಾಲಯಕ್ಕೆ ಹೋಗದಿದ್ದರೂ ಅವರ ಮಾಸಿಕ ವೇತನಕ್ಕೆ ಬಾಧೆಯಿದ್ದಿಲ್ಲ. ಕೆಲ ಘನವಂತರಂತು ತಿಂಗಳುಗಟ್ಟಲೆ ಶಾಲೆಗೆ ಭೆಟ್ಟಿಯನ್ನೇ ಕೊಡುತ್ತಿದ್ದಿಲ್ಲ. ರಾಧಾದೇವಿ, ಆನಂದ-ಗೋವಿಂದರಂತಹ ಶಿಕ್ಷಕಿ ಶಿಕ್ಷಕರಿಂದ ಶಿಕ್ಷಣ ಹೊಂದುವ ಭಾರವು ಅವರ ಶಾಲೆಯೊಳಗಿನ ವಿದ್ಯಾರ್ಥಿನಿ-ವಿದ್ಯಾರ್ಥಿಗಳಿಗೆ ಒಂದು ದಿನವಾದರೂ ಲಭಿಸಿರುವದೆಂದು ಎದೆ ತಟ್ಟಿ ಹೇಳುವ ಧೈರ್ಯವು ಯಾರಿಗೂ ಇದ್ದಿಲ್ಲ. ಬಹಳವಾದರೆ ಅವರ ಹೆಸರಿನಿಂದ ಮೊಸಲಾಗಿದ್ದ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಆ ಶಾಲೆಯೊಳಗಿನ ಬೇರೆ ಶಿಕ್ಷಕರಿಂದ ವಾರಕ್ಕೆ ಒಂದೆರಡುಸಾರೆ ಮಾತ್ರ ಜ್ಞಾನಾಮೃತ ಪಾನ ಮಾಡುತ್ತಿದ್ದರು. ಮೇಲ್ತರಗತಿಯ ಈ ಶಿಕ್ಷಕರು ಶಾಲೆಯ ವೇಳೆಯಲ್ಲಿ ಬೇಕಾದತ್ತ ತಿರುಗಾಡುತ್ತಿದ್ದರೂ ಅವರನ್ನು ಯಾರೂ ಕೇಳುವವರಿದ್ದಿಲ್ಲ. ಕೃಷ್ಣರಾಯರ ಕಾಮದೇವನ ಕಾರಭಾರದಲ್ಲಿ ಮನಮುಟ್ಟಿ ದುಡಿಯುವ ಆ ಜನರಿಗೆ ಇಷ್ಟಲ್ಲದೆ ಇನ್ನೂ ಅನೇಕ ವಿಧದ ಸೌಕರ್ಯಗಳಿರುತ್ತಿದ್ದವು.

ಇನ್ನು ಎರಡನೇ ತರಗತಿಯ ಜನರೆಂದರೆ, ಸಾಹೇಬರ ಮನಸ್ಸನ್ನು ಸಂತುಷ್ಟಗೊಳಿಸುವದಕ್ಕಾಗಿ ಅವರ ಗುಣಗಾನ-ಲಾಂಗೂಲಚಾಲನ ಮಾಡುವವರು ಈ ವರ್ಗವು ಬಹಳೇ ದೊಡ್ಡದಿತ್ತು. ಇವರಿಗೆ ಮೊದಲಿನ ವರ್ಗದವರಂತೆ ಪೂರ್ಣ ಸ್ವಾತಂತ್ರ್ಯ-ಸ್ವರಾಜ್ಯಗಳು ಲಭಿಸಿದ್ದಿಲ್ಲ. ಇವರು ಶಾಲೆಗಳಿಗೆ ಹೋಗಿ ಶಿಕ್ಷಣ ಕೊಡಬೇಕಾಗಿತ್ತು. ಇವರಿಗೆ ಇಚ್ಛಿತ ಸ್ಥಳಗಳೂ,

ಸಾಕಷ್ಟು ವೇತನವೂ ಕೊಡಲ್ಪಡುತ್ತಿದ್ದವು. ಇವರು ಸಾಹೇಬರ ಗುಪ್ತ ಕಾರಭಾರದಲ್ಲಿ ಪ್ರತ್ಯಕ್ಷ ಭಾಗ ವಹಿಸಿರದಿದ್ದರೂ, ಅವರ ಗುಪ್ತರಹಸ್ಯವನ್ನು ಗುಪ್ತವಾಗಿರಿಸಲಿಕ್ಕೆ ಜಾಗ್ರತಗೊಳ್ಳುತ್ತಿದ್ದರು. ಇವರೊಳಗಿನ ಕೆಲವು ಜನರು ಪ್ರಸಂಗ ಒದಗಿದಾಗ ಅವರ ರಹಸ್ಯವಿಭಾಗದಲ್ಲಿ ಬೇಕಾದಂತಹ ಸಹಾಯು ಮಾಡಲಿಕ್ಕೆ ಮನಃಪೂರ್ವಕವಾಗಿ ಸಿದ್ಧರಿದ್ದರು. ವರಿಷ್ಠರ ಅನುಗ್ರಹ ಪಡೆ ಯುವದಕ್ಕೆ ಕೆಲವರು ತಪಶ್ಚರ್ಯವನ್ನೇ ಮಾಡತೊಡಗಿದ್ದರು. ಕೆಲವ ರಂತು ತಮ್ಮ ಗೃಹಿಣಿಯ ಕುರೂಪತೆಯ ಬಗ್ಗೆ ಮನದಲ್ಲಿ ಮರುಗುತ್ತಿದ್ದರು.

ಮೂರನೇ ವರ್ಗದ ಜನರು ಕೃಷ್ಣರಾಯರ ಕ್ಷೋಭೆಗೀಡಾದವರು. ತಮ್ಮ ಚಲುವೆಯರಾದ ಹೆಂಡಂದಿರನ್ನು ಮನೆಯಲ್ಲಿ ಬಚ್ಚಿಟ್ಟುಕೊಂಡವರೂ, ಸಾಹೇಬರ ಗುಟ್ಟನ್ನು ರಟ್ಟುಮಾಡುವವರೂ, ವರಿಷ್ಠರ ವಿರುದ್ಧವಾಗಿ ಚಲನ ವಲನವೆಬ್ಬಿಸುವವರೂ ಈ ವರ್ಗದಲ್ಲಿ ಸೇರಿದ್ದರು. ಅವರ ನೌಕರಿಯು ನೀರವೇಲಿನ ಗುಳ್ಳೆಯಂತೆ ಅಶಾಶ್ವತವಾಗಿರುತ್ತಿತ್ತು. ಇಂತಹ ಶಿಕ್ಷಕರು ವರ್ಷದಲ್ಲಿ ಎರಡು ಮೂರು ಕಡೆಗೆ ವರ್ಗವಾಗಿ ಹೋಗುತ್ತಿದ್ದರು. ವೇತನ ದಲ್ಲಿ ದಂಡ-ಕಡಿತಗಳಂತೂ ವರ್ಷದಲ್ಲೊಮ್ಮೆಯಾದರೂ ಅವರಿಗೆ ಸಂಭವಿಸ ದಿರುತ್ತಿದ್ದಿಲ್ಲ. ಕುಗ್ರಾಮ, ಕೆಟ್ಟ ಹವೆಯ ಸ್ಥಳ, ನಿರ್ಜಲಪ್ರದೇಶ ಮೊದಲಾ ದವುಗಳು ಇವರಿಗೆ ಮೀಸಲಾಗಿಯೇ ಇದ್ದವು. ವಿಜಯನಗರ ಸಂಸ್ಥಾನ ದಲ್ಲಿ ಮೇಲಿನ ಮೂರೂ ಅಸೌಕರ್ಯಗಳ ಕೆಲವು ಗ್ರಾಮಗಳಿದ್ದವು. ಕೃಷ್ಣ ರಾಯರ ಕ್ಷೋಭೆಗೀಡಾದ ಜನರು ಅಲ್ಲಿ ತಮ್ಮ ನೌಕರಿಯ ಆಯುಷ್ಯವನ್ನೇ ಕಳೆಯಬೇಕಾಗಿತ್ತು. ಆ ಜನರು ವರ್ಷಗಟ್ಲೆ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಪರಿಶ್ರಮಬಟ್ಟಿದ್ದರೂ, ಅವರ ಶ್ರಮವು ಹೊಳೆಯಲ್ಲಿ ಹೋಮಮಾಡಿದಂತಾ ಗುತ್ತಿತ್ತು. ಅವರ ಕೆಲಸವು ಕೃಷ್ಣರಾಯರ ಒರೆಗೆ ಎಂದೂ ಹತ್ತುತ್ತಿದ್ದಿಲ್ಲ. ಯಾಕಂದರೆ ಅವರ ಒರೆಗಲ್ಲೇ ವಿಲಕ್ಷಣವಾದದ್ದಿತ್ತು! ಮೂರನೆಯ ತರ ಗತಿಯೊಳಗಿನ ಕೆಲವು ಜನರು 'ಜೀ, ಸರಕಾರ' ಅನ್ನುವವರಿದ್ದಿಲ್ಲ. ಕೆಲವರಿಗೆ ರೂಪವತಿಯರಾದ ಹೆಂಡರಿದ್ದಿಲ್ಲ. ಕೆಲವು ಶಿಕ್ಷಕರು ಬಳಿಗಳ ವಶೀಲಿಯಿಂದ ರೊಟ್ಟಿಯನ್ನು ತುಪ್ಪದಲ್ಲಿ ಕೆಡಹಿಕೊಳ್ಳುವ ನೀಚಮನೋವೃತ್ತಿಯವರಿದ್ದಿಲ್ಲ. ಹೀಗಿದ್ದಮೇಲೆ ಅವರ ಆಯುಷ್ಯವು ಹೇಗೆ ಸುಖಮಯವಾಗಬೇಕು? ಕೃಷ್ಣ ರಾಯರ ಈ ವಿಶಿಷ್ಟ ವರ್ತನದ ಬಗ್ಗೆ ತ್ರಸ್ತರಾದ ಕೆಲವು ಶಿಕ್ಷಕರು ಕೆಲಸಕ್ಕೆ ಶರಣು ಹೊಡೆದು ಮನೆಯನ್ನು ಸೇರಿದ್ದರು. ಕೆಲವು ಜನರು ಕೆಲಸದಿಂದ ತಳ್ಳಲ್ಪಟ್ಟು ಮನೆ ಹಿಡಿದಿದ್ದರು. ಹೀಗೆ ತಳ್ಳಲ್ಪಟ್ಟವರಲ್ಲಿ ದಿವಾಣರ ಮಾಧವ ರಾಯನೊಬ್ಬನು. ಅವನಿಗೆ ವಿಧಾತನು ರೂಪವತಿಯಾದ ಹೆಂಡತಿ

ಯನ್ನು ದಯಪಾಲಿಸಿದ್ದರೂ, ಅವನು ತನ್ನ ಧರ್ಮಪತ್ನಿಯನ್ನು ವಿದ್ಯಾ ಸಂಸ್ಥೆಯ ವಿಧಾತನಿಗೆ ಕಾಣಿಕೆಯೆಂದು ಕೊಡದ್ದಕ್ಕಾಗಿ, ವಿಜಯನಗರದಿಂದ ಬಹು ದೂರವೂ ನಿರ್ಜಲವೂ ದೂಷಿತ ವಾತಾವರಣಯುಕ್ತವೂ ಆಗಿದ್ದ ಒಂದು ಶಾಲೆಗೆ ಹೋಗುವದಕ್ಕಾಗಿ ಆಜ್ಞಾಪತ್ರವು ಕೊಡಲ್ಪಟ್ಟಿತು. ವಿಜಯ ನಗರ ಸಂಸ್ಥಾನದೊಳಗಿನ ಅಂದಮಾನದಂತಿದ್ದ ಆ ಗ್ರಾಮಕ್ಕೆ ಹೋಗುವ ದಕ್ಕೆ ಮಾಧವರಾಯನು ಸಿದ್ಧನಾಗಲಿಲ್ಲ. ಒಂದು ವೇಳೆ ಅಲ್ಲಿಗೆ ಹೋದರೂ, ಕೃಷ್ಣರಾಯರ ಕೃಷ್ಣದೃಷ್ಟಿಯಿಂದ ಪಾರಾಗುವೆನೆಂದು ಅವನಿಗೆ ತೋರಲಿಲ್ಲ. ಆದಕ್ಕಾಗಿ ಅವನು ಒಂದು ವರ್ಷದ ರಜೆಯನ್ನು ಕೇಳಿದನು- ವರಿಷ್ಠರಿಂದ ರಜೆಯು ಮಂಜೂರಾಗದೆ, ಅವನು ಕೆಲಸದಿಂದ ಕಡಿಮೆ ಮಾಡಲ್ಪಟ್ಟನು. ಕೃಷ್ಣರಾಯನು ತನ್ನ ಮನೀಷೆಯನ್ನು ಪೂರೈಸಿಕೊಳ್ಳುವ ಸಾಹಸವನ್ನು ಇನ್ನೂ ಬಿಟ್ಟಿದ್ದಿಲ್ಲ. ಮಾಧವರಾಯನಿಗೂ ಅವನ ಪತ್ನಿಯಾದ ಶಕುಂ ತಲೆಗೂ ನೌಕರಿಯ ಆಶೆಹಚ್ಚಿದ್ದ ಆನಂದ-ಗೋವಿಂದ--ರಾಧಾದೇವಿಯವ ರಂತಹರ ಮಧ್ಯಸ್ಥಿಕೆಯು ಇನ್ನೂ ನಡೆದಿತ್ತು. 'ಗೋಕುಲದಲ್ಲಿ ರಾಸಕ್ರೀಡೆ ಯಾಡಲಿಕ್ಕೆ ಕುಲಯುವತಿಯರು ಬರುತ್ತಿರುವದಿಲ್ಲ.' ಎಂದು ಮಾಧವ ರಾಯನು ಸಿಟ್ಟಿನಿಂದ ಸ್ಪಷ್ಟವಾಗಿ ಹೇಳಿ ಕಳುಹಿದಾಗಿನಿಂದ ಕೃಷ್ಣರಾಯರ ಆಶಾತಂತು ಬಹುಮಟ್ಟಿಗೆ ಕಡಿದಂತಾಗಿತ್ತು; ಆದರೂ ಅವರು ಮಹತ್ವಾಕಾಂಕ್ಷಿಗಳಿ ದ್ದರು. ಅಷ್ಟಿಷ್ಟು ಮಾತಿಗೆ ಎದೆಗೆಟ್ಟು ಕುಳಿತುಕೊಳ್ಳುವಂತಹ ಸಾಹಸ ಹೀನರು ಅವರಾಗಿರಲಿಲ್ಲ.

ಶಕುಂತಲೆಯ ಚಿತ್ರಪಟವು ಈಗ ಕೃಷ್ಣರಾಯರ ಮನೋಭೂಮಿಕೆ ಯಿಂದ ಅದೃಶ್ಯವಾಗಿ ಹೋಗಿ, ಆ ಸ್ಥಳವನ್ನು ರಮಾದೇವಿಯ ಚಿತ್ರಪಟವು ಆಕ್ರಮಿಸಿತ್ತು; ಆದಕ್ಕಾಗಿಯೇ ಶಕುಂತಲೆಯು ಅಸಾಧ್ಯಳೆಂಬ ಸಂಗತಿಯಿಂದ ಅವರು ಕ್ಲೇಶಗೊಳ್ಳಲಿಲ್ಲ. ಶಕುಂತಲೆಯು ತೊಂಬತ್ತು ನಂಬರಿನ ಬಂಗಾರ ವಾಗಿದ್ದರೆ, ರಮಾದೇವಿಯು ನೂರು ನಂಬರಿನ ನ್ಯಾಶನಲ್ ಗಟ್ಟಿಯು. ರಮಾ ದೇವಿಯಂತಹ ರೂಪವತಿಯು ಇಂದಿಲ್ಲ ನಾಳೆಯಾದರೂ ಕೈವಶಳಾಗುವ ಳೆಂದು ಕೃಷ್ಣರಾಯರು ಎಣಿಕೆ ಹಾಕಿದ್ದರು. ಮಧ್ಯಸ್ಥಿಕೆಯು ಸೂಕ್ಷ್ಮವಾಗಿ ಪ್ರಾರಂಭವಾಗಿತ್ತು. ಸುರೇಂದ್ರರಾಯನಿಗೆ ಐದು ರೂಪಾಯಿಗಳ ವೇತನವು ಹೆಚ್ಚಾಗಿತ್ತು. ರಮಾದೇವಿಯು ಹತ್ತು ವರ್ಷ ಕೆಲಸ ಮಾಡಿದ ಮೂವರು ಶಿಕ್ಷಕಿಯರ ಮೇಲಿನ ಮುಖ್ಯಾಧ್ಯಾಪಕಿ! ಅವಳ ಆರಂಭದ ಸಂಬಳವೇ ಇಪ್ಪತ್ತೈದು. ಹತ್ತು ವರ್ಷ ಕೆಲಸ ಮಾಡಿದವರಿಗೂ ಅಷ್ಟೇ; ಕೆಲವರಿಗೆ ಅಷ್ಟಕ್ಕಿಂತ ಕಡಿಮೆ ಸಂಬಳಲೂ ದೊರೆಯುತ್ತಿತ್ತು. ಕೃಷ್ಣರಾಯರ ಆಳಿಕೆ

ಯಲ್ಲಿ ವಿದ್ಯಾಸಂಸ್ಥೆಯಲ್ಲಿ ಉತ್ಸಾಹ-ಸಂಭಾವನೆಗಳು ಕೆಲಸವನ್ನವಲಂಬಿಸಿದ್ದಿಲ್ಲ; ಕೃಷ್ಣರಾಯರ ಕೀಳುಗೆಲಸವನ್ನವಲಂಬಿಸಿದ್ದವು.

ರಮಾದೇವಿಯು ಮನಸ್ಸಿನ ಒಲವನ್ನು ಸೂಕ್ಷ್ಮರೀತಿಯಿಂದ ತಿಳಿದು ಬರಬೇಕೆಂದು ರಾಧಾದೇವಿಗೆ ವರಿಷ್ಠರ ಗುಪ್ತಾಜ್ಞೆಯಾಗಿತ್ತು. ಅವಳು ಕೈಕೊಂಡ ಕಾರ್ಯವು ಎಲ್ಲಿಯವರೆಗೆ ಬಂದಿರುವದೆಂಬದನ್ನು ತಿಳಿದುಕೊಳ್ಳಲಿಕ್ಕೆ ಕೃಷ್ಣರಾಯರು ಆತುರಗೊಂಡಿದ್ದರು. ಆನಂದರಾಯನೂ, ಗೋವಿಂದರಾಯನೂ ಹೋದ ಒಂದು ಗಳಿಗೆಯ ಮೇಲೆ ರಾಧಾದೇವಿಯು ಅಲ್ಲಿಗೆ ಬಂದಳು. ಅವಳನ್ನು ಕಂಡಕೂಡಲೆ ಕೃಷ್ಣರಾಯರು ಹರ್ಷಪುಲುಕಿತರಾಗಿ 'ಬನ್ನಿರಿ, ರಾಧಾದೇವಿ!' ಎಂದು ನುಡಿದು, ಕುರ್ಚಾಸನದಿಂದೆದ್ದು ಮಂಚದ ಮೇಲೆ ಕುಳಿತುಕೊಂಡು:—'ಬನ್ನಿರಿ, ಕುಳಿತುಕೊಳ್ಳಿರಿ' ಎಂದು ಅವಳನ್ನು ತಾವು ಕುಳಿತ ಮಂಚದ ಮೇಲೆಯೇ ಕುಳ್ಳಿರಿಸಿಕೊಂಡರು.

ಮಂಚದ ಮೇಲೆ ಕುಳಿತುಕೊಂಡ ಬಳಿಕ ರಾಧಾದೇವಿಯು—'ರಾವಸಾಹೇಬರೆ, ನೀವು ದೊಡ್ಡ ಅಧಿಕಾರಿಗಳಾಗಿದ್ದರೂ ಕೈ ಕೆಳಗಿನ ಕೆಲಸಗಾರರೊಡನೆ ಎಷ್ಟು ಸಮಾನಸ್ಕಂಧತೆಯಿಂದ ನಡೆಯುವಿರಿ? ಅವರೊಡನೆ ಹೇಗೆ ಆತ್ಮೀಯ ಭಾವನೆಯಿಂದ ನಡೆಕೊಳ್ಳುವಿರಿ? ಮೊಪಲಾದ ಸಂಗತಿಗಳ ಬಗ್ಗೆ ಜನರು ನಿಮ್ಮನ್ನು ಮನಃಪೂರ್ವಕವಾಗಿ ಹೊಗಳುತ್ತಿರುವರು.'

'ರಾಧಾದೇವಿ, ಕೆಲವು ಕುಚೋದ್ಯಗಾರರು ನನ್ನ ಹೆಸರಿನಿಂದ ಕಲ್ಲು ಒಡೆಯುತ್ತಿರುವರೆಂಬದು ನಿಮಗೆ ತಿಳಿದಿಲ್ಲ ಹೊಗಳುವವರ ಜೊತೆಗೆ ಬೊಗಳುವವರೂ ಇದ್ದಾರೆ- ದಿವಾಣರ ಮಾಧವನು ನನಗೆ ದುಶ್ಶಬ್ದಗಳನ್ನಾಡಿದನಂತೆ. ನಾನೇನೋ ವಿದ್ಯಾಸಂಸ್ಥೆಯನ್ನು ಕೃಷ್ಣನ ಗೋಕುಲವನ್ನು ಮಾಡಿರುವೆನಂತೆ. ಗೋಕುಲದ ಕೃಷ್ಣನ ರಾಸಕ್ರೀಡೆಗಾಗಿ ಕುಲಯುವತಿಯರು ಬರುವದಿಲ್ಲವೆಂಬ ಜಂಬದ ಮಾತನ್ನು ಅವನು ಆಡಿದನೆಂದು ಆನಂದರಾಯರೂ ಗೋವಿಂದರಾಯರೂ ಹೇಳಿದರು'

ಜನರ ಮಾತಿನ ಕಡೆಗೆ ಲಕ್ಷ್ಯಗೊಡಹತ್ತಿದರೆ ನಮ್ಮ ಬಾಳುವೆಯು ಸಾಗಲಿಕ್ಕಿಲ್ಲ ಹೇಗೆ ನಡೆದರೂ ಜನರು ಹೆಸರಿಡುತ್ತಾರೆ. ಅವರು ಗೋಕುಲದ ಕೃಷ್ಣನೆಂದು ನಿಮಗೆ ಅನ್ನುತ್ತಿದ್ದರೆ, ಗೋಪಿಕೆಯರ ರಾಧೆಯೆಂದು ನನಗೆ ಅನ್ನುತ್ತಿರುವರು ಏನೋ ಪೂರ್ವಸಂಸ್ಕಾರದ ಯೋಗದಿಂದ ನನ್ನ ನಿಮ್ಮಲ್ಲಿ ಸ್ನೇಹಘಟನೆಯಾದದ್ದು ಜನರಿಗೆ ಸಹನವಿಲ್ಲ.'

'ಆ ಮಾತಿರಲಿ. ರಾಧಾದೇವಿ, ರಮಾದೇವಿಯ ಮನೋಭೂಮಿಕೆಯು ಯಾವ ತರಂಗತಿಯದಿರುವದೆಂಬದನ್ನು ತಿಳಿದುಕೊಂಡಿರೇನು?'

'ದುರ್ಗವು ದುರ್ಭೇದ್ಯವಿರುವದು. ಕಂಕಣಗಳ ವಶೀಲಿಯಿಂದ ಸುಖವನ್ನು ಸುರಿಯುವ ಕಂಕಣಬಹಾದ್ದರನು ಸುರೇಂದ್ರರಾಯನಲ್ಲವೆಂಬದನ್ನು ನೀವು ಹೇಗೆ ಮನಗಂಡಿರುವಿರೋ, ಅದರಂತೆಯೇ ರಮಾದೇವಿಯ ಸ್ವಭಾವವು ಒಳ್ಳೇ ಕಟ್ಟುನಿಟ್ಟಿನದೆಂಬದನ್ನು ನಾನೂ ಮನಗಂಡೆನು. ಅವಳು ಒಬ್ಬ ಬಡ ಶಿಕ್ಷಕನ ಸಹಧರ್ಮಚಾರಿಣಿಯಾಗಿರುವದರಿಂದ, ಅವಳ ಸಾಧ್ವೀತ್ವದ ಪ್ರಕಾರವು ಎಲ್ಲಿ ಡೆಯಲ್ಲಿಯೂ ಬಿದ್ದಿಲ್ಲ. ನಿಜವಾಗಿಯೂ ಅವಳು ಸೀತಾ-ಸಾವಿತ್ರಿಯರಂತೆ ಅನುಪಮೇಯಳಿರುವಳು.'

ರಾದಾದೇವಿಯ ಈ ವರ್ಣನದಿಂದ ಕೃಷ್ಣರಾಯನು ಸಿಟ್ಟಿಗೆದ್ದನು. ಆಗ ಅವನು ಸಂತಪ್ತ ವಾಣಿಯಿಂದ-'ಅವಳ ಗುಣವರ್ಣನ ಮಾಡಲಿಕ್ಕೆಂದು ನಿಮ್ಮನ್ನು ಕರೆಯಿಸಿಲ್ಲ. ನಾನು ನಿಮಗೆ ಎಷ್ಟು ಸುಖ-ಸೌಕರ್ಯಗಳನ್ನು ಒದಗಿಸಿಕೊಟ್ಟಿರುವನೆಂಬದನ್ನು ಲಕ್ಷ್ಯದಲ್ಲಿಡಿರಿ ನೀವು ಅಸಾಧ್ಯವಾದ ಕಾರ್ಯವನ್ನು ಈಡೇರಿಸುವಿರೆಂಬ ಬಗ್ಗೆ ನನ್ನಲ್ಲಿ ತಿಲಾಂಶವಾದರೂ ಸಂದೇಹವಿಲ್ಲದಂತಾದ್ದರಿಂದ, ನೀವು ನನ್ನ ಪೂರ್ಣಾನುಗ್ರಹಕ್ಕೆ ಪಾತ್ರರಾದಿರಿ. ಪ್ರಯತ್ನ ಮಾಡಿದರೆ ಯಾವದು ತಾನೆ ಅಸಾಧ್ಯವು? ಸ್ತ್ರೀಯರನ್ನು ವಶಪಡಿಸಿಕೊಳ್ಳುವ ಕಾರ್ಯದಲ್ಲಿ ಪುರುಷರಿಗಿಂತ ಸ್ತ್ರೀಯರೇ ಕುಶಲರು. ಅದಕ್ಕಾಗಿ ನಾನು ಕುಲಟಾ ಶಿಖಾಮಣಿಯರಾದ ನಿಮ್ಮನ್ನು ನಿಯಮಿಸಿರುವೆನು.'

'ರಾವಸಾಹೇಬರೆ, ನೀವು ಒಮ್ಮೆಲೆ ನಿರುತ್ಸಾಹಿಗಳಾಗಬೇಡಿರಿ. ಯುಕ್ತಿ-ಪ್ರಯುಕ್ತಿಗಳಿಂದ ರಮಾದೇವಿಯನ್ನು ನಿಮ್ಮ ಮಂಚಕ್ಕೆ ತರುವೆನು. ಈಗಲಾದರೂ ಸಮಾಧಾನವಾಯಿತೆ?'

'ಏನೂ ಅಡ್ಡಿಯಿಲ್ಲ. ಹೀಗೆ ಮಾತಾಡಿದರೆ ಯಾರು ಸಿಟ್ಟಿಗೇಳುವರು? ರಾಧಾದೇವಿ, ನೀವು ಯುಕ್ತಿವಂತರು. ಅಂತೆಯೆ ನನ್ನ ಕೃಪೆಗೆ ಪಾತ್ರರಾಗಿರುವಿರಿ,' ಎಂದು ನುಡಿದು, ಕೃಷ್ಣರಾಯರು ಅವಳನ್ನು ಪ್ರೇಮದಿಂದ ಬಳಿಯಲ್ಲಿ ಎಳೆದು ಮುಂಡಾಡಿದರು.

ಪ್ರೇಮೋದಧಿಗೆ ಇಳಿತವು ಪ್ರಾರಂಭವಾದ ಮೇಲೆ ರಾಧಾದೇವಿಯು ಕೃಷ್ಣರಾಯರನ್ನು ಕುರಿತು-'ರಾಯರೆ, ಕುಲಟಾ ಶಿಖಾಮಣಿಯೆಂದರೆ ನು?'

'ಅದೊಂದು ದೊಡ್ಡ ಗೌರವದ ಪದವಿ. ನಿಮ್ಮಂತೆ ಬುದ್ಧಿ-ಕೌಶಲ್ಯಗಳಲ್ಲಿ ಮಿಗಿಲಾದವರಿಗೆ ಕುಲಟೆಯರೆಂಬ ಪದವಿ ಬರುವದು; ಆದರೆ ಆ ಕುಶಲತೆಯು ಮಾತ್ರ ಕಾಮದೇವನ ಕಾರಭಾರಕ್ಕೆ ಸಂಬಂಧಿಸಿದ್ದಾಗಿರಬೇಕು.'

ದೊಡ್ಡ ಪದವಿಯನ್ನು ದಯಪಾಲಿಸಿ, ಸಾಹೇಬರು ತನ್ನನ್ನು ಗೌರವಿಸಿದರೆಂದು ತಿಳಿದ ರಾಧಾದೇವಿಯು ವೈರಿಬಿರಿಯುವಂತೆ ಉಬ್ಬಿರಬಹುದಲ್ಲವೆ?

## ರಾಧಾ-ಗೋಪಿಕೆ.

ವಿಜಯನಗರ ಸಂಸ್ಥಾನದಲ್ಲಿ ತೆಲಗು-ಕನ್ನಡ ಸೀಮೆಗಳ ಗಡಿಯಲ್ಲಿದ್ದ ರತ್ನಪುರವು ರಾಧಾದೇವಿಯ ತವರೂರು. ಇವಳ ತವರುಮನೆಯು ಬಡತನದ್ದು. ರಾಧೆಯು ತಾಯಿ-ತಂದೆಗಳಿಗೆ ಒಬ್ಬಳೇ ಒಬ್ಬಳಾದ ಅಕ್ಕರತೆಯ ಮಗಳು. ಅಂತಹ ಬಡತನದಲ್ಲಿಯೂ ಅವಳು ಅಚ್ಛೆ-ಸ್ವಚ್ಛಂದದಿಂದ ಬೆಳೆದವಳಾಗಿದ್ದಳು. ಒಬ್ಬಳೇ ಒಬ್ಬಳಾದ ಮಗಳಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂದು ರಾಧೆಯ ತಂದೆಯು ಯೋಚಿಸಿದನು; ಆದರೆ ಆ ಊರಲ್ಲಿ ಕನ್ನಡ ಶಾಲೆಯಿದ್ದಿಲ್ಲ. ಕನ್ನಡ ಮಾತೃಭಾಷೆಯಿದ್ದ ಬಾಲಕರು ಪ್ರಾಥಮಿಕ ಶಿಕ್ಷಣವನ್ನು ಸ್ವಭಾಷೆಯಲ್ಲಿಯೇ ಹೊಂದಿದರೆ ಒಳಿತಾಗುವದೆಂದು ರತ್ನಪುರದ ಕೆಲವು ಪಾಲಕರು ತಮ್ಮ ಬಾಲಕರನ್ನು ಕನ್ನಡ ಶಾಲೆಗಳಿದ್ದ ಊರಿಗೆ ಶಿಕ್ಷಣಕ್ಕಾಗಿ ಕಳುಹಿಸುತ್ತಿದ್ದರು. ನೂರಕ್ಕೆ ತೊಂಬತ್ತು ಜನರ ಮಾತೃಭಾಷೆಯು ಕನ್ನಡದಿದ್ದಾಗ, ಅಲ್ಲಿ ತೆಲಗು ಪ್ರಾಥಮಿಕ ಶಾಲೆಯು ನಡೆದದ್ದು ಶಾಲಾಧಿಕಾರಿಗಳಾದ ಕೃಷ್ಣರಾಯರ ಭಾಷಾದುರಭಿಮಾನದ ದ್ಯೋತಕವಾಗಿತ್ತು. ತಮ್ಮಲ್ಲಿ ಕನ್ನಡ ಶಾಲೆಯನ್ನು ಕೊಡಬೇಕೆಂದು ಅಲ್ಲಿಯ ಜನರು ಎಷ್ಟು ವಿಧದಿಂದ ವಿನಂತಿ ಮಾಡಿಕೊಂಡರೂ, ಅವರಿಗೆ ಯಶಸ್ಸು ದೊರೆಯಲಿಲ್ಲ. ಊರಲ್ಲಿದ್ದ ಅಲ್ಪ ಸಂಖ್ಯಾಕರಾದ ತೆಲಗು ಪ್ರಮುಖರಿಂದ ಕೃಷ್ಣರಾಯರು ಅರ್ಜಿಯನ್ನು ತೆಗೆದುಕೊಂಡು, ಅಲ್ಲಿ ತೆಲಗು ಶಾಲೆಯನ್ನೇ ಸ್ಥಿರಪಡಿಸಿದರು. ಕೃಷ್ಣರಾಯರ ಹಾಗು ಕೆಲವು ಜನತೆಲಗರ ಈ ಕೃತ್ಯದಿಂದ ರತ್ನಪುರದ ಕನ್ನಡಿಗರು ಸಿಟ್ಟಾದರು. ಕೆಲವು ಜನರಂತು ತಮ್ಮ ಬಾಲಕರಿಗೆ ತೆಲಗು ಶಿಕ್ಷಣವನ್ನು ಕೊಡಿಸಬಾರದೆಂದು ನಿರ್ಧರಿಸಿ, ಕನ್ನಡ ಶಾಲೆಗಳಿದ್ದ ಊರುಗಳಿಗೆ ಅವರನ್ನು ಕಳಿಸಹತ್ತಿದರು. ರಾಧೆಯ ತಂದೆಯು ಅಭಿಮಾನಿಗಳಾದ ಕನ್ನಡಿಗರ ಉಪದೇಶದಂತೆ ತನ್ನ ಮಗಳನ್ನು ಕನ್ನಡ ಶಾಲೆಗೆ ಕಳಿಸಬೇಕೆಂದು ನಿರ್ಧರಿಸಿದನು.

ರಾಧೆಯು ಕುಶಾಗ್ರಬುದ್ಧಿಯವಳು. ನಾಲ್ಕು ವರ್ಷಗಳಲ್ಲಿ ಐದಾರು ಇಯತ್ತೆಗಳ ವರೆಗೆ ಶಿಕ್ಷಣವನ್ನು ಹೊಂದಿದಳು. ಇನ್ನೂ ಕಲಿಯಬೇಕೆಂದು ಅವಳ ಇಚ್ಛೆಯಿತ್ತು; ಆದರೆ ಅವಳು ಹದಿನೈದು-ಹದಿನಾರು ವರ್ಷದವಳಾದುದರಿಂದ, ಮುಂದೆ ಶಿಕ್ಷಣಕೊಡಿಸುವ ಕಾರಣವಿಲ್ಲೆಂದು ಅವಳ ತಂದೆಯು ಅವಳನ್ನು ರತ್ನಪುರಕ್ಕೆ ಕರೆಯಿಸಿಕೊಂಡನು. ಅಷ್ಟೊತ್ತಿಗೆ ರಾಧೆಯು ವಿಲಾಸದ ಅಧಿದೇವತೆಯಾಗಿದ್ದಳು. ರತ್ನಪುರಕ್ಕೆ ಬಂದ ಮೇಲೆ ಅವಳ ನಡವಳಿ

ಕೆಯ ಪ್ರಕಾಶವು ಮತ್ತಿಷ್ಟು ಹೆಚ್ಚಾಯಿತು. ಮಗಳು ಅಡ್ಡದಾರೀ ತುಳಿಯ ತೊಡಗಿರುವಳೆಂಬದು ಅವಳ ತಂದೆಗೆ ಗೊತ್ತಾಯಿತು. ಅವನು ರಾಧೆಯ ಸಲುವಾಗಿ ವರಾನ್ವೇಷಣ ಮಾಡತೊಡಗಿದನು ರಾಧೆಯು ರೂಪವತಿ ಯಿದ್ದಳು. ರೂಪದಂತೆ ಗುಣವೂ ಚನ್ನಾಗಿದ್ದಿದ್ದರೆ, ಅವಳು ಒಬ್ಬ ಆಗರ್ಭ ಶ್ರೀಮಂತನನ್ನು ಸಹಜವಾಗಿ ವರಿಸಬಹುದಾಗಿತ್ತು; ಆದರೆ—ಅವಳು ದುಃಶೀಲಳಾಗಿದ್ದಳು. ಅಂತೆಯೇ ಬೀದಿಯ ಭಿಕ್ಷುಕರು ಸಹ ಅವಳನ್ನು ಲಗ್ನದ ಹೆಂಡತಿಯೆಂದು ಸ್ವೀಕರಿಸದಾದರು. ಈ ಸ್ಥಿತಿಯನ್ನು ನೋಡಿ ಅವಳ ತಂದೆಯು ಚಿಂತೆಗೊಳಗಾದನು.

ರಾಧೆಯ ತಂದೆಗೆ ಅಡವಿಯೆಂಬ ಹೆಸರಿನ ದೂರಿನ ಆಪ್ತನಿದ್ದನು. ಅವನು ಮೂವತ್ತೈದು-ಮೂವತ್ತಾರು ವರ್ಷದವನಾಗಿದ್ದರೂ ವಿವಾಹವಾಗಿದ್ದಿಲ್ಲ. ವಿವಾಹ ಮಾಡಿಕೊಳ್ಳಬೇಕೆಂಬ ಅವನ ಮಹತ್ವಾಕಾಂಕ್ಷೆಯೂ ಕಡಿಮೆಯಾಗಿದ್ದಿಲ್ಲ. ಯಾವ ಆಸ್ತಿಯೂ ಇಲ್ಲದ ಅಡವಿಗೆ, ಕನ್ಯೆಯನ್ನು ಕೊಡಲಿಕ್ಕೆ ಯಾರು ಸಿದ್ಧರಾಗುವರು? ಈ ಸಂಗತಿಯು ರಾಧೆಯ ತಂದೆಗೆ ತಿಳಿಯಿತು. ಕರಗ್ರಹಣಕ್ಕೆ ಯಾವ ವರನೂ ಸಿದ್ಧನಾಗದಿದ್ದ ಕನ್ಯೆಯನ್ನು, ಯಾವ ಕನ್ಯೆಯೂ ಕರಗ್ರಹಣ ಮಾಡಲಿಚ್ಛಿಸದ ವರನಿಗೆ ಗಂಟು ಹಾಕಬೇಕೆಂದು ರಾಧೆಯ ತಂದೆಯು ಯೋಚಿಸಿದನು. ಹಾಗೆ ಯೋಚಿಸದಿದ್ದರೆ, ಅವನಿಗೆ ಗತ್ಯಂತರವೇ ಇರಲಿಲ್ಲ. ಆಗ ಅವನು ತನ್ನ ಭಾವೀ ಜಾಮಾತನನ್ನು ಕರೆಯಿಸಿ, ತನ್ನ ಮನೋಗತವನ್ನು ತಿಳಿಸಿದನು. ರಾಧೆಯಂತಹ ಚಲುವೆಯಾದ ಹೆಂಡತಿಯು ದೊರೆಯುವ ಸಂಧಿಯು ಪ್ರಾಪ್ತವಾದದ್ದಕ್ಕಾಗಿ ಅಡವಿಯು ತನ್ನ ದೈವವನ್ನು ಮನಸ್ವೀಯಾಗಿ ಹೊಗಳಿದನು. ತನ್ನ ಮಾವನು ಮೊದಲಿನ ಆಪ್ತತ್ವವನ್ನು ನೆನೆದು ಹೊಸ ಸಂಬಂಧ ಮಾಡಿ, ಅಂತಃಕರಣಗಳನ್ನು ದೃಢವಾಗಿಯೂ ಏಕಜೀವವಾಗಿಯೂ ಮಾಡಿದ್ದಕ್ಕಾಗಿ ಅವನನ್ನು ಬಹುಪರಿಯಾಗಿ ಕೊಂಡಾಡಿದನು. ಅಡವಿಯು ಸಂತೋಷದಿಂದ ರಾಧೆಯ ಕರಗ್ರಹಣ ಮಾಡಲಿಕ್ಕೆ ಒಪ್ಪಿದನು. ಯಾವದೋ ಒಂದು ಮುಹೂರ್ತವನ್ನು ಸಾಧಿಸಿ ರಾಧೆಯು ಅಡವಿಯ ಪಾಲಾದಳು!

ತನ್ನ ಮಾವನು ಕೇವಲ ಮೊದಲಿನ ಆಪ್ತತ್ವವನ್ನು ನೆನೆದು, ರಾಧೆಯನ್ನು ತನಗೆ ಧಾರೆಯೆರೆದು ಕೊಟ್ಟಿರುವನೆಂದು ಅಡವಿಯು ತಿಳಿದಿರಲಿಲ್ಲ. ಅಡ್ಡದಾರಿಯನ್ನು ಹಿಡಿದ ಆ ವಿಲಾಸಿನಿಯನ್ನು ಯಾವ ಪುರುಷನೂ ಲಗ್ನದ ಹೆಂಡತಿಯೆಂದು ಸ್ವೀಕರಿಸಲಿಕ್ಕೆ ಸಿದ್ಧರಾಗದ್ದನ್ನು ಮನವರಿಕೆ ಮಾಡಿಕೊಂಡ ಮೇಲೆಯೇ ಅವನು ಮಗಳನ್ನು ತನ್ನ ಕೊರಳಿಗೆ ಕಟ್ಟಿದನೆಂಬದು

ವಿವಾಹವಾಗುವದಕ್ಕಿಂತ ಮೊದಲೇ ಅಡವಿಗೆ ಗೊತ್ತಾಗಿತ್ತು. ಅಡವಿ ಯಾದರೊ ಹೆಂಡತಿಯನ್ನು ಸ್ವಪ್ನದಲ್ಲಿ ಸಹ ಕಾಣದಂತಹ ಗಂಡಸು. ಹೇಗಾದರೂ ಹೆಂಡತಿಯಾದರಾಯಿತೆಂದು ಅವನು ಯೋಚಿಸಿದನು. ಆದರಲ್ಲಿ ರಾಧೆಯ ರೂಪವು ಅವನನ್ನು ಕುರುಡುಗೊಳಿಸಿತ್ತು; ಕಿವುಡುಗೊಳಿಸಿತು. ಜನರಲ್ಲಿ ಹಬ್ಬಿದ ದುರ್ವಾರ್ತೆಗಳು ಅವನ ಕಿವಿಗೆ ಚನ್ನಾಗಿ ಮುಟ್ಟಲಿಲ್ಲ. ನೋಡಿದೊಡನೆಯೆ ಅವಳೊಬ್ಬ ವಾರಯೋಷಿತೆಯ ಮಾಲಿಕೆಯೊಳಗಿನವಳೆಂಬದನ್ನು ಗುರತಿಸುವಷ್ಟು ಶಕ್ತಿಯು ಅಡವಿಯ ಕಣ್ಣಿನಲ್ಲಿಯೂ, ಬುದ್ಧಿಯಲ್ಲಿಯೂ ಉಳಿಯಲಿಲ್ಲ. ಮೊದಲೇ ಅಡವಿಯು ದೊಡ್ಡ ಮನಸ್ಸು ಮಾಡಿದ್ದನು. ಲಗ್ನದ ಹೆಂಡತಿಯಂತಲ್ಲದಿದ್ದರೂ, ಕೂಡಿಕೆಯವಳಂತೆ ಅವಳ ಸಹವಾಸ ಸುಖವು ದೊರೆತರೆ ಸಾಕೆಂದು ಅವನು ಸಮಾಧಾನ ಹೊಂದಿದ್ದನು.

ಅಡವಿಯು ಶ್ವಶುರಗೃಹದಲ್ಲಿಯೇ ವಾಸವಾದನು. ಯಾಕಂದರೆ ಅವನ ಮಾವನಿಗೆ ರಾಧೆಯು ಹೊರತು ಮಿಕ್ಕ ಸಂತಾನವಿದ್ದಿಲ್ಲ. ಅಳಿಯನೆಂದರೂ ಅಡವಿಯೇ, ಮಗನೆಂದರೂ ಅಡವಿಯೇ! ಎಂದು ತಿಳಿದು ಅವನ ಮಾವನು ತನ್ನ ಮನೆಯನ್ನೂ ಎರಡು ಎಕರೆಯ ಗದ್ದೆಯನ್ನೂ ಮಗಳ ಹೆಸರಿನಿಂದ ಮಾಡಿಸಿದನು. ಮುಂದೆ ಸ್ವಲ್ಪದಿನಗಳಲ್ಲಿಯೆ ಅವನು ಕಾಲಾಧೀನನಾದನು.

ತಂದೆಯಿರುವವರೆಗೆ ರಾಧೆಯು ಪತಿಯೊಡನೆ ಕೂಡಿಕೆಯವಳಂತಾದರೂ ಬಾಳ್ವೆ ಮಾಡುತ್ತಿದ್ದಳು. ತಂದೆ ಸತ್ತಕೂಡಲೆ ಅವಳು ಪರಿಬಿಚ್ಚಿದ ಹಾವಾದಳು! ಅವಳು ಹೆಸರಿಗೆ ಮನೆಯಲ್ಲಿರುತ್ತಿದ್ದಳೆಂಬದು ನಿಜ; ಆದರೆ ಅವಳು ಸ್ವಚ್ಛಂದವೃತ್ತಿಯಿಂದ ಬೇಕಾದಲ್ಲಿ ತಿರುಗಾಡುತ್ತಿದ್ದಳು. ಅವಳಿಗೆ ಎಷ್ಟೋ ಜನ ಪುರುಷ ಸ್ನೇಹಿತರಿದ್ದರು. ಅವಳ ಈ ನಡತೆಯು ಅಡವಿಯ ಮನಸ್ಸಿಗೆ ಬರುತ್ತಿದ್ದಿಲ್ಲ, ಆದರೆ ಅವನು ಮಾಡುವದೇನು? ರಾಧೆಯು ಮೀರಿದ ಸ್ತ್ರೀಯು! ಅಡವಿಯಂತಹ ಎಷ್ಟೋ ಜನರು ಅವಳ ಪೋಲಕದ ಜೇಬಿನಲ್ಲಿ ಕುಣಿದಾಡುತ್ತಿದ್ದರು. ಎಷ್ಟೋ ವರ್ಷಗಳ ತಪಾಚರಣೆಯ ಫಲವಾಗಿದ್ದ ಒಬ್ಬಳೇ ಒಬ್ಬಳಾದ ಹೆಂಡತಿಯನ್ನು ಕಳೆದುಕೊಂಡು ಮಾಡುವದೇನೆಂದು ಅವನು ಮನಸ್ಸು ಗಟ್ಟಿ ಮಾಡಿದನು. ತನ್ನ ಮರ್ಯಾದೆಯನ್ನು ತನ್ನ ಕೈಯಿಂದಲೇ ಕಳೆದುಕೊಳ್ಳಬಾರದೆಂದು ಅವನು ಪತ್ನಿಯ ಅನಾಚಾರಗಳನ್ನು ಮುಚ್ಚತೊಡಗಿದ್ದನು. ಅವಳಿಂದ ಹೆಜ್ಜೆಹೆಜ್ಜೆಗೆ ಮಾನಕ್ಷಿತಿಯಾಗುತ್ತಿದ್ದರೂ, 'ತಾಳಿದವನು ಬಾಳಿಯಾನೆ'ಂಬ ನೀತಿಯನ್ನು ನೆನಿಸಿಕೊಂಡು, ಅಡವಿಯು ಆತ್ಮಸಂಯಮನ ಮಾಡುತ್ತಿದ್ದನು!

ಅಡವಿಯು ಕೂಲೀ ಮಾಡಿ ಸಂಸಾರ ರಥವನ್ನು ಸಾಗಿಸುತ್ತಿದ್ದನು.

ರಾಧೆಯ ವಿಲಾಸರಥವನ್ನು ಸಾಗಿಸುವ ಗಳಿಕೆಯು ಬೇರೆ ಪ್ರಕಾರದ್ದಿತ್ತು ತನ್ನ ಗದ್ದೆಯ ಉತ್ಪನ್ನದಿಂದ ಬೇಕಾದ ಹಾಗೆ ಸ್ವಚ್ಛಂದದಿಂದ ಕಾಲಕಳೆಯುವೆನೆಂದು ಅವಳು ಅಡವಿಗೂ ಜನರಿಗೂ ಹೇಳುತ್ತಿದ್ದಳು. ತನ್ನ ತಂದೆಯ ಆಸ್ತಿಗೆ ಅವಳೇ ಬಾಧ್ಯಳಿದ್ದುದರಿಂದ ಹಾಗೆ ಹೇಳಲಿಕ್ಕೆ ಅಧಿಕಾರವೂ ಅವಳಿಗಿತ್ತು. ಎರಡು ಎಕರೆ ಗದ್ದೆಯ ಉತ್ಪನ್ನದಲ್ಲಿ ಅವಳು ಆಗರ್ಭ ಶ್ರೀಮಂತರಂತೆ ಆಟ್ಟಹಾಸವಿಟ್ಟದ್ದು ಅರಿಯದವರಿಗೆ ಸೋಜಿಗವಾಗುವ ಮಾತಾಗಿದ್ದರೂ ಅವಳ ನಡವಳಿಕೆಯನ್ನು ಬಲ್ಲ ಜನರಿಗೆ ಅದೇನೂ ವಿಸ್ಮಯವನ್ನುಂಟುಮಾಡುವಂತಿದ್ದಿಲ್ಲ ರಾಧೆಯು ಸುಶಿಕ್ಷಿತರ ಮಾಲಿಕೆಯಲ್ಲಿ: ಸೇರಿದವಳು; ಅಡವಿಯು ಶುದ್ಧ ಅಡವಿಯೇ! ಹೀಗಿದ್ದ ಮೇಲೆ ಮೊದಲೇ ಅನಾಚಾರಿಯಾಗಿದ್ದ ಸ್ತ್ರೀಯು ಪತಿಯೊಡನೆ ಏಕಜೀವವಾಗಿ ಇರುವ ಬಗೆ ಹೇಗೆ?

ಬರಬರುತ್ತ ರಾಧೆಯ ವಿಲಾಸವೃತ್ತಿಯೂ, ಅನಾಚಾರವೂ ಬೆಳೆಯಿತು. ಅಡವಿಯು ಎಷ್ಟು ದೊಡ್ಡ ಮನಸ್ಸು ಮಾಡಿದರೂ, ಪತ್ನಿಯ ಅನಾಚಾರದಿಂದ ಉತ್ಪನ್ನವಾದ ಸಂತಾಪಾಗ್ನಿಯು ಸಹನಶಕ್ತಿಯನ್ನು ಮೀರಿತು. ಇಂತಹ ಹೆಂಡತಿಯೊಡನೆ ಬಾಳ್ವೆ ಮಾಡುವದಕ್ಕಿಂತ ಅಡವೀ ಸೇರುವದೇ ಮೇಲೆಂದು ತಿಳಿದು, ಅವನು ರತ್ನಪುರವನ್ನು ಬಿಟ್ಟನು. ಅವನು ಅತ್ತಿತ್ತ ಅಲೆದಾಡುತ್ತ ವಿಜಯನಗರವನ್ನು ಸೇರಿದನು. ಮೊದಲು ಅವನು ಕಾಫೀ ಅಂಗಡಿಯಲ್ಲಿ ನೌಕರಿ ದೊರೆಕಿಸಿದನು; ಅನಂತರದಲ್ಲಿ ಒಂದು ಭೋಜನ ಮಂದಿರದಲ್ಲಿ ಬಡಿಸುವ ಕೆಲಸ ದೊರೆಕಿಸಿದನು. ಅಡಿವೆಪ್ಪನು ಅಡಿವ್ಯಾಚಾರಿಯಾದನು. ತನ್ನ ದುರ್ದಶೆಯು ಹರಿಯುವ ಕಾಲವೊದಗಿತೆಂದು ಅವನು ಸಮಾಧಾನಗೊಂಡನು. ಮುಂದೆ ಸ್ವಲ್ಪ ದಿನಗಳ ಮೇಲೆ ಅವನು ವಿಜಯನಗರದೊಳಗಿನ ತನ್ನ ವ್ಯವಸಾಯ ಬಂಧುಗಳ ಸಹಾಯದಿಂದ ವಿದ್ಯಾಧಿಕಾರಿಗ ಮನೆಯ ಅಡಿಗೆ-ನೀರಿನ ಕೆಲಸವನ್ನು ಸಂಪಾದಿಸಿದನು. ತಿಂಗಳೊಂದಕ್ಕೆ ಹೊಟ್ಟೆ ಹೊರಗೆ ಹೋಗಿ ಹನ್ನೆರಡು ರೂಪಾಯಿ ಸಂಬಳವು ಅವನಿಗೆ ದೊರೆಯುತೊಡಗಿತು.

ತನ್ನ ದುಡಿಮೆಯಲ್ಲಿ ಇಬ್ಬರ ಉಪಜೀವನವು ಸರಳವಾಗಿ ಸಾಗುವದೆಂಬ ಮನವರಿಕೆಯಾದೊಡನೆಯೇ ಅಡಿವ್ಯಾಚಾರಿಗೆ ಹೆಂಡತಿಯ ನೆನಪಾಯಿತು. ಅವಳು ಎಂತಹ ದುರಾಚಾರಿಯಾಗಿದ್ದರೂ, ಹೆಂಡತಿಯೆಂಬ ಮೋಹವನ್ನು ಕಡಿಯುವದು ಅವನಿಂದಾಗಲಿಲ್ಲ. ಅವನು ಪತ್ನಿಯನ್ನು ಕರೆತಂಬೇಕೆಂದು ನಿಶ್ಚಯಿಸಿದನು. ರತ್ನಪುರದಿಂದ ದೂರದಲ್ಲಿದ್ದ ವಿಜಯನಗರದಲ್ಲಾದರೂ ಅವಳು ಬಾಳ್ವೆವಂತಳಾಗಿ ನಡೆದರೆ, ಹಿಂದಿನದೆಲ್ಲ ಮರೆತು ಹೋಗುವದೆಂದು

ಅವನು ಧೈರ್ಯ ಮಾಡಿದನು.

ದೈವವು ರೂಪವತಿಯಾದ ಪತ್ನಿಯನ್ನು ಕೊಟ್ಟಿದ್ದರೂ, ಕರ್ಮವು ಬಿಡಗಡೆ ಮಾಡಿತೆಂದು ಅಡಿವ್ಯಾಚಾರಿಯು ಬಹು ಪರಿಯಾಗಿ ಮಿಡುಕುತ್ತಿದ್ದನು. ಹೆಂಡತಿ ಇಲ್ಲದಿದ್ದರೂ ಹೆಂಡತಿಯ ಭಾವಚಿತ್ರವಾದರೂ ಬಳಿಯಲ್ಲಿರಲೆಂದು ಅವನು ಅವಳ ಚಿತ್ರವೊಂದನ್ನು ಸಂಪಾದಿಸಿಕೊಂಡು ಬಂದಿದ್ದನು. ಒಂದು ದಿನ ಸಾಯಂಕಾಲದಲ್ಲಿ ಅವನು ಆ ಚಿತ್ರವನ್ನು ನೋಡುತ್ತ ಕುಳಿತುಕೊಂಡಾಗ ವಿದ್ಯಾಧಿಕಾರಿಗಳಾದ ಕೃಷ್ಣರಾಯರ ಸವಾರಿಯು ಬಂತು. ಅವರು ಆ ಚಿತ್ರವು ಯಾರದೆಂದು ಅಡಿವ್ಯಾಚಾರಿಯನ್ನು ಕೇಳಿದರು. ಅವನು ತನ್ನ ಹೆಂಡತಿಯ ಚಿತ್ರವೆಂದು ಹೇಳಿ, ಅದನ್ನು ಪೆಟ್ಟಿಗೆಯಲ್ಲಿರಿಸಲುದ್ಯುಕ್ತನಾದನು. ಕೃಷ್ಣರಾಯರು ಆ ಚಿತ್ರವನ್ನು ಬೇಡಿ ತೆಗೆದುಕೊಂಡು ನಿರೀಕ್ಷಿಸಿದರು. ತಮ್ಮ ಮನೆಯ ಆಚಾರಿಯ ಹೆಂಡತಿಯು ಪ್ರತಿ ರಂಭೆಯೇ ಆಗಿರುವಳೆಂಬುದರ ಬಗ್ಗೆ ಅವರಿಗೆ ಸಂಶಯವುಳಿಯಲಿಲ್ಲ. ವಿವಾಹಿತನಾಗಿ ಹೆಂಡತಿಯನ್ನು ಬಿಟ್ಟು ಬೇರೆ ಸ್ಥಳದಲ್ಲಿ ವಾಸವಾಗಿರುವದು ಅನುಚಿತವೆಂದೂ, ಅವಳನ್ನು ಕರೆಯಿಸಿ ತಮ್ಮ ಮನೆಯೊಳಗಿನ ಒಂದು ಕೋಣೆಯಲ್ಲಿರಬೇಕೆಂದೂ ಕೃಷ್ಣರಾಯರು ಆಚಾರಿಗೆ ಹೇಳಿದರು. ಆಚಾರಿಗಾದರೂ ಅಷ್ಟೇ ಬೇಕಾಗಿತ್ತು. ಅವನು ನಾಲ್ಕು ದಿನಗಳ ರಜೆ ಪಡೆದು ರತ್ನಪುರಕ್ಕೆ ಹೋದನು.

ರತ್ನಪುರವೆಂದರೆ, ಅದು ಹೆಸರಿನ ರತ್ನಪುರವು. ಅಲ್ಲಿ ಔಷಧಕ್ಕೆ ಸಹ ಒಂದು ರತ್ನ ದೊರೆಯುತ್ತಿದ್ದಿಲ್ಲ. ಇಷ್ಟೇ ಅಲ್ಲ, ಅದು ಬಡತನದ ಗ್ರಾಮವಿದ್ದು, ಶ್ರೀಮಂತ ಕುಟುಂಬಗಳು ಅಲ್ಲಿ ಒಂದಾದರೂ ಇದ್ದಿದ್ದಿಲ್ಲ. ಇಂತಹ ನಿರ್ಧನ ಗ್ರಾಮದಲ್ಲಿ ರಾಧೆಯ ವಿಲಾಸವೃತ್ತಿಯನ್ನು ತಣಿಸುವ ಧನಕುಬೇರನು ಹೇಗೆ ದೊರೆಯಬೇಕು? ಅವಳು ತನ್ನ ವಿಲಾಸದ ಕುಂಡದಲ್ಲಿ ತಂದೆಯ ಆಸ್ತಿಯನ್ನು ಹೋಮ ಮಾಡಿದ್ದಳು. ಮುಂದೆ ಏನು ಮಾಡಬೇಕೆಂಬುದೇ ಅವಳಿಗೆ ತೋಚದಾಗಿತ್ತು. ಅವಳು ಹೀಗೆ ವಿಪನ್ನಾವಸ್ಥೆಗೀಡಾದ ಕಾಲದಲ್ಲಿಯೇ ಅಡವಿಯು ಅಡಿವ್ಯಾಚಾರಿಯಾಗಿ ಪತ್ನಿಯನ್ನು ಕರೆದೊಯ್ಯುವದಕೆ ರತ್ನಪುರವನ್ನು ಪ್ರವೇಶಿಸಿದನು. ರಾಧೆಗೂ ಊರು ಬಿಡುವದೇ ಬೇಕಾಗಿತ್ತು. ವಿಜಯನಗರದಂತಹ ಧನಸಂಪನ್ನವಾದ ಪಟ್ಟಣವೇ ತನ್ನ ವಾಸಕ್ಕೆ ಯೋಗ್ಯವೆಂದು ಅವಳ ಭಾವನೆಯಾಯಿತು. ಅಡವಿಯ ಸಹಾಯದಿಂದ ಊರು ಸೇರಿದಮೇಲೆ, ಅಡವಿಯನ್ನು ಮತ್ತೆ ಅಡವೀಪಾಲು ಮಾಡುವದೇನೂ ಅಗವ್ಯವಾದ ವಿಷಯವಲ್ಲೆಂದು ತಿಳಿದು, ಅವಳು ಪರಮ ಸಾಧ್ವಿಯಂತೆ ಪತಿಯ ಛಾಯಾನುವರ್ತಿಯಾದಳು.

ಅಡಿವ್ಯಾಚಾರಿಯು ಪತ್ನಿ ಸಮೇತನಾಗಿ ವಿಜಯನಗರವನ್ನು ಪ್ರವೇಶಿಸಿದನು. ಕೃಷ್ಣರಾಯರು ಭಾವಚಿತ್ರದೊಳಗಿನ ರಾಧೆಯನ್ನು ಪ್ರತ್ಯಕ್ಷನೋಡಿ ಕೃತಾರ್ಥರಾದರು. ದಂಪತಿಗಳಿಬ್ಬರೂ ತಮ್ಮ ಮನೆಯ ಅಡಿಗೆ-ನೀರುಗಳ ವ್ಯವಸ್ಥೆ ಮಾಡಿಕೊಂಡಿರಬೇಕೆಂದು ಅವರು ಆಚಾರಿಗೆ ಹೇಳಿದರು ದೈವ ತೆರೆದರೆ ಅಡಿಗೆ-ನೀರುಗಳಿಗಾಗಿ ಆಚಾರಿಯನ್ನಿಡಬೇಕೆನ್ನುತ್ತಿದ್ದ ರಾಧೆಯು, ತಾನೇ ಆ ಉದ್ಯೋಗವನ್ನು ಹೇಗೆ ಕೈಕೊಳ್ಳುವಳು?

ರಾಧೆಯು ಬಂದ ಮೇಲೆ ಅಡಿವ್ಯಾಚಾರಿಯ ದೈವ ತೆರೆಯಿತು. ಅವನಿಗೆ ತಿಂಗಳೊಂದಕ್ಕೆ ಹದಿನೈದು ರೂಪಾಯಿ ಸಂಬಳ ದೊರೆಯಹತ್ತಿತು. ಇಬ್ಬರ ಊಟವೂ ರಾಯರಲ್ಲೇ! ಕೋಣೆಗೆ ಬಾಡಿಗೆ ತೆಗೆದುಕೊಳ್ಳುವದಿಲ್ಲವೆಂದು, ಸ್ಥಾನ-ಮಾನ ನೋಡಿ ದೊಡ್ಡ ಮನಸ್ಸು ಮಾಡುವ ಕೃಷ್ಣರಾಯರು ಹೇಳಿಬಿಟ್ಟಿದ್ದರು. ಅಡವೀಪಾಲಾದ ಅಡವಿಯ ಸಂಸಾರವು ಸುಂದರವಾಯಿತು. ವಿಜಯನಗರದಲ್ಲಿ ಅಪರಿಚಿತಳಾದ ಆಚಾರಪತ್ನಿಯು ಕೆಲವು ದಿನ ಸಾಧ್ವಿಗಿಂತಲೂ ಸಾಧ್ವಿಯಾಗಿದ್ದಳು.

ಒಂದೆರಡು ದಿನಗಳಲ್ಲಿಯೇ ಚಾಣಾಕ್ಷನಾದ ಕೃಷ್ಣರಾಯನು ರಾಧೆಯ ಹೆಜ್ಜೆಗಳನ್ನು ಗುರುತಿಸಿದನು. ಅವನ ಸೂಕ್ಷ್ಮ ಶೋಧನೆಯಲ್ಲಿ ಅವಳ ಅಲ್ಪಸ್ವಲ್ಪ ಇತಿಹಾಸವೂ ಅವಗತವಾಯಿತು. ಅವಳು ನಾಲ್ಕಾರು ಇಯತ್ತೆಗಳನ್ನು ಕಲಿತದ್ದರಿಂದ ಶಿಕ್ಷಕೆಯ ಸ್ಥಳದಲ್ಲಿ ನಿಯಮಿಸಬೇಕೆಂದು ಅವನು ಯೋಚಿಸಿದನು. ರಾಧೆಯು ಅತ್ಯಾನಂದದಿಂದ ಆ ಮಾತಿಗೆ ಒಪ್ಪಿದಳು. ಅವಳು ಕೆಲವು ತಿಂಗಳ ನೌಕರಿ ಮಾಡುವಷ್ಟರಲ್ಲಿ ಕೃಷ್ಣರಾಯರ ಮನಮೆಚ್ಚಿಸಿದಳು. ರಾಯರು ಅವಳನ್ನು ಟ್ರೇನಿಂಗಿಗೆ ಕಳಿಸುವದನ್ನು ನಿರ್ಧರಿಸಿದರು. ಅವಳ ಸಂಗಡ ಹೇಗೆ ವ್ಯವಹಾರವಿಟ್ಟರೂ ಅಡಿವ್ಯಾಚಾರಿಯ ಮನಸ್ಸು ಕ್ಷುಬ್ಧವಾಗಬಾರದೆಂಬ ವಿಚಾರದಿಂದ ಅವರು ಆ ನಿರಕ್ಷರಕುಕ್ಷಿಯನ್ನು ಓದು-ಬರೆಹದ ಮಟ್ಟಿಗೆ ಸಿದ್ಧಪಡಿಸಿ ಶಿಕ್ಷಕನನ್ನಾಗಿ ನಿಯಮಿಸಿದರು. ಅಡಿವ್ಯಾಚಾರಿಯ ದೈವವು ಮತ್ತಿಷ್ಟು ತೆರೆಯಿತು. ಈಗ ಅವನು ಅಡವೀರಾಯನಾದನು. ಅಡವಿ ಹೋಗಿ ಅಡಿವೆಪ್ಪಾ, ಅಡಿವೆಪ್ಪ ಹೋಗಿ ಅಡಿವ್ಯಾಚಾರಿ, ಆಡಿವ್ಯಾಚಾರಿ ಹೋಗಿ ಅಡವೀರಾಯ! ಈ ಮೇರೆಗೆ ನಾಮ ರೂಪಾಂತರವಾದದ್ದೂ ಸ್ಥಿತಿಗತಿಯಲ್ಲಿ ಸುಧಾರಣೆಯಾದದ್ದೂ ಮಹದ್ಭಾಗ್ಯವೆಂದೇ ಅಡವೀರಾಯನ ತಿಳುವಳಿಕೆಯಾಯಿತು. ಅಡವೀರಾಯನಂತೆ ರಾಧೆಯೂ ನಾಮ ರೂಪಾಂತರ ಹೊಂದಿದ್ದಳು. ರತ್ನಪುರದ ರಾಧೆಯು ವಿಜಯನಗರದಲ್ಲಿ ಕಾಲಿಟ್ಟೊಡನೆಯೆ ರಾಧಮ್ಮಳಾದಳು. ಮುಂದೆ ಶಿಕ್ಷಕಿಯಾದ ಕೂಡಲೆ

ರಾಧಾದೇವಿಯಾದಳು!

ವಿಜಯನಗರಕ್ಕೆ ಬಂದ ಮೇಲೆ ರಾಧಾದೇವಿಯ ವರ್ತನದಲ್ಲಿ ಸುಧಾರಣೆಯಾಗಿತ್ತು. ರತ್ನಪುರದೊಳಗಿನ ಗ್ರಾಮ್ಯ ವೇಶ್ಯಾ-ವ್ಯವಸಾಯವು ಇಲ್ಲಿ ನಾಶವಾಗಿತ್ತು. ಅವಳ ಅಂತರಂಗದ ಮುಚ್ಚು-ಮರೆಯ ವ್ಯವಹಾರವು ಹೇಗಿದ್ದರೂ, ಬಹಿರಂಗದಲ್ಲಿ ಪತಿಯೊಡನೆ ಪ್ರೇಮದಿಂದ ನಡೆದುಕೊಳ್ಳುವಂತೆ ಹಾವ-ಭಾವವಿಟ್ಟಿದ್ದಳು. ಗಂಡ-ಹೆಂಡರಿಬ್ಬರೂ ಶಿಕ್ಷಣವ್ಯವಸಾಯವನ್ನು ಕೈಕೊಂಡ ಮೇಲೆ, ಕೃಷ್ಣರಾಯರ ಬಿಡಾರವನ್ನು ಬಿಟ್ಟು ಬಾಡಿಗೆಯ ಮನೆಯಲ್ಲಿರತೊಡಗಿದರು. ಕೃಷ್ಣರಾಯರ ಅನುಗ್ರಹದಿಂದ ರಾಧಾದೇವಿಯು ಒನ್ಮ್ಕೆ ಟ್ರೇನಿಂಗ ಹೊಂದಿ ಬಂದಳು.

ಕೃಷ್ಣರಾಯನು ವಿದ್ಯಾಸಂಸ್ಥೆಯನ್ನು ಕೃಷ್ಣನ ಗೋಕುಲವಾಗುವ ಸ್ಥಿತಿಗೆ ತಂದು ಮುಟ್ಟಿಸಿದ್ದರೂ, ತನ್ನ ಕಾಮದೇವನ ಕಾರಭಾರವು ಗುಪ್ತವಾಗಿರುವಂತೆ ಜಾಗ್ರತನಾಗಿರುತ್ತಿದ್ದನು ಆದರಂತೆ ರಾಧಾದೇವಿಯಾದರೂ ತನ್ನ ರಹಸ್ಯದ ಕಾರಭಾರವು ರಹಸ್ಯವಾಗಿರುವಂತೆ ಯುಕ್ತಿಸುತ್ತಿದ್ದಳು. ತನ್ನ ಪತ್ನಿಯ ಹೆಜ್ಜೆಗಳು ಸರಿಯಾಗಿರುವವೆಂದು ಅಡವೀರಾಯನು ಸಂಭ್ರಮಗೊಳ್ಳುತ್ತಿದ್ದರೆ, ಮಧ್ಯವಯಸ್ಕನಾದ ತನ್ನಲ್ಲಿ ರೂಪವತಿಯಾದ ನವವಯಸ್ಕ ತರುಣಿಯು ಎಷ್ಟು ಪ್ರೇಮದಿಂದ ನಡೆಯತೊಡಗಿರುವಳೆಂದು ಕೃಷ್ಣರಾಯನು ಉಬ್ಬುತ್ತಿದ್ದನು ಒಬ್ಬನ ಮೇಲೆ ದೃಷ್ಟಿಕ್ಷೇಪಮಾಡಿ ಮತ್ತೊಬ್ಬನಿಗೆ ಸನ್ನೆ ಮಾಡುವದನ್ನೂ, ಮತ್ತೊಬ್ಬನಿಗೆ ಸನ್ನೆಮಾಡಿ ಮಗದೊಬ್ಬನ ಕೈಹಿಡಿಯುವದನ್ನೂ, ಮಗದೊಬ್ಬನ ಕೈಹಿಡಿದು ಇನ್ನೊಬ್ಬನೊಡನೆ ವಿಲಾಸವನ್ನನುಭವಿಸುವದನ್ನೂ ಮಾಡುವಂತಹ ಜಾತಿವಂತ ವಾರ-ವನಿತೆಯರನ್ನು ನಾಚಿಸುವಂತಹ ಕಲೆಯನ್ನು ರಾಧಾದೇವಿಯು ಬಲ್ಲವಳಾಗಿದ್ದಳು.

ರಾಧಾದೇವಿಯೊಬ್ಬಳ ಕಂಕಣನಿನಾದದಿಂದ ಕೃಷ್ಣರಾಯರ ರಾಕ್ಷಸೀ ವಿಲಾಸವೃತ್ತಿಯು ಉಪಶಮನವಾಗುವಂತಹದಿದ್ದಿಲ್ಲ ಅದಕ್ಕಾಗಿ ಅವರು ಕಾಮದೇವನ ಕಾರಭಾರದಲ್ಲಿ ರಾಧಾದೇವಿಯನ್ನು ಮಧ್ಯಸ್ಥಳನ್ನಾಗ ಮಾಡಿದ್ದರು. ಅದಕ್ಕಾಗಿಯೇ ಅವಳಿಗೆ ಕುಲಟಾಶಿಖಾಮಣಿಯೆಂಬ ಗೌರವದ ಪದವಿಯೂ ದೊರೆತಿತ್ತು. ಅವಳು ಕುಂಟಲಿಯ ಕಾರ್ಯವನ್ನು ಚನ್ನಾಗಿ ನೆರವೇರಿಸುತ್ತ ಹೋದಂತೆ, ವೇತನವು ಹೆಚ್ಚಾಗುತ್ತಿತ್ತು. ಅವಳು ತನ್ನ ಕರ್ತವ್ಯಪ್ರಭಾವದಿಂದ ವಿಜಯನಗರ ಸಂಸ್ಥಾನದ ಹುಡುಗಿಯರ ಒಂದನೇ ನಂಬರ ಶಾಲೆಯ ಮೇಲೆ ಮುಖ್ಯ ಶಿಕ್ಷಕಿಯಾದಳು. ಮೊದಮೊದಲು ಅವಳ ಕುಲಟಾ ಕಾರಭಾರವು ಗುಪ್ತವಾಗಿತ್ತು. ಬರಬರುತ್ತ ಅದು ಪ್ರಕಾಶ

ಗೊಂಡಿತು. ಎಲ್ಲರೂ ರಾಧಾದೇವಿಯನ್ನು ಚನ್ನಾಗಿ ಗುರುತಿಸತೊಡಗಿದರು. ವಿಜಯನಗರದಲ್ಲಿ ಎಷ್ಟೋ ಶಿಕ್ಷಕಿಯರಿದ್ದರೂ, ಬರಿಯ 'ಸ್ಕೂಲ ಮಿಸ್ಟ್ರೆಸ್' ಎಂದು ಯಾರಾದರೂ ಸಂಬೋಧಿಸಿದರೆ ಅಥವಾ ಮಾತಿನಲ್ಲಿ ಉಪಯೋಗಿಸಿದರೆ, ರಾಧಾದೇವಿಯ ಚಿತ್ರವೇ ಎಲ್ಲರ ಕಣ್ಣುಮುಂದೆ ನಿಲ್ಲುತ್ತಿತ್ತು.

ರಾಧಾದೇವಿಯು ಕೃಷ್ಣರಾಯರನ್ನು ಮನಸಾ ಪ್ರೀತಿಸುತ್ತಿದ್ದಿಲ್ಲ. ಅವರ ಅಧಿಕಾರವು ಅವಳನ್ನು ಪ್ರೇಮಾಭಿನಯ ಮಾಡಹಚ್ಚಿತ್ತು ಹೆಚ್ಚಿನ ವೇತನ ಪಡೆಯುವದಕ್ಕಾಗಿ ಅವಳು ಇತರ ಶಿಕ್ಷಕಿಯರ ಶೀಲವನ್ನು ನಾಶ ಮಾಡಲುದ್ಯುಕ್ತಳಾಗುತ್ತಿದ್ದಳು. ಕೃಷ್ಣರಾಯರು ವಿದ್ಯಾಸಂಸ್ಥೆಯನ್ನು ಕೃಷ್ಣನ ಗೋಕುಲವನ್ನಾಗಿ ಮಾಡಿದ್ದರು. ಗೋಕುಲದೊಳಗಿನ ರಾಧಾ-ಗೋಪಿಕೆಯೇ ಸ್ಕೂಲ ಮಿಸ್ಟ್ರೆಸ್ಸಾದ ರತ್ನಪುರದ ರಾಧಾದೇವಿಯಾಗಿದ್ದಳು.

ರಾಧಾ-ಗೋಪಿಕೆಯು ಸ್ಕೂಲ ಮಿಸ್ಟ್ರೆಸ್ಸಾದೊಡನೆಯೇ ಪತಿಯೊಡನೆ ಬೇರೆ ಮನೆಯಲ್ಲಿರಹತ್ತಿದಳು. ಅವಳ ಕಣ್ಣು ಕುಕ್ಕುವ ಸೌಂದರ್ಯಪ್ರಕಾಶಕ್ಕೆ ವಿಜಯನರದಲ್ಲಿಗಯ ವಕೀಲನಾದ ಗೋವರ್ಧನರಾಯನು ಮುಗ್ಧನಾದನು. ಅವನು ತನ್ನ ಸಂಪತ್ತಿನ ಬಲದಿಂದ ರಾಧಾದೇವಿಯನ್ನು ವಶಪಡಿಸಿಕೊಂಡನು; ಆದರೆ ಅವನ ಈ ಗುಪ್ತ ವ್ಯವಹಾರವು ಬೈಲಿಗೆ ಬಿದ್ದುದರಿಂದ, ರಾಧಾದೇವಿಯು ಕೃಷ್ಣರಾಯರ ಕ್ರೋಧಕ್ಕೀಡಾಗಿದ್ದಳು; ಆದರೂ ಆನಂದರಾಯ ಮಾಸ್ತರನ ಮಧ್ಯಸ್ತಿಕೆಯಿಂದ ಒಮ್ಮೆ ಆ ಡೊಂಕು ತಿದ್ದಿತು. ಆ ಮೇಲೆ ಮಾತ್ರ ರಾಧಾದೇವಿಯು ಅಡ್ಡ ಹೆಜ್ಜೆಯಿಡುವಾಗ ಮೈತುಂಬ ಕಣ್ಣುಳ್ಳವಳಾಗುತ್ತಿದ್ದಳು.

ಗೋಕುಲದ ಕೃಷ್ಣನು ರಾಧಾ-ಗೋಪಿಕೆಯೊಡನೆ ರಾಸಕ್ರೀಡೆಯಾಡುವ ಸ್ಥಳವು ಮೊದಲು ಒಂದೇ ಇತ್ತು. ಕೃಷ್ಣರಾಯರು ತಮ್ಮ ಆಕಳ್ಳರಾಣಿಯನ್ನು ಮೊದಮೊದಲು ಮನೆಯಲ್ಲಿಯೇ ಬರಮಾಡಿಕೊಂಡು ಪ್ರೇಮ-ವಿಲಾಸಗಳನ್ನಾಡುತ್ತಿದ್ದರು. ಅದು ಸಾಲದ್ದಕ್ಕೆ ಅವರು ಅವಳಿದ್ದ ಶಾಲೆಯೊಳಗಿನ ಒಂದು ಕೋಣೆಯನ್ನು ತೆರವು ಮಾಡಿಸಿ, ರಾಸಕ್ರೀಡೆಯ ಕುಂಜವನವನ್ನಾಗಿ ಮಾಡಿದ್ದರು. ರಾಧಾದೇವಿಯ ಮನೆಯಲ್ಲೊಂದು ಅಂಥದೇ ವಿಲಾಸಭವನವನ್ನು ಸಿದ್ಧಪಡಿಸಬೇಕೆಂದು ಕೃಷ್ಣರಾಯರ ಸಾಹಸವಿತ್ತು; ಆದರೆ ರಾಧಾದೇವಿಯು ಪತಿಯ ಮುಂದೆಯೇ ತಾಂಡವ ಮಾಡುವಷ್ಟು ಇನ್ನೂ ಮನೋಧೈರ್ಯ ಹೊಂದಿದ್ದಿಲ್ಲ; ಹಾಗು ಶಿಕ್ಷಕ ವ್ಯವಸಾಯ ಮಾಡತೊಡಗಿದಾಗಿನಿಂದ ಅವಳು ಜನಾಪವಾದಕ್ಕೂ ಅಲ್ಪಮಟ್ಟಿಗೆ ಬೆದರಹತ್ತಿದ್ದಳು ವ್ಯವಸಾಯ ಬಂಧುಗಳ ಹಾಗು ಮಿಕ್ಕಜೀವದ ಸ್ನೇಹಿತರ ಉಪಹಾಸಕ್ಕೀಡಾದೇ

ನೆಂದು ಅವಳು ಮನೆಯಲ್ಲಿಯೇ ವಿಲಾಸಭುವನವನ್ನು ನಿರ್ಮಾಣ ಮಾಡ ಲಿಕ್ಕೆ ಅಂಜತೊಡಗಿದ್ದಳು. ರಾಧಾದೇವಿಯು ಒಪ್ಪದಿದ್ದರೆ, ಅಧಿಕಾರಬಲದಿಂದ ಬೇಕಾದಂತಹ ಕಾರ್ಯಮಾಡಹಚ್ಚಲಿಕ್ಕೆ ಕೃಷ್ಣರಾಯರು ಹಿಂಜರಿಯುತ್ತಿದ್ದಿಲ್ಲ; ಆದರೆ ಇವರ ಕಾಮದೇವನ ಕಾರಭಾರದ ದಿಶೆಯು ಬೇರೆ ಕಡೆಗೆ ಹೊರಳಿತ್ತು. ಅವರ ದೃಷ್ಟಿಯು ಇದೀಗ ಶಾಲಾಧ್ಯಾಪಕಳಾಗಿದ್ದ ರಮಾದೇವಿಯ ಕಡೆಗೆ ಬಿದ್ದುದರಿಂದ, ಸದ್ಯದ ಮಟ್ಟಿಗಂತು ಆ ವಿಲಾಸಭುವನದ ನಿರ್ಮಾಣಕಾರ್ಯವು ನೆನೆಗುದಿಗೆ ಬಿದ್ದಿತ್ತು. ಹೊಸದಾಗಿ ರಂಗಭೂಮಿಗೆ ಬಂದ ರಂಗದೇವತೆಯನ್ನು ಪ್ರಸನ್ನೀಕರಿಸುವ ಕಾರ್ಯದಲ್ಲಿ ಪ್ರಾಮುಖ್ಯಳಾದ ಸೂತ್ರಧಾರಳು ರಾಧಾ-ಗೋಪಿಕೆಯೇ ಆಗಿದ್ದಳು. ಈ ಸ್ಕೂಲ ಮಿಸ್ಟ್ರೆಸ್ಸಳು ಬಹಳೇ ಚತುರಳೂ ಪಾತಾಳಯಂತ್ರಿಯೂ ಇದ್ದು, ಅನೇಕ ಕುಲಯುವತಿಯರ ಶೀಲಗಳನ್ನು ಗೋಕುಲದ ಕೃಷ್ಣನ ವಿಲಾಸಯಜ್ಞದಲ್ಲಿ ಬಲಿಕೊಟ್ಟಿದ್ದಳು. ರಮಾದೇವಿಯ ಶೀಲವನ್ನಷ್ಟು ಸೂರೆಮಾಡಿಬಿಟ್ಟರೆ, ಕೃತಕೃತ್ಯಳಾದೆನೆಂದು ಅವಳ ಭಾವನೆಯಾಗಿತ್ತು. ಈ ವಿಷಯದಲ್ಲಿ ರಾಧಾ-ಗೋಪಿಕೆಯು ತನ್ನ ಕೌಶಲ್ಯವನ್ನು ಹೆಚ್ಚಾಗಿ ವೆಚ್ಚಮಾಡತೊಡಗಿದ್ದಳು.

——

## ಹಲಗೆಯ ಮೇಲಿನ ಬರೆಹ.

ಎಜ್ಯುಕೇಶನಲ್ ಇನಸ್ಪೆಕ್ಟರ ಸಾಹೇಬರಾದ ಕೃಷ್ಣರಾಯರು ಸಂಸ್ಥಾನದಲ್ಲೆಲ್ಲ ಸ್ತ್ರೀಶಿಕ್ಷಣ ಪ್ರಸಾರವಾಗಬೇಕೆಂದು ಬಹು ಪರಿಯಾಗಿ ಯತ್ನಿಸುವಂತೆ ತೋರುತ್ತಿದ್ದರೂ, ಅವರ ಈ ಉದಾತ್ತ ತತ್ವದ ಕೆಳಗೆ ಭೀಷಣವೂ ಪಾತಕಪೂರ್ಣವೂ ಆದ ಮತ್ತೊಂದು ತತ್ವವಿರುವದೆಂಬದು ಗೊತ್ತಾಗಲಿಕ್ಕೆ ರಮಾದೇವಿಗೆ ಬಹಳ ದಿನಗಳು ಬೇಕಾಗಲಿಲ್ಲ. ಇಷ್ಟು ದಿನಗಳ ವರೆಗೆ ಅವಳು ಸಂಸ್ಥೆಯ ಹೊರಗಿನವಳಿದ್ದುದರಿಂದ ಯಾವ ಸಂಗತಿಗಳೂ ವಿಶದವಾಗಿ ತಿಳಿಯಲಿಕ್ಕೆ ಮಾರ್ಗವಿದ್ದಿಲ್ಲ. ನೌಕರಿಯನ್ನು ಕೈಕೊಂಡ ಸ್ವಲ್ಪ ದಿನಗಳಲ್ಲೇ ಕೃಷ್ಣರಾಯರ ಹೃದಯದ ಕೃಷ್ಣಚಿತ್ರಪಟವು ಕಾಣಲಾರಂಭಿಸಿತು. ಪ್ರೇಮ, ದಯೆ, ಸಹಾಯಾನುಭೂತಿಗಳ ಸುಳ್ಳು, ಪೊಳ್ಳು-ಹೊದಿಕೆಯ ಕೆಳಗೆ ರಾಕ್ಷಸೀ ಮಹತ್ವಾಕಾಂಕ್ಷೆಯೊಂದು ಕುಲಯುವತಿಯರ ಸತೀತ್ವ ಆಹುತಿಯನ್ನು ತೆಗೆದುಕೊಳ್ಳಲಿಕ್ಕೆ ಬಾಯಿ ತೆರೆದು ಕುಳಿತದ್ದು ಅವಳಿಗೆ ತಿಳಿಯಿತು. ಆ ವಿಷಯಲಾಲಸೆಗೆ ಸ್ಥಾನ-ಮಾನಗಳ ಕಲ್ಪನೆಯಿರಬಹುದೆಂದು ಮೊದಮೊದಲು ಅವಳ ಕಲ್ಪನೆಯಾಗಿತ್ತು; ಆದರೆ ಇತ್ತೀಚೆಗೆ ಆ ಕಲ್ಪನೆಯೂ ಭ್ರಾಮಕ

ವಾದದ್ದೆಂಬದರ ನಂಬಿಗೆಯಾಯಿತು. ಸ್ಕೂಲ ಮಿಸ್ಟ್ರೆಸ್ ರಾಧಾದೇವಿಯ ಮಧ್ಯಸ್ಥಿಕೆಯಿಂದ ಎಂತ ಎಂತಹ ಸಾಧ್ವಿಯರ ಮಾನ-ಶೀಲಗಳು ನಾಶವಾಗಿರುವವೆಂಬ ಸಂಗತಿಯು ಅವಳಿಗೆ ತಿಳಿಯಿತು. ಕೆಲವು ಸಚ್ಛೀಲ ತರುಣಿಯರು ಅತ್ಯಾಚಾರಕ್ಕೊಳಪಡದೆ ನೌಕರಿಗೆ ಶರಣು ಹೊಡೆದು ಹೋದ ಸುದ್ದಿಯನ್ನೂ ಅವಳು ಕೇಳಿದ್ದಳು. ಕೆಲವು ವ್ಯವಸಾಯ ಭಗಿನಿಯರ ಮುಖಾಂತರವಾಗಿ ಅತ್ಯಂತ ರಹಸ್ಯವಾಗಿದ್ದ ಸಂಗತಿಗಳನ್ನಾದರೂ ಅವಳು ತಿಳಿದುಕೊಂಡಿದ್ದಳು ಕೃಷ್ಣರಾಯರ ವಿಷಯ ಲಾಲಸೆಯು ಎಷ್ಟು ಭಯಂಕರವಾದದ್ದಿರುವದೆಂದು, ಅವರು ಎಷ್ಟು ಜನ ಸಕೇಶಿ-ವಿಕೇಶಿ ವಿಧವೆಯರ ಮೇಲೆ ಅತ್ಯಾಚಾರ ಮಾಡಿರುವರು,ನೌಕರಿಯಿಂದ ಉಪಜೀವನ ನಡೆಯಿಸಬೇಕೆಂದು ಹಾರೈಸಿಕೊಂಡು ಶಿಕ್ಷಣ ಸಂಸ್ಥೆಯನ್ನು ಸೇರಿದ ಸಿರಾಧಾರಿ ಗತಭರ್ತೃಕೆಯರು ಎಷ್ಟು ಜನರು ಕೃಷ್ಣರಾಯರ ಅತ್ಯಾಚಾರಕ್ಕೆ ಬಲಿಯಾಗಿರುವರು, ಎಷ್ಟು ಜನ ಸಾಧ್ವಿಯರು ಪಾವಿತ್ರ್ಯ ರಕ್ಷಣೆಗಾಗಿ ಆತ್ಮಬಲಿದಾನ ಮಾಡಿರುವರು ಮೊದಲಾದ ಸಂಗತಿಗಳು ಅವಳಿಗೆ ತಿಳಿದದ್ದಲ್ಲದೆ, ಶಾಲಾಧಿಕಾರಿಗಳಿಂದ ಅಂಗಸ್ಪರ್ಶ-ಆಲಿಂಗನ-ಚುಂಬನಗಳಿಲ್ಲದೆ ಎಷ್ಟು ಜನ ಶಿಕ್ಷಕಿಯರು ಉಳಿದಿರುವರೆಂಬ ಸಂಖ್ಯೆಯಾದರೂ ಅವಳಿಗೆ ಒಬ್ಬ ಚಾಣಾಕ್ಷ ಶಿಕ್ಷಕಿಯಿಂದಗೊತ್ತಾಗಿತ್ತು. ವಿಜಯನಗರಸಂಸ್ಥಾನದ ಶಿಕ್ಷಣಸಂಸ್ಥೆಯೆಂದರೆ, ವಿಟಗಾರ-ವಿಟಗಾರ್ತಿಯರ ಸಂಘವೆಂದೆಂದರೆ ಅತಿಶಯೋಕ್ತಿಯಾಗುವಂತಿದ್ದಿಲ್ಲ ಗುಪ್ತ ವ್ಯಭಿಚಾರಿಗಳಿಗಿಂತಲೂ ಮೈಚಳಿ ಬಿಟ್ಟು ವ್ಯಭಿಚಾರ ಮಾಡುವ ಸ್ತ್ರೀ-ಪುರುಷರ ಸಂಖ್ಯೆಯು ದೊಡ್ಡದಾಗಿತ್ತು. ಕೃಷ್ಣರಾಯರು ಅಂತಹ ಜನರನ್ನು ತಂದು ತುಂಬಿ, ಅವರ ಸಹಾಯದಿಂದ ಸದಾಚಾರಿಗಳನ್ನೂ ದುರಾಚಾರಕ್ಕೆ ಪ್ರವೃತ್ತರನ್ನಾಗಿ ಮಾಡಿ ಕೃತಕೃತ್ಯರಾಗಿದ್ದರು. ಅಲ್ಲಿಯ ಶಿಕ್ಷಕಿಯರ ಬೆಲೆಯೆಂದರೆ, ಓಣಿ-ಓಣಿಗಳಲ್ಲಿ ದೇಹವಿಕ್ರಯದ ಅಂಗಡಿಗಳನ್ನು ಹಚ್ಚಿಕೊಂಡು ಕುಳಿತ ಸಂತೆಯ ಸೂಳೆಯರಿಗಿಂತಲೂ ಕನಿಷ್ಠವಾಗಿ ಹೋಗಿತ್ತು! ಸ್ತ್ರೀ ಶಿಕ್ಷಣ ಪ್ರಸಾರಣೆಯ ಉದಾತ್ತ ತತ್ವವನ್ನು ಮುಂದೆ ಮಾಡಿ, ಕೃಷ್ಣರಾಯರು ನೆರವೇರಿಸಿದ ಕಾರ್ಯಗಳ ಕೃಷ್ಣಚಿತ್ರಗಳು ಇನ್ನೂ ಬಹಳವಾಗಿದ್ದವು. ಆದರ ಅನುಯಾಯಿಗಳ ವಿಶ್ವಪ್ರಯತ್ನದಿಂದ ಕೆಲವು ಕೃತ್ಯಗಳು ಇನ್ನೂ ಗುಪ್ತವಾಗಿಯೇ ಇದ್ದವು.

ಈಗ ಕೃಷ್ಣರಾಯರ ಕೃಷ್ಣಕಟಾಕ್ಷವು ರಮಾದೇವಿಯ ಮೇಲೆ ಬಿದ್ದಿತ್ತು. ಕೆಲಸದ ನಿರೀಕ್ಷಣೆಯ ನಿಮಿತ್ತದಿಂದ ಮೇಲಿಂದ ಮೇಲೆ ಅವರು ರಮಾದೇವಿಯ ಶಾಲೆಗೆ ಹೋಗುತ್ತಿದ್ದರು. ಹೋದಾಗ ವಿದ್ಯಾರ್ಥಿಗಳ

ನ್ನೇನೂ ನೋಡದೆ, ಅವಳೊಡನೆ ಹುಚ್ಚು-ಎಡ್ಡು ಮಾತಾಡಿ, ಕಳ್ಳತನದಿಂದ ಅವಳ ಸೌಂದರ್ಯಾಮೃತ ಪಾನಮಾಡಿ ಬರುತ್ತಿದ್ದರು. ಸಂದಿಗ್ಧ ಭಾಷೆಯಿಂದ ಅವಳ ಮನಮೆಚ್ಚಿಸುವ ಸಾಹಸವನ್ನೂ ಕೃಷ್ಣರಾಯರು ಮಾಡುತ್ತಿದ್ದರು. ರಮಾದೇವಿಯನ್ನು ಸರಕಾರೀ ಕೆಲಸದ ನಿಮಿತ್ತದಿಂದ ಮನೆಗೂ, ಸ್ಕೂಲ ಮಿಸ್ಟ್ರೆಸ ರಾಧಾದೇವಿಯ ಶಾಲೆಯೊಳಗಿದ್ದ ವಿಲಾಸಮಂದಿರಕ್ಕೂ ಕರೆಯಿಸಬೇಕೆಂದು ಅವರು ಬಹು ಪರಿಯಾಗಿ ಸಾಹಸ ಮಾಡಿದರು. ಸರಕಾರೀ ಕೆಲಸಕ್ಕಾಗಿ ತನ್ನ ಶಾಲೆಯನ್ನು ಬಿಟ್ಟು ಬೇರೆ ಕಡೆಗೆ ಬರುವದಿಲ್ಲೆಂದು ರಮಾದೇವಿಯು ಮಿಷ್ಟ್ರಗೆ ತಿಳಿಸಿದಳು. ಸ್ಕೂಲ ಮಿಸ್ಟ್ರೆಸ್ ರಾಧಾಬಾಯಿಯು ಅವಳನ್ನು ತನ್ನ ಮನೆಗಾದರೂ ಕರೆದೊಯ್ದು, ಕೃಷ್ಣರಾಯರಿಗೆ ಅವಳ ಏಕಾಂತ ಭೆಟ್ಟಿಯ ಯೋಗವನ್ನು ತಂದುಕೊಡಬೇಕೆಂದು ಹೋರಾಡಿದಳು. ರಮಾದೇವಿಯು ತನ್ನ ನೆರಳಿಗೆ ಅಂಜುವಂತಹಳಿದ್ದಳು. ಹೀಗಿದ್ದ ಮೇಲೆ ಇಂತಹ ಕಾಲಟಿ-ಕುಟೀಲರ ಓಲಗದಲ್ಲಿ ಹೇಗೆ ಬರುವಳು? ಹೂವಿಳ್ಯದ ಸಮಯದಲ್ಲಾದರೂ ಬಂದರೆ ಕಾರ್ಯಸಾಧನೆಯಾಗಬಹುದೆಂಬ ಇಚ್ಛೆಯಿಂದ ಕೃಷ್ಣರಾಯನು ತನ್ನ ಪತ್ನಿಗೆ ಹೇಳಿ, ರಮಾಬಾಯಿಗೆ ಅರಿಷಿಣ-ಕುಂಕುಮದ ಆಮಂತ್ರಣವನ್ನು ಕೊಡಿಸಿ ನೋಡಿದನು. ರಮಾದೇವಿಯು ಆಮಂತ್ರಣಕ್ಕೆ ಮಾನ್ಯತೆಯನ್ನೇ ಕೊಡಲಿಲ್ಲ. ತಮ್ಮ ಎಲ್ಲ ಸಾಹಸಗಳು ನಿರರ್ಥಕವಾಗತೊಡಗಿದ್ದರಿಂದ ಕೃಷ್ಣರಾಯರು ಸಂತಾಪಗೊಂಡರು. ಅವರು ರಾಧಾದೇವಿ, ಅನಂತ-ಗೋವಿಂದರ ಮೇಲೆ ಹರಿಹಾಯುಹತ್ತಿದರು. ಅಪ್ಸರೆಯನ್ನು ಮೀರುವಂತಹ ಸ್ತ್ರೀಯು ಅಧಿನದಲ್ಲಿದ್ದರೂ ಸ್ವಾಧೀನಳಾಗದ್ದರಿಂದ, ಅವರ ಹೃದಯದಲ್ಲಿ ತಳಮಳವುಂಟಾಯಿತು. ಅವರು ಕೈಕೊಂಡ ಚತುರೋಪಾಯಗಳು ವ್ಯರ್ಥವಾಗಿ ಹೋಗಿದ್ದವೆಂದರೂ ಅಡ್ಡಿಯಿಲ್ಲ. ಇನ್ನೊಮ್ಮೆ ಪ್ರಯತ್ನ ಮಾಡಬೇಕೆಂಬ ಉದ್ದೇಶದಿಂದ ಅವರು ತಮ್ಮ ಸ್ಕೂಲ ಮಿಸ್ಟ್ರೆಸ್ಸಳನ್ನು ರಮಾದೇವಿಯ ಮನೆಗೆ ಕಳುಹಿದರು.

ಸ್ಕೂಲ ಮಿಸ್ಟ್ರೆಸ್ ರಾಧಾದೇವಿಯು ಸುರೇಂದ್ರರಾಯನಿಲ್ಲದ ಸಧಿಯನ್ನು ಸಾಧಿಸಿ, ರಮಾದೇವಿಗೆ ಭೆಟ್ಟಿಯಾದಳು. ಅವಳ ಆಗಮನವು ರಮಾದೇವಿಯ ಮನಸ್ಸಿಗೆ ತಿರಸ್ಕಾರವನ್ನುಂಟುಮಾಡಿತು. ಚಾರಿತ್ರ್ಯಹೀನಳಾದ ಅವಳೊಡನೆ ಮಾತಾಡುವದು ಸಹ ಪಾಪವೆಂದು ಸಾಧ್ವೀಮಣಿಯಾದ ರಮಾದೇವಿಯು ತಿಳಿದಿದ್ದಳು. ರಾಧಾದೇವಿಯು ರಮಾದೇವಿಯನ್ನು ಕಂಡಕೂಡಲೆ–'ನಿಮ್ಮ ದೈವವು ತೆರೆಯಿತು. ಇನಸ್ಪೆಕ್ಟರ ಸಾಹೇಬರವರು ನಿಮ್ಮ ಕೆಲಸ ಮಾಡುವ ಪದ್ಧತಿಗೆ ಮೆಚ್ಚಿರುವರು. ಅವರು ನಿಮಗೆ ಐದು ರೂಪಾ-

ಯಿಗಳ ಪ್ರವೋಶನ ಕೊಡುವರಂತೆ. ಸಾಹೇಬರ ಅನುಗ್ರಹವನ್ನು ಸಂಪಾದಿಸಿದರೆ ಸೌಖ್ಯಕ್ಕೇನೂ ಕೊರತೆಯಿಲ್ಲ.

ರಮಾದೇವಿಯು ಏನೂ ಉತ್ತರ ಕೊಡದೆ ಸುಮ್ಮನಿದ್ದಳು. ಅನಂತರದಲ್ಲಿ ರಾಧಾದೇವಿಯು–'ಯಾಕೆ, ರಮಾದೇವಿ, ನನ್ನ ಮಾತುಗಳು ಸುಳ್ಳೆಂದು ತಿಳಿದಿರುವಿರೇನು? ಇಗೋ ನೋಡಿರಿ. ಮಾಂಗಲ್ಯದ ಆಣೆಯಾಗಿ ನಾನು ನಿಜವನ್ನು ಹೇಳುತ್ತಿರುವೆನು,' ಎಂದು ನುಡಿದು, ಅವಳ ಲಗ್ನದ ಗಂಡನ ಹೆಸರಿನಿಂದ ಕಟ್ಟಿದ ಮಾಂಗಲ್ಯವನ್ನು ಮುಟ್ಟಿಕೊಂಡಳು.

'ರಾಧಾದೇವಿ ನಿಮ್ಮ ಮಾತುಗಳು ಸುಳ್ಳೆಂದು ನಾನೆಲ್ಲಿ ಅಂದೆನು? ಅಷ್ಟು-ಇಷ್ಟು ಮಾತಿಗೆ ಮಾಂಗಲ್ಯದ ಆಣೆ ಮಾಡುವರೆ?'

ನಿಜವಾದ ಮಾತಿಗಾಗಿ ಆಣೆ ಮಾಡಿದರೆ ಅಡ್ಡಿಯೇನು?' ಎಂದು ರಾಧಾದೇವಿಯು ನುಡಿದು—'ರಮಾದೇವಿ, ಮಾಂಗಲ್ಯದ ಆಣೆ ಮಾಡಿದರೆ ಗಂಡನಿಗೆ ಪಿಡುಗು ಬರುವದೇನು? ಹಾಗಿದ್ದರೆ ಹೇಳಿರಿ. ದಿನಾಲು ಹತ್ತು ಸಾರೆ ಆಣೆ ಮಾಡಲಿಕ್ಕೆ ಸಿದ್ಧಳಾಗುವೆನು.'

'ರಾಧಾದೇವಿ, ಪತಿಯು ದೇವತಾ ಸಮಾನನು. ಅವನಿಗೆ ಅಹಿತ ಚಿಂತನೆ ಮಾಡುವದು ಸತಿಯ ಧರ್ಮವಲ್ಲ. ನೀವು ಈ ವಿಧದ ಮಾತುಗಳನ್ನಾಡಬೇಡಿರಿ. ನನ್ನ ಕಿವಿಯ ಮೇಲಂತೂ ಇಂತಹ ಮಾತುಗಳು ಬೀಳದಂತೆ ನಡೆದುಕೊಳ್ಳಿರಿ.'

'ದುಡಿಯಲಾರದ ಗಂಡಂದಿರು ಇದ್ದರೇನು ಸತ್ತರೇನು? ನಾವು ಯುಕ್ತಿ ಪ್ರಯುಕ್ತಿಗಳಿಂದ ದುಡಿಯದೆ, ಗತಿಯಿಲ್ಲದಂತಹ ಗಂಡಂದಿರನ್ನು ಆಷ್ಟೊಂದು ನಂಬಿಕೊಂಡು ಕೂಡ್ರುವದೇಕೆ? ಹೆಸರಿಗೆ ಗಂಡತನದ ಮುದ್ರೆ ಹಾಕಲ್ಪಟ್ಟಿದ್ದಕ್ಕೆ, ನಾವೂ ಹೆಂಡತಿತನದ ಮುದ್ರೆಯಾದ ಮಾಂಗಲ್ಯವನ್ನು ಮಾತ್ರ ಧರಿಸಿರಬೇಕು. ಮಿಕ್ಕದ್ದೇನು? ನಮ್ಮ ಇಷ್ಟ! ನೀವೇ ಚನ್ನಾಗಿ ವಿಚಾರ ಮಾಡಿರಿ. ನೀವು ದುಡಿಯದಿದ್ದರೆ ಮನೆತನ ಸಾಗುವಂತಿರುವದೆ? ಕೃಷ್ಣರಾಯರು ಹೊಟ್ಟೆಯಲ್ಲಿ ಹಾಲು ಹಾಕಿಕೊಳ್ಳದಿದ್ದರೆ ನೀವು ಎಷ್ಟು ಕಷ್ಟಪಡುತ್ತಿದ್ದಿರಿ?'

'ರಾಧಾದೇವಿ, ಜಗತ್ತಿನಲ್ಲಿ ಎಲ್ಲರೂ ಶ್ರೀಮಂತರೂ, ಸುಖಿಗಳೂ ಇರುವದಿಲ್ಲ. ಹುಟ್ಟಿಸಿದ ದೇವರು ಹುಲ್ಲು ಮೇಯಿಸುವದಿಲ್ಲ. ಹೇಗಾದರೂ ಹಿಂಡಿ-ರೊಟ್ಟಿಗಳ ಮೇಲೆ ಕಾಲಹಾಕುವಂತೆ ದುಡಿಯುವ ಜಾಣ್ಮೆಯು ನಮ್ಮವರಲ್ಲುಂಟು.'

ರಮಾದೇವಿ, ನಾನು ನಿಸ್ಪೃಹತೆಯುವಳು. ನನ್ನ ಮಾತಿಗೆ ಸಿಟ್ಟೆ

ಗೇಳಬೇಡಿರಿ. ಹಿಂಡಿ-ರೊಟ್ಟಿಯನ್ನು ಕೊಡುವ ಗಂಡದೇವನಿಗೆ ದೇಹದ ಮೇಲಿನ ಸಂಪೂರ್ಣ ಸ್ವಾಮಿತ್ವವನ್ನರ್ಪಿಸಲಿಕ್ಕೆ ಸಿದ್ಧವಾಗುವಂಥವರು ಸಕ್ಕರೆ-ತುಪ್ಪಗಳನ್ನುಣ್ಣಿಸುವ ದೇವರಿಗೆ ಸ್ವಲ್ಪಾದರೂ ಭಕ್ತಿಯನ್ನು ತೋರಿಸ ದಿರುವದೆಂದರೆ, ಕೃತಘ್ನತೆಯ ಚಿಹ್ನವೆಂದು ನಾನು ಅನ್ನುವೆನು. ಕೃಷ್ಣನಂತೆ ಹದಿನಾರು ಸಹಸ್ರ ಸ್ತ್ರೀಯರನ್ನಾಳುವ ಸಾಮರ್ಥ್ಯವೇನೂ ಮರ್ತ್ಯಪುರುಷ ರಲ್ಲಿರುವದಿಲ್ಲ, ಏನೋ ಅಲ್ಪ ಸಹವಾಸ-ಆಲಿಂಗನ ಚುಂಬನ ಇಷ್ಟೇ! ನೋಡಿರಿ, ಅವರು ಕ್ಷೋಭೆಗೊಂಡರೆ ನಮ್ಮ ಪರಿಣಾಮವು ಒಳಿತಾಗುವದೆ? ಕೆಲಸವು ಹೋಯಿತೆಂದರೆ ಭಿಕ್ಷಾಪಾತ್ರೆಯೇ ಕೈಗೆ ಬರುವದು! ಇಂತಹ ಪ್ರಸಂಗದಲ್ಲಿಯೂ ಜಾಣತನ ಮಾಡಬಾರದೆಂದರೆ, ದೈವದುರ್ವಿಲಾಸವೇಸರಿ ಕೆಲಸವು ಹೋದಮೇಲೊದಗುವ ಯಾತನೆಗಳನ್ನು ನೆನಿಸಿದರೆ ಮನಸ್ಸು ಎಂತಹ ಕಾರ್ಯಕ್ಕಾದರೂ ಸಿದ್ಧವಾಗುವದು. ಆ ಅವಸ್ಥೆಯು ಮರೆಯಲ್ಲಿ ರುವದರಿಂದ, ಆದರ ವಿಷಯವಾಗಿ ಜನರು ಭಯಪಡುತ್ತಿರುವದಿಲ್ಲ. ವರಿ ಷ್ಠರ ಅಲ್ಪವಾದ ಬೇಡಿಕೆಯನ್ನು ಪೂರೈಸಿದರೆ ಆಗುವ ಹಾನಿಯೇನು? ತಿರುಗಿ ಕೇಳಿದರೆ ಲಾಭವೇ ಉಂಟು.”

ರಾಧಾದೇವಿಯ ಸಂದಿಗ್ಧವಾದಮಾತುಗಳ ಗುರಿಯು ರಮಾದೇವಿಯ ಲಕ್ಷ್ಯದಲ್ಲಿ ಬಾರದೇ ಇರಲಿಲ್ಲ. ಅಸಂಬಂಧವೂ, ಪಾಪವ್ಯಂಜಕವೂ ಆದ ಅವಳ ಮಾತುಗಳು ರಮಾದೇವಿಯ ಹೃದಯವನ್ನು ಜಾಗೃತಗೊಳಿಸಿದವು. ಆಗ ಅವಳು ಕ್ರೋಧದಿಂದ—‘ರಾಧಾದೇವಿ, ನೀವು ಯಾರನ್ನುದ್ದೇಶಿಸಿ ಇಂತಹ ಅಭದ್ರವೂ, ಅರ್ಥಹೀನವೂ ಆದಮಾತುಗಳನ್ನಾಡತೊಡಗಿರುವಿರಿ?’

‘ಛೇ! ನೀವು ಹೀಗೇಕೆ ಸಿಟ್ಟಾಗುವಿರಿ? ನಾನು ಜನರಲ್ ರೂಲ ಹೇಳಿದೆನಲ್ಲದೆ, ವ್ಯಕ್ತಿಗೆ ಸಂಬಂಧಿಸಿದ ಮಾತುಗಳನ್ನಾಡಲಿಲ್ಲ. ಪ್ರಚಾರ ದಲ್ಲಿ ತಂದರೆ ಈ ನಿಯಮವು ಹಾನಿಕರವಲ್ಲ. ಮನುಷ್ಯರಿಗೆ ಸುಖಸಂಪದ ಗಳು ಬೇಕೇಬೇಕು. ದುಃಖ-ಯಾತನೆಗಳನ್ನು ಯಾರೂ ಬಯಸುವದಿಲ್ಲ. ನಿಮ್ಮ ಸ್ಥಿತಿಯನ್ನೇ ಯೋಚಿಸಿರಿ. ನೀವಿಬ್ಬರೂ ಗಂಡ-ಹೆಂಡಿರು ನೌಕರಿಯ ಲ್ಲಿರುವದರಿಂದ ಪರಿಣಾಮವು ನೆಟ್ಟಗದೆ. ನೌಕರಿ ಹೋದರೆ ಅನ್ನಾನ್ನದೆಸೆ ಯಿಂದ ನಿಮಗೆ ಸಾಯುವ ಪ್ರಸಂಗವು ಬರುವದಿಲ್ಲವೆ? ಅದಕ್ಕಾಗಿ ನೀವು ವರಿಷ್ಠರ ಮನಸ್ಸನ್ನು ಪ್ರಸನ್ನೀಕರಿಸಿಕೊಂಡಿರಬೇಕಾಗುವದು. ಧರ್ಮದ ಆಡಂಬರ, ಸತೀತ್ವದ ಅಹಂಕಾರ, ಶೀಲದ ಪ್ರತಿಷ್ಠೆ ಮೊದಲಾದವುಗಳೇನು ಹೊಟ್ಟೆಗೆ ಹಾಕುವವೆ? ಹೆಂಡತಿಯ ವಿಲಾಸ-ಸೌಖ್ಯಗಳನ್ನು ಪೂರೈಸಿ ಕೌತುಕ ಪಡುವಂತಹ ಯೋಗ್ಯತೆಯಿಲ್ಲದ ದರಿದ್ರ ಗಂಡಂದಿರು ಗಂಟುಬಿದ್ದಾಗ

ನಾವೇ ನಮ್ಮ ಬುದ್ಧಿ-ಕುಶಲತೆಯಿಂದ ಏನಾದರೂ ಯುಕ್ತಿ ಹುಡಕಿ, ಸಂಸಾರವನ್ನು ಸುಖಸಾರವನ್ನಾಗಿ ಮಾಡಿಕೊಳ್ಳಬೇಕು. ರಮಾದೇವಿ, ನಾನು ಹೇಳುವ ನೀತಿಯು ಸದ್ಯದ ಸ್ಥಿತಿಯಲ್ಲಂತು ಪ್ರತಿಯೊಬ್ಬ ಶಿಕ್ಷಕಿಗೆ ಹಿತಾವಹವಿರುವದೆಂಬೇ ನನ್ನ ಮತವು.'

'ಭಾವೀ ಪ್ರಜೆಗಳನ್ನು ನಿರ್ಮಾಣ ಮಾಡುವಂತಹ ಶಿಕ್ಷಕಿಯರಿಗೆ ಹಿತಕರವಾದ ಮಾತುಗಳನ್ನು ನೀವು ಹೇಳಿರುವದಿಲ್ಲ. ದೇಹ ವಿಕ್ರಯ ಮಾಡುತ್ತಿರುವ ವಾರಾಂಗನೆಯರಿಗೆ ಒಂದುವೇಳೆ ಇಂತಹ ನೀತಿ-ನಿಯಮಗಳು ಹಿತಕರವೆನಿಸಬಹುದು. ನೀವು ಹೀಗೆ ಮಾತಾಡುವದು ನಿಮ್ಮ ತಪ್ಪಲ್ಲ. ಶಿಕ್ಷಣಸಂಸ್ಥೆಯು ವಿಟಕರ-ಜಾರೆಯರ ಸಂಸ್ಥೆಯಾಗಿರವಾಗ, ಆ ಸಂಸ್ಥೆಯೊಳಗಿನ ಪ್ರಮುಖ ಪಾತ್ರವಾದ ನಿಮ್ಮಿಂದ ಇಂತಹ ಮಾತುಗಳು ಹೊರಡಬಾರದೆಂದರೆ ಹೇಗೆ ಬಿಡುವವು? ರಾಧಾದೇವಿ; ನೀವು ಬೇರೆ ಮಾತಾಡುತ್ತಿದ್ದರೆ ಕುಳಿತುಕೊಳ್ಳಿರಿ. ಅನೀತಿಮಯವಾದ ಭಾಷಣವನ್ನು ಕೇಳಲಿಕ್ಕೆ ನನಗೆ ಬಹಳೇ ಹೇಸಿಕೆಯಾಗುವದು.'

'ಅವ್ವ ನೋಡೇ! ಹೇಗಿರುವಳು ಗರತಿ-ಗಂಗವ್ವ, ಸೀತಾ-ಸಾವಿತ್ರಿ! ನನಗೆ ಬಿರುಸು ಮಾತಾಡಿ ಬಾಳುವೆಯಾ? ಆಗಲಿ ನೋಡೋಣ!' ಎಂದು ರಾಧಾದೇವಿಯು ಬಿಮ್ಮನೆ ಬಿಗಿದುಕೊಂಡು ಅಲ್ಲಿಂದ ತೆರಳಿದಳು.

ರಾಧಾದೇವಿಯು ಹೋದ ಮೇಲೆ ರಮಾದೇವಿಯು ವಿಷಣ್ಣಮನಸ್ಕಳಾಗಿ ಕುಳಿತುಕೊಂಡಳು. ಪಾಪದ ಪುತ್ಥಳಿಯಾದ ಕುಲಟೆಯು ಅಭದ್ರವಾದ ಮಾತಾಡಿದ ಬಗ್ಗೆ ಅವಳ ಅಂತಃಕರಣಕ್ಕೆ ನೋವಾಗಿತ್ತು. ತನ್ನ ನೌಕರಿಯ ಜೀವನವು ಸುಖಮಯವಾಗುವದೋ-ಇಲ್ಲವೋ ಎಂಬ ಪ್ರಶ್ನೆಯು ಅವಳ ಮುಂದೆ ನಿಂತುಕೊಂಡಿತು. ಹೊಟ್ಟೆಯ ಕಿಚ್ಚಿಗಾಗಿ ಅವಳು ನೌಕರಿಯನ್ನು ಕೈಕೊಂಡಿದ್ದಳು; ಆದರೆ ಶಿಕ್ಷಣ ಸಂಸ್ಥೆಯು ಬಹುಮಟ್ಟಿಗೆ ಹಸಗೆಟ್ಟು ಹೋದದ್ದನ್ನು ನೋಡಿ, ಉಪವಾಸವಿದ್ದರೂ ನೌಕರಿ ಮಾಡಬಾರದೆಂಬ ವಿಚಾರವು ಅವಳಲ್ಲಿ ಹುಟ್ಟಿತು. ಎಲ್ಲ ಸಂಗತಿಗಳನ್ನು ಪತಿಯ ಕಿವಿಯ ಮೇಲೆ ಹಾಕಿ, ನೌಕರಿಗೆ ಶರಣು ಹೊಡೆಯುವದೇ ವಿಹಿತವೆಂದು, ಅವಳು ನಿರ್ಧರಿಸಿಕೊಂಡಳು. ಅಷ್ಟರಲ್ಲಿ—'ಅಕ್ಕಾ ಅವರೇ!' ಎಂದು ಕೂಗಿದರು.

ಕೂಡಲೆ ರಮಾದೇವಿಯು ಹೊರಗೆ ಬಂದು—'ಯಾರು, ಖಾದಿರಖಾನ ಸಾಹೇಬನೇನು?'

'ಹೌದು ಅಕ್ಕಾ ಅವರೆ. ರಾವಸಾಹೇಬರು ಶಾಲೆಗೆ ಬಂದಿರುವರು. ನಿಮ್ಮನ್ನು ಕರಕೊಂಡು ಬರಲಿಕ್ಕೆ ನನ್ನನ್ನು ಕಳಿಸಿದರು.'

ರಮಾದೇವಿಯು ವೇಳಾಯಂತ್ರದ ಕಡೆಗೆ ನೋಡಿದಳು. ಆಗಲೆ ನಾಲ್ಕು ಬಡೆದು ಹೋಗಿತ್ತು. ಅವಳು ಗಾಬರಿಯಾದಳು. ಶಾಲೆಯ ವೇಳೆ-ಯು ಮೀರಿದ್ದಕ್ಕಾಗಿ ವರಿಷ್ಠರಿಂದ ಸಿಟ್ಟು ಮಾಡಿಸಿಕೊಳ್ಳಬೇಕಾಯಿತೇಂದು ಅವಳು ಬೆದರಿದಳು. ಅವಳು ಎಂದೂ ಹೊತ್ತು ತಪ್ಪಿಸಿದವಳಲ್ಲ. ಹೊತ್ತುಗೇಡಿಯಾದ ರಾಧಾದೇವಿಯು ನೀತಿಪ್ರವಚನ ಹಚ್ಚಿಕೊಂಡು ಕುಳಿತದ್ದರಿಂದ ಇಂದು ತಡವಾಯಿತು. ರಾಧಾದೇವಿಯೇನು? ಅವಳು ಸ್ವರಾಜ್ಯ-ಸ್ವಾತಂತ್ರ್ಯಗಳ ಅಧಿದೇವತೆಯು, ಅವಳಿಗೆ ಶಾಲೆಯ ಕಾನೂನುಗಳ ಭಯವೇನು? ಅವಳು ಬಂಧನಾತೀತಳಾಗಿದ್ದಳು.

ರಮಾದೇವಿಯು ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಶಾಲೆಗೆ ಬಂದಳು ರಾವಸಾಹೇಬರ ಸವಾರಿಯು ಕುರ್ಚಾಸನದ ಮೇಲೆ ಮಂಡಿಸಿತ್ತು. ಬಳಿಯಲ್ಲಿ ಒಬ್ಬ ಉಪಶಿಕ್ಷಕಿಯು ನಿಂತಿದ್ದಳು. ರಮಾದೇವಿಯು ಶಾಲೆಯನ್ನು ಪ್ರವೇಶಿಸಿ, ಇನಸ್ಪೆಕ್ಟರರಿಗೆ ನಮಸ್ಕರಿಸಿದಳು. ಸಾಹೇಬರು ಅವಳ ನಮುಸ್ಕಾರವನ್ನು ಸ್ವೀಕರಿಸದೆ, ಕ್ರುದ್ಧವಾಣಿಯಿಂದ—'ರಮಾದೇವಿ, ಶಾಲೆಗೆ ಬರುವ ವೇಳೆಯೆ ಇದು? ನಾಲ್ಕು ಬಡೆದು ಇಪ್ಪತ್ತು ನಿಮಿಷಗಳಾಗಿವೆ. ನಿಮ್ಮ ಈ ಅಪರಾಧಕ್ಕೆ ಶಾಸನವನ್ನೇಕೆ ವಿಧಿಸಬಾರದು?"

'ನಾನು ಎಂದೂ ತಡಮಾಡುವದಿಲ್ಲ. ಮನೆಗೆ ರಾಧಾದೇವಿಯವರು ಬಂದಿದ್ದರು. ಅವರು ತಾಸೆರಡು ತಾಸು ಮಾತಾಡುತ್ತ ಕುಳಿತಿದ್ದರಿಂದ ತಡವಾಯಿತು. ಅವರು ಶಾಲೆಗೆ ಹೋಗಿ ಒಂದು ಗಳಿಗೆಯಾಗಿರಬಹುದು.'

'ನಿಮ್ಮ ತಪ್ಪು ಮುಚ್ಚಿಕೊಳ್ಳಲಿಕ್ಕೆ ಮಂದಿಯ ತಪ್ಪು ಬೈಲಿಗಿಡುವಿರಾ? ರಾಧಾದೇವಿಯು ಶಾಲೆಗೆ ಬೇಕಾದಾಗ ಹೋಗಲಿ-ಬಿಡಲಿ, ಅದನ್ನು ವಿಚಾರಿಸುವವರು ನೀವಲ್ಲ.'

'ಅವರ ತಪ್ಪು ಎತ್ತುವದಕ್ಕಾಗಿ ಆಡಲಿಲ್ಲ; ವಸ್ತುಸ್ಥಿತಿಯನ್ನು ನಿವೇದಿಸಿದೆನು', ಎಂದು ನುಡಿದು ರಮಾದೇವಿಯು ಕೈ ಜೋಡಿಸಿ—'ರಾವಸಾಹೇಬರೆ, ಇಂದು ನನ್ನಿಂದ ಘಟಿಸಿದ ಅಪರಾಧವನ್ನು ಕ್ಷಮಿಸಿರಿ.'

'ಹಾ! ಅದೇ ಅನ್ನುತ್ತೇನೆ. ನಾವು ದೊಡ್ಡ ಮನಸ್ಸಿನಿಂದ ನಿಮಗೆ ಕೆಲಸ ಕೊಡಬೇಕು. ಹಾಗು ನಿಮ್ಮ ನಿಮ್ಮ ಪತಿರಾಯರ ವೇತನ ಹೆಚ್ಚು ಮಾಡಬೇಕು. ಶಾಲೆಯನ್ನು ಬಿಟ್ಟು ಮನೆಯಲ್ಲಿ ಕುಳಿತೇ ವೇತನ ಕೇಳಿದರೂ ಕೊಡಬೇಕು. ಇಷ್ಟೆಲ್ಲ ಸೌಕರ್ಯಗಳನ್ನನುಭವಿಸುತ್ತ ನೀವು ನಮ್ಮ ಮಾತುಗಳನ್ನು ಧಿಃಕರಿಸಿ ಅಹಂಕಾರದಲ್ಲಿ ಮೆರೆಯಬೇಕು.'

'ರಾವಸಾಹೇಬರೆ, ನಾನು ನಿಮ್ಮ ಹುಕುಮನ್ನು ಎಂದೂ ಅವಮಾನಿಸಿಲ್ಲ.'

'ಇರಲಿ. ಈ ವಿಷಯವಾಗಿ ಹಿಂದಿನಿಂದ ಮಾತಾಡೋಣ. ವಿದ್ಯಾರ್ಥಿನಿಯರನ್ನು ಮನೆಗೆ ಕಳಿಸಿರಿ. ನಿಮ್ಮ ಶಾಲೆಯ ಕಾಗದಪತ್ರಗಳನ್ನು ನೋಡಬೇಕಾಗಿದೆ.'

ನಾಲ್ಕೂವರೆ ಗಂಟೆಗೆ ವಿದ್ಯಾರ್ಥಿನಿಯರು ಮುಕ್ತರಾದರು. ಸಾಹೇಬರು ಬಂದರೆ ಬೇಗನೆ ಸಾಲೆಬಿಡುವದೆಂಬ ತಿಳುವಳಿಕೆಯಿಂದ, ನಿತ್ಯದಲ್ಲಿ ಎರಡೂ ವೇಳೆ ಸಾಹೇಬರನ್ನು ಶಾಲೆಗೆ ಬರುವಂತೆ ಮಾಡಬೇಕೆಂದು ಅವರು ದಾರಿಯಲ್ಲಿ ಹತ್ತುವ ಹನುಮಪ್ಪ, ಬಸವಣ್ಣ ಮೊದಲಾದ ದೇವರಿಗೆ ಬೇಡಿಕೊಳ್ಳುತ್ತ ಆನಂದದಿಂದ ತಮ್ಮ ತಮ್ಮ ಮನೆಗೆ ತೆರಳಿದರು.

ಹುಡುಗೆಯರೆಲ್ಲ ಹೊರಟು ಹೋದ ಮೇಲೆ ಸಾಹೇಬರು ರಮಾದೇವಿಯನ್ನು ಕುರಿತು—'ನಿಮ್ಮ ಉಪಶಿಕ್ಷಕಿಯರಿಬ್ಬರೂ ಏಕೆ ಬಂದಿಲ್ಲ? ಅವರಿಗೆ ರಜೆಯನ್ನು ಕೊಟ್ಟಿರುವಿರಾ?'

'ಇಲ್ಲ; ಅವರು ರಜೆ ಬೇಡಿಲ್ಲ.'

'ಮುಖ್ಯ ಶಿಕ್ಷಕಿಯರು ಬೇಗ ಬರುತ್ತಿದ್ದರೆ ತಾನೆ ಉಪಶಿಕ್ಷಕಿಯರು ಬೇಗ ಬಂದಾರು? ನಿಮ್ಮಂತಹ ಕೆಲಸಗೇಡಿಗಳನ್ನು ಮುಖ್ಯಶಿಕ್ಷಕಿಯರನ್ನಾಗಿ ನಿಯಮಿಸಿದ್ದೇ ನಮ್ಮ ತಪ್ಪು.

'ಅವರು ರಾಧಾದೇವಿ ಸ್ಕೂಲ ಮಿಸ್ಟ್ರೆಸ್ಸರ ಮನೆಯಲ್ಲಿದ್ದರಂತೆ.' ಎಂದು ಅಲ್ಲಿಯೇ ಇದ್ದ ಒಬ್ಬ ಉಪಶಿಕ್ಷಕಿಯು ಸಾಹೇಬರಿಗೆ ಹೇಳಿದಳು

'ನಿಮಗೆ ಎಚ್ಚರವಿರುವಾಗಲೇ ಸ್ವಪ್ನ ಬೀಳುವದೇನು?'

'ನೀವು ಬಂದ ಮೇಲೆ ಅವರನ್ನು ಕರೆತರುವದಕ್ಕಾಗಿ ವಿದ್ಯಾರ್ಥಿನಿಯರನ್ನು ಕಳಿಸಿದ್ದೆನು.'

'ಅವರು ರಾಧಾದೇವಿಯವರ ಮನೆಯಲ್ಲಿಲ್ಲ. ನೀವು ಸುಳ್ಳಾಡುವಿರಿ. ನಾನು ಅಲ್ಲಿಂದಲೇ ಇತ್ತ ಬಂದಿರುವೆನು.'

'ವಿದ್ಯಾರ್ಥಿನಿಯರು ಅಲ್ಲಿಗೆ ಹೋದ ಕೂಡಲೆ ಆನಂದರಾಯರೂ ನಮ್ಮ ಶಾಲೆಯ ಸ್ಕೂಲ ಮಿಸ್ಟ್ರೆಸ್ಸರಿಬ್ಬರೂ ಬಂದರಂತೆ. 'ಇಂದು ಶಾಲೆಗೆ ಬರಲಿಕ್ಕೆ ಅನುಕೂಲವಾಗುವದಿಲ್ಲ. ಇನಸ್ಪೆಕ್ಟರರು ಶಾಲೆಗೆ ಬಂದಿರುವರೆಂದು ಕೆಲಸ ಬಿಟ್ಟುಬರಲಾರೆವು' ಎಂದು ನಮ್ಮಶಾಲೆಯ ಮಿಸ್ಟ್ರೆಸ್ಸರುಹೇಳಿದರಂತೆ.

'ಸರಿಯಾಗಿ ಹೇಳಿದರು. ನೀವು ಕರೆಕಳಿಸಿದಾಗ ಮನೆಯ ಕೆಲಸ ಬಿಟ್ಟು ಬರಲಿಕ್ಕೆ ಅವರೇನು ನಿಮ್ಮಪ್ಪನಿಟ್ಟ ಆಳಲ್ಲ!'

ವರಿಷ್ಠರ ವಾಣಿ! ಅದು ಹೇಗಿದ್ದರೂ ಸರಿಯೆ! ಅವರ ದೇವವಾಣಿಯ ಮುಂದೆ ಕನಿಷ್ಠರದೇನು ನಡೆಯುವದು? ಸಾಹೇಬರ ಗರ್ಜನೆಗಂಜಿ ಆ

ಮಿಸ್ಟ್ರೆಸ್ಸಳು ತಪ್ಪಗಾದಳು. ರಾಧಾದೇವಿ-ಆನಂದ-ಗೋವಿಂದರಂತಹ ಶಿಕ್ಷಕ ಶಿಕ್ಷಕಿಯರು ಶಾಲೆಯ ವೇಳೆಯಲ್ಲಿ ತಂಡಗಟ್ಟಿತಿರುಗಾಡುತ್ತಿದ್ದರೂ, ಯಾವದೊಂದು ಸ್ಥಳದಲ್ಲಿ ಸ್ವಚ್ಛಂದದಿಂದ ಮಾತಾಡುತ್ತ ಕುಳಿತಿದ್ದರೂ, ಅದರ ಕಡೆಗೆ ದೊಡ್ಡ ಮನಸ್ಸು ಮಾಡಿದ್ದ ಸಾಹೇಬರಿಗೆ, ಎರಡು ತಾಸು ತಡವಾಗಿ ಶಾಲೆಗೆ ಬಂದ ರಮಾದೇವಿಯ ಅಪರಾಧದ ವಿಚಾರಣೆ ಮಾಡುವ ಆವಶ್ಯಕತೆಯು ಬಹಳವಾಗಿತ್ತು. ಆಗ ಅವರು ದರ್ಪಯುಕ್ತವಾಣಿಯಿಂದ-'ರಮಾದೇವಿ, ನಿಮಗೆ ನೌಕರಿಯ ಆಶೆಯಿಲ್ಲವೆಂದು ನಿಮ್ಮ ವರ್ತನದ ಮೇಲಿಂದ ಸ್ಪಷ್ಟವಾಗುವದು. ನಾವು ಕೊಟ್ಟ ಸೌಕರ್ಯದ ದುರುಪಯೋಗವಾಗತೊಡಗಿರುವದರಿಂದ, ನಿಮ್ಮನ್ನು ಕೆಲಸದಲ್ಲಿಡಬಾರದೆಂದೇ ಯೋಚನೆ ಹುಟ್ಟಿದೆ. ಅತ್ತ ಸುರೇಂದ್ರರಾಯರು ಕೆಲಸದಲ್ಲಿ ಬಿಟ್ಟೀಬೇಸರ ಮಾಡತೊಡಗಿರುವರು; ಇತ್ತ ನಿಮ್ಮ ಸ್ಥಿತಿಯೂ ಹಾಗೆಯೇ. ನೀವು ನೌಕರಿಜೀವಿಗಳಿರುವಿರೆಂಬದನ್ನು ಲಕ್ಷದಲ್ಲಿ ತಂದಂತೆ ಕಾಣುವದಿಲ್ಲ. ಗಂಡ-ಹೆಂಡರಿಬ್ಬರೂ ಕೆಲಸ ಕಳಕೊಂಡು ಮನೆಹಿಡಿದು ಕುಳಿತ ಮೇಲೆ ಸಾಹೇಬರ ಮಾತಿನಂತೆ ಏಕೆ ನಡೆದಿರಲಿಕ್ಕಿಲ್ಲೆಂದು ನೀವು ಪಶ್ಚಾತ್ತಾಪಪಡಬಹುದು."

ಇನಸ್ಪೆಕ್ಟರ ಸಾಹೇಬರ ಮಾತುಗಳನ್ನು ಕೇಳಿ, ರಮಾದೇವಿಯ ಎದೆಯು ನಡುಗಿತ. ತಾನೂ ಹಾಗು ತನ್ನ ಪತಿಯೂ ಶಿಕ್ಷಣವ್ಯವಸಾಯದಲ್ಲಿ ಎಷ್ಟು ಎಲುವು ಸವಿಸಿದರೂ ಸಾಹೇಬರ ಮನಸ್ಸು ಸಂತುಷ್ಟವಾಗದೆ, ಅವರು ನೌಕರಿಗೆ ಕೇರು ಹಾಕುವದಕ್ಕೆ ಸಿದ್ಧರಾಗಿರುವರೆಂದು ಅವಳು ನೊಂದುಕೊಂಡಳು. ರಾಧಾದೇವಿ-ಆನಂದ-ಗೋವಿಂದರಂತಹ ಸ್ಕೂಲ ಮಿಸ್ಟ್ರೆಸ್ ಹಾಗು ಮಾಸ್ತರರು ತಮ್ಮ ನೌಕರೀ ಜೀವವನ್ನು ಸ್ವಚ್ಛಂದವಾಗಿ ಕಳೆಯುತ್ತಿದ್ದರೂ ಅವರ ಕರ್ತವ್ಯದ ಪ್ರಶಂಸೆಯೇ ಆಗುತ್ತಿರುವದು; ಆದರೆ ತನ್ನ ಹಾಗು ತನ್ನ ಪತಿಯಂತಹ ಶಿಕ್ಷಕ-ಶಿಕ್ಷಕಿಯರು ಅವಿಶ್ರಾಂತ ಶ್ರಮಪಡುತ್ತಿದ್ದರೂ ಅದರ ಬಗ್ಗೆ ಸಂಭಾವನೆ ದೊರೆಯುವದೊತ್ತಟ್ಟಿಗಿರಲಿ, ಶಾಸನವು ದೊರೆಯುದಿದ್ದರಾಯಿತೆಂದರೆ ಅದೂ ತಪ್ಪುವಂತಿಲ್ಲ. ಹೀಗೆ ರಮಾದೇವಿಯು ಮನಸ್ಸಿನಲ್ಲಿ ಅಂದುಕೊಂಡು, ಇನಸ್ಪೆಕ್ಟರರನ್ನು ಕುರಿತು—'ಸಾಹೇಬರೆ, ನಾನೂ ಹಾಗೂ ನನ್ನ ಪತಿಯೂ ಶಿಕ್ಷಣವ್ಯವಸಾಯವನ್ನು ಎಷ್ಟು ನಿಷ್ಠೆಯಿಂದ ಮಾಡುತ್ತಿರುವೆವೆಂಬದರ ಬಗ್ಗೆ ವಿಜಯನಗರದ ಲೋಕಮತದಿಂದ ನಂಬಿಗೆ ಮಾಡಿಕೊಳ್ಳಿರಿ. ಶಿಕ್ಷಣ ವ್ಯವಸಾಯದಂತಹ ಪವಿತ್ರ ವ್ಯವಸಾಯವು ಮತ್ತೊಂದಿಲ್ಲ. ರಾಷ್ಟ್ರದ ಭಾವೀ ಆದಾರಸ್ತಂಭರಾದ ವಿದ್ಯಾರ್ಥಿಗಳನ್ನು ಉತ್ತಮ ನಾಗರಿಕರನ್ನಾಗಿಯೂ, ನೀತಿವಂತರನ್ನಾಗಿಯೂ, ಕರ್ತವ್ಯನಿಷ

ರನ್ನಾಗಿಯೂ, ದೇಶಾಭಿಮಾನಿಗಳನ್ನಾಗಿಯೂ ಮಾಡುವ ಕರ್ತವ್ಯಭಾರವು ಶಿಕ್ಷಕರ ಮೇಲಿರುವದೆಂದು ನನ್ನ ಮತವು. ಕೇವಲ ಓದು-ಬರಹ ಕಲಿಸಿದರೆ, ನಾವು ಸರಕಾರ ವಿಹಿತ ಕರ್ತವ್ಯದಿಂದ ಮುಕ್ತರಾಗುವೆವು; ಆದರೆ ಅಷ್ಟು ಕಾರ್ಯ ಮಾಡಿದರೆ ತೀರುವದಿಲ್ಲ. ಬಾಲಕರಿಗೆ ನೈತಿಕ ಶಿಕ್ಷಣವು ಕೊಡಲ್ಪಡಬೇಕು. ಕರ್ತವ್ಯಾಕರ್ತವ್ಯಗಳ ಜ್ಞಾನವು ಅವರಿಗೆ ದೊರೆಯಬೇಕು. ಈ ದೃಷ್ಟಿಯಿಂದಲೇ ನಾನೂ ನನ್ನ ಪತಿಯೂ ಪರಿಶ್ರಮಪಡುತ್ತಿರುವೆವು. ಲೋಕಸೇವೆಯೇ ದೇವತಾಸೇವೆಯೆಂದು ಭಾವಿಸಿದವರ ಮೇಲೆ ಅನುಚಿತವೂ, ಅಸತ್ಯವೂ ಆದ ವಿಧಾನಗಳನ್ನು ಮಾಡತೊಡಗಿದರೆ ಉಪಾಯವಿಲ್ಲ. ನೀವು ಸರ್ವತಂತ್ರ ಸ್ವತಂತ್ರರೂ ಕರ್ತುಮಕರ್ತುಂ ಶಕ್ತಿಯವರೂ ಆಗಿರುವಿರಿ. ನೀವು ಅಧಿಕಾರ ಬಲದಿಂದ ಶಿಕ್ಷಣಸಂಸ್ಥೆಯ ವಿಧಾತರೇ ಆಗಿರುವಿರಿ. ಪರಿಶೀಲಿಸಿ ನೋಡಿ ಶಾಸನ ವಿಧಿಸಬೇಕು. ನಿರಪರಾಧಿಗಳಿಗೆ ವಿಧಿಸಿದ ದಂಡನೆಯು ಶಾಪರೂಪವಾಗಿ ಪ್ರತೀಕಾರ ಮಾಡುವದು.'

'ಹಾ! ನನಗೆ ಭಯತೋರಿಸುವಿರಾ! ರಮಾದೇವಿ, ನಿಮ್ಮ ಪುರಾಣ-ಪುಣ್ಯ ಕತೆಗಳೊಳಗಿನ ನೀತಿಯನ್ನು ಕೇಳಲಿಕ್ಕೆ ನಾನು ಬಂದಿಲ್ಲ. ನೀವು ಇಂದು ರಾಧಾದೇವಿಯನ್ನು ಅಪಮಾನಗೊಳಿಸಿರುವದರಿಂದ, ಪೂರಾ ಅಪರಾಧಿಗಳಿರುವಿರಿ. ನೀವು ಅವರ ಅಪಮಾನ ಮಾಡಲಿಲ್ಲ; ನನ್ನ ಮರ್ಯಾದೆಯನ್ನು ಮಾತ್ರ ತೆಗದಿರಿ. ನನ್ನ ಆಜ್ಞೆಯೂ, ನನ್ನ ಸೂಚನೆಯೂ ನಿಮ್ಮ ಪಾಲಿಗೆ ಬಾಲಭಾಷೆಗಳಾದವಲ್ಲವೆ? ನಿಮ್ಮ ಗವ ವನ್ನು ಮುರಿಯಬೇಕೆಂಬ ನನ್ನ ನಿರ್ಧಾರವಿದೆ. ನೀವು ಹಂಗಾಮಿ ಕೆಲಸಗಾರರಿರುವದರಿಂದ, ಇಂದು ನಿಮ್ಮನ್ನು ನೌಕರಿಯಿಂದ ತೆಗೆದು ಹಾಕಬೇಕೆಂದು ನಿಶ್ಚಯಿಸಿದ್ದೇನೆ. ನಿಮ್ಮ ಪತಿಯು ಬಹಳ ದಿನಗಳ ನೌಕರನಿರುವದರಿಂದ, ಒಮ್ಮೆಲೆ ಕಡಿಮೆ ಮಾಡಲಿಕ್ಕೆ ಬಾರದಾಗಿದೆ. ಈ ವರ್ಷ ಮುಗಿಯುವದರೊಳಗೆ ಅವನನ್ನೂ ಮನೆಗೆ ಕಳಿಸುವೆನು. ಹೀಗೆ ಮಾಡಿದರೆ ಇನಸ್ಪೆಕ್ಟರರ ನಿಜವಾದ ಶಕ್ತಿಯು ಜನರಿಗೆ ಗೊತ್ತಾಗಿ, ಮುಂದಾದರೂ ಅವರ ಆಜ್ಞೆಯನ್ನು ಉಲ್ಲಂಘಿಸುವ ದಡ್ಡತನವು ಆಗಲಿಕ್ಕಿಲ್ಲ.'

ರಮಾದೇವಿಯ ಎದೆಗೆ ಕಲ್ಲು ಬಡೆದಂತಾಯಿತು. ಅವಳು ಸಾಹೇಬರ ಮಾತಿನಿಂದ ಜರ್ಜರಿತಳಾದಳು. ಅವಳು ಧೈರ್ಯ ತಂದುಕೊಂಡು- ನಾನು ನಿಮ್ಮ ಆಜ್ಞೆಯನ್ನು ಮೀರಿಲ್ಲ. ರಾಧಾದೇವಿಯವರು ನಿಮ್ಮ ಆಜ್ಞೆಯ ಸಮಾಚಾರವನ್ನೇ ನನ್ನ ಮುಂದೆ ತೆಗೆದಿಲ್ಲ. ಅವರು ನಗ್ನ ತಾಂಡವದ ಉಪನ್ಯಾಸವನ್ನು ನನ್ನೆಮರಿಗೆ ತೆಗೆದಿದ್ದರು. ನಾನು ಆ ಉಪನ್ಯಾಸದ ನಿಷೇಧ




'ಗುಪ್ತಪ್ರಣಯದಾನಮಾಡುವಿರೋ? ನೌಕರಿ ತ್ಯಜಿಸುವಿರೋ?'

ಮಾಡಿದೆನಲ್ಲದೆ, ನಿಮ್ಮ ಆಜ್ಞಾಭಂಗದ ಪಾಪ ಮಾಡಿಲ್ಲ.'

ಶಾಲೆಯಲ್ಲಿ ರಮಾದೇವಿಯು ಹೊರತು ಇನ್ನೊಬ್ಬ ಉಪಶಿಕ್ಷಕಿಯಿದ್ದುದರಿಂದ ರಾವಸಾಹೇಬರು ತಮ್ಮ ಮನೋಗತವನ್ನು ಸ್ಪಷ್ಟವಾಗಿ ಆಡಲಿಕ್ಕೆ ನಾಚುತ್ತಲಿದ್ದರು. ಆ ಶಿಕ್ಷಕಿಯು ತಾರುಣ್ಯವನ್ನು ದಾಟಿದ ಬಾಲವಿಧವೆಯಾಗಿದ್ದಳು. ಅವಳು ಏರಿಕೆಯ ತಾರುಣ್ಯದಲ್ಲಿ ಕೃಷ್ಣರಾಯನ ಕೃಷ್ಣಕೃತ್ಯದಿಂದ ಪಾರಾಗಿ ಉಳಿಯಲಿಕ್ಕೆ ದೇಹದತ್ತವಾದ ಕಾರಣವಿತ್ತು. ಆ ಕಾರಣವೆಂದರೆ, ಅವಳ ರೂಪವು ಆ ಶಿಕ್ಷಕಿಯು ಕುರೂಪಿಯಿದ್ದುದರಿಂದ ಸಾಹೇಬರು ಅವಳ ಮಟ್ಟಿಗಾದರೂ ಪರನಾರೀ ಸೋದರವ್ರತವನ್ನು ಪಾಲಿಸಿದ್ದರು. ಆ ಸ್ತ್ರೀಯು ನೀತಿವಂತಳಿದ್ದುದರಿಂದ, ಅವಳ ಸಮ್ಮುಖದಲ್ಲಿಯೇ ತಾಂಡವವನ್ನು ಪ್ರಾರಂಭಿಸಲಿಕ್ಕೆ ರಾವಸಾಹೆಬರ ಮನಸ್ಸು ಒಪ್ಪದಾಗಿತ್ತು. ಹೊರಗೆ ಕಳಿಸುವದು ವ್ಯವಹಾರದೃಷ್ಟಿಗೆ ವಿರೋಧವೆಂದು ಅವರ ತಿಳುವಳಿಕೆಯಾಯಿತು; ಮತ್ತು ಅವಳನ್ನು ಹೊರಗೆ ಹೋಗ ಹೇಳಿದರೆ, ಅವಳ ಮನಸ್ಸಿನಲ್ಲಿ ಆಗತಕ್ಕ ಕಲ್ಪನೆಯು ಆಗಿಹೋಗುವದೆಂಬ ಭಯವೂ ಇತ್ತು. ಕೃಷ್ಣರಾಯರು ತಮ್ಮ ಕೃಷ್ಣಕಾರಸ್ಥಾನಗಳು ರಹಸ್ಯವಾಗಿಯೇ ಉಳಿಯಬೇಕೆಂದು ಸಾಧ್ಯವಿದ್ದಮಟ್ಟಿಗಾದರೂ ಯತ್ನಿಸುತ್ತಿದ್ದರು. ಅವರ ಯತ್ನಗಳು ನಿಷ್ಫಲವಾಗಿ ಇರತಕ್ಕಷ್ಟಕ್ಕಿಂತ ಹೆಚ್ಚಿನ ವಾರ್ತೆಗಳು ವಿಜಯನಗರ ಪಟ್ಟಣದ ಸಂದಿ-ಗೊಂದಿಗಳಲ್ಲಿ ಸಹ ಹಬ್ಬಿದ್ದವು. ಜನಕ್ಷೋಭೆಯ ಝಳವು ಕೃಷ್ಣರಾಯರನ್ನು ತಾಕದಿರಲಿಕ್ಕೆ, ಅವರು ಸಂಸ್ಥಾನಿಕರ ಆಪ್ತಕೋಟಿಯೊಳಗಿನವರಿದ್ದದ್ದೇ ಕಾರಣವು. ವರಿಷ್ಠ ಅಧಿಕಾರಿಗಳ ಮಾನ ಕ್ಷಿತಿಮಾಡಬಾರದೆಂಬ ದರಬಾರೀ ಧೋರಣವು ಅವರನ್ನು ರಕ್ಷಿಸುತ್ತಲಿತ್ತು. ಭೂಗರ್ಭದೊಳಗಿನ ಉಗಿಯ ಶಕ್ತಿಯು ಭೂಭಾರವನ್ನು ಅದರಿಸಿ ಬಿಡುವಂತೆ, ಜನರ ಹೃದಯದೊಳಗಿನ ಸಂತಾಪಾಗ್ನಿಯು ಯಾವದೊಂದುರೂಪದಿಂದ ಕೃಷ್ಣರಾಯರ ಸಂರಕ್ಷಕ ದುರ್ಗಗಳನ್ನು ಭೇದಿಸಿ, ಅವರನ್ನು ನಾಶಗೊಳಿಸದಿರಲಾರದೆಂಬ ಕಲ್ಪನೆಯು ನಗರದೊಳಗಿನ ಧೂರ್ತರಲ್ಲಿ ಹುಟ್ಟಿದೆ ಇರಲಿಲ್ಲ.

ಕೃಷ್ಣರಾಯರು ಕೆಲವು ವೇಳೆ ಯೋಚಿಸಿ, ತಮ್ಮ ಮನೋಗತವನ್ನು ರಮಾದೇವಿಗೆ ಗುಪ್ತವಾಗಿ ತಿಳಿಸಬೇಕೆಂದು ಒಂದು ಅದ್ವಿತೀಯ ಶೋಧವನ್ನು ತೆಗೆದರು. ಆ ಶೋಧದಿಂದ ಅಲ್ಲಿಯ ಉಪಶಿಕ್ಷಕಿಗೆ ಯಾವ ವಿಧದ ಸಂ-ದೇಹವೂ ಹುಟ್ಟಲಾರದೆಂದು ಅವರು ನಂಬಿದರು. ಕೂಡಲೆ ಅವರು–'ರಮಾದೇವಿ, ಒಂದು ಹಲಗೆಯನ್ನೂ, ಒಂದು ಶಿಲಾಲೇಖುಸಿಯನ್ನೂ ತನ್ನಿರಿ.'

ಯಾವದೊಂದು ಲೆಕ್ಕ ಮಾಡಲಿಕ್ಕೆ ಬೇಕಾಗಿರಬಹುದೆಂದು ರಮಾ

ದೇವಿಯು ತಿಳಿದಳು. ಅವಳು ಕಪಾಟು ತೆಗೆದು, ಹಲಗೆ-ಶಿಲಾಲೇಖನಿಗಳನ್ನು ತಂದು ಮೇಜಿನ ಮೇಲಿಟ್ಟಳು. ಇನಸ್ಪೆಕ್ಟರರು ಅವಳ ಮುಖವನ್ನು ಕಣ್ಣುತುಂಬಾ ನೋಡಿ, ಹಲಗೆಯ ಮೇಲೆ ಏನನ್ನೋ ಬರೆಯಲುಪಕ್ರಮಿಸಿದರು. ಎರಡೇ ಸಾಲಿನಲ್ಲಿ ಅವರ ಬರೆಹವು ಮುಗಿಯಿತು. ಅನಂತರನಲ್ಲಿ ಅವರು ಹಲಗೆಯನ್ನು ರಮಾದೇವಿಯು ಎದುರಿಗೆ ಹಿಡಿದು—'ಈ ಎರಡು ಮಾತುಗಳಲ್ಲಿ ಯಾವದನ್ನು ಆರಿಸಿಕೊಳ್ಳುವಿರಿ? ಮೇಲಿನಂತೆ ನಡೆಯುವಿರೊ, ಕೆಳಗಿನಂತೆ ನಡೆಯುವಿರೊ? 'ಮೇಲಿನಂತೆ' ಅಥವಾ 'ಕೆಳಗಿನಂತೆ' ಇಷ್ಟೇ ಉತ್ತರ ಕೊಡಿರಿ. ಚನ್ನಾಗಿ ವಿಚಾರಮಾಡಿ ಉತ್ತರ ಕೊಡಿರಿ. ನಿಮ್ಮ ಸುಖ-ದುಃಖದ ಪ್ರಶ್ನೆಯಿರುವದರಿಂದ, ನಾನು ಹೆಚ್ಚಿಗೆ ಹೇಳಲಾರೆನು.'

ಹಲಗೆಯ ಮೇಲಿನ ಬರೆಹವನ್ನೋದಿದ ಕೂಡಲೆ ರಮಾದೇವಿಯ ಸಂತಾಪವು ಮಸ್ತಕಕ್ಕೇರಿತು. ಅಲ್ಲಿ ಇನ್ನೊಬ್ಬ ಶಿಕ್ಷಕಿ ಇದ್ದುದರಿಂದ, ಅವಳು ಬಾಯಿ ಬಿಡಲಿಕ್ಕೆ ಮನಸ್ಸು ಮಾಡಲಿಲ್ಲ. ಇಲ್ಲದಿದ್ದರೆ ಇನಸ್ಪೆಕ್ಟರರ ಪಾತಕೀ ವಿಚಾರದ ಬಗ್ಗೆ ಚನ್ನಾಗಿ ಸಮಾಚಾರ ತಕ್ಕೊಳ್ಳುತ್ತಿದ್ದಳು. ಆ ಹಲಗೆಯಲ್ಲಿ ಕೆಳಗಿನ ಸಂಗತಿಯಿತ್ತು:—

'ಗುಪ್ತ ಪ್ರಣಯದಾನ ಮಾಡವಿರೋ?

ನೌಕರಿಯನ್ನು ತ್ಯಜಿಸುವಿರೊ?'

ಸಾಧ್ವೀಜನರಿಗೆ ಪ್ರಾಣಕ್ಕಿಂತ ಮಿಗಿಲಾದ ಸತೀಧರ್ಮದ ಹೋಮ ಮಾಡುವದರಿಂದ ದೊರೆಯುವ ತ್ರೈಲೋಕ್ಯದ ರಾಜ್ಞೀಪದವನ್ನು ಸಹ ಧಿಃಕರಿಸುವಂತಹ ಆದರ್ಶ-ಆರ್ಯಲಲನೆಯರ ಮಾಲಿಕೆಯೊಳಗಿನವಳಾದ ಆ ರಮಾದೇವಿಯು ಯಃಕಶ್ಚಿತ ನೌಕರಿಯ ಲಾಲಸೆಗೆ ಹೇಗೆ ಒಳಗಾಗುವಳು?

ಆವಳು ಸಾಹೇಬರನ್ನು ಕುರಿತು ಕರ್ಕಶ ವಾಣಿಯಿಂದ—'ಕೆಳಗಿನಂತೆ!' ಎಂದು ಅವರ ಬರೆಹಕ್ಕೆ ಉತ್ತರವಿತ್ತು, ಕ್ಷಣಮಾತ್ರವಾದರೂ ವಿಲಂಬಮಾಡದೆ ಶಾಲೆಯಿಂದ ಹೊರಬಿದ್ದಳು. 'ನಿಲ್ಲಿರಿ, ನಿಲ್ಲಿರಿ!' ಎಂದು ಸಾಹೇಬರು ಕೂಗಿದರೂ, ಅವರ ಮಾತನ್ನು ಲಕ್ಷಿಸದೆ, ಅವಳು ಧೃತಪದದಿಂದ ಮನೆಯನ್ನು ಸೇರಿದಳು.



## ರಾಧಾ-ಕೃಷ್ಣ ಆ್ಯಂಡ ಕೋ.

ವಿಜಯನಗರದ ಶಿಕ್ಷಕ-ಶಿಕ್ಷಕರಲ್ಲಿ ಮೂರು ಭಾಗಗಳು ಒಡೆದು ಕಾಣ ತೊಡಗಿದ್ದವು. ಮೊದಲನೇ ಭಾಗವು ವಿದ್ಯಾಧಿಕಾರಿಗಳ ಪೂರ್ಣ ಕೃಪೆಗೆ ಪಾತ್ರವಾದದ್ದಾಗಿತ್ತು. ಎರಡನೇ ವರ್ಗವು ಅವರ ದಯೆ-ನಿರ್ದಯತೆಗಳೆರಡಕ್ಕೂ ಈಡಾಗದಂತಹ ಒಂದು ಅವಸ್ಥೆಯಲ್ಲಿತ್ತು. ಮೂರನೆಯ ವರ್ಗವು ಅವರ ರೋಷಕ್ಕೆ ಪಾತ್ರವಾದದ್ದಾಗಿತ್ತು. ಮೊದಲನೆಯ ವರ್ಗದ ಶಿಕ್ಷಕ-ಶಿಕ್ಷಕಿಯರಿಗೆ ಪೂರ್ಣ ಸ್ವಾತಂತ್ರ್ಯವಿತ್ತು. ಆ ವರ್ಗದೊಳಗಿನ ಕೆಲವು ಜನರು ಶಾಲಾಧಿಕಾರಿಗಳ ಎಡಗೈ-ಬಲಗೈಗಳಂತಿದ್ದರು; ಇವರು ತಮ್ಮ ಅಧಿಕಾರಿಗಳ ರಾಕ್ಷಸೀ ಲಾಲಸೆಯನ್ನು ಈಡೇರಿಸುವದಕ್ಕಾಗಿ ಬೇಕಾದಂತಹ ಅಲ್ಲದ ಕೆಲಸ ಮಾಡುತ್ತಿದ್ದರು ಈ ಮಂಡಳಕ್ಕೆ ವಿಜಯನಗರದೊಳಗಿನ ಕೆಲವು ವಿನೋದಗಾರರು 'ರಾಧಾ-ಕೃಷ್ಣ ಆ್ಯಂಡ ಕೋ'ಎಂಬ ಹೆಸರಿಟ್ಟಿದ್ದರು.

ರಾಧಾ-ಕೃಷ್ಣ ಆ್ಯಂಡ ಕೋದೊಳಗಿನ ರಾಧೆಯೇ ಈಗ ಅಡವೀರಾಯನೆಂದು ಕರೆಯಿಸಿಕೊಳ್ಳುತ್ತಿದ್ದ ರತ್ನಪುರದ ಅಡವಿಯ ಪತ್ನಿಯು. ಅವಳನ್ನು 'ಸ್ಕೂಲ ಮಿಸ್ಟ್ರೆಸ್' ಎಂದು ಬಹು ಜನರು ಸಂಬೋಧಿಸುತ್ತಿದ್ದರು. ರಾಧಾ-ಕೃಷ್ಣ ಆ್ಯಂಡ ಕೋದೊಳಗೆ ಇವಳೇ ಪ್ರಮುಖಳು. ಕೃಷ್ಣರಾಯ ರಾವಸಾಹೇಬರ ಬಗಲೊಳಗಿನ ಕೂಸಾದ ಇವಳು ಶಿಕ್ಷಕಿಯರಲ್ಲಿಯ ಸುಂದರ-ಸುಂದರ ಯುವತಿಯರನ್ನು ಉಪಾಯದಿಂದ ಒಲಿಸಿಕೊಂಡು, ಅವರ ಪಾವಿತ್ರ್ಯ-ಪಾತಿವ್ರತ್ಯಗಳ ನೀರನ್ನು ರಾವಸಾಹೇಬರ ಕೈಯಲ್ಲಿ ಬಿಡಿಸುತ್ತಿದ್ದಳು. ಯಾರಾದರೂ ಸಾಧ್ವೀತ್ವದ ಆಡಂಬರದಿಂದ ಅವಳಿಗನುಕೂಲೆಯರಾಗದಿದ್ದರೆ; ಅಂತಹರು ಸ್ವಂತದ ನೌಕರಿಗೆ ನೀರು ಬಿಡಬೇಕಾಗುತ್ತಿತ್ತು.

ರಾಧಾದೇವಿಯ ತರುವಾಯ ಆ ಸಂಘದೊಳಗಿನ ಪ್ರಮುಖನೆಂದರೆ, ಆನಂದರಾಯನು. ಇವನಿಗೆ ಕಂಕಣಬಹಾದ್ದರನೆಂಬ ಅನ್ವರ್ಥಕ ನಾಮವು ರೂಢವಾಗಿತ್ತು. 'ಸ್ಕೂಲ ಮಿಸ್ಟ್ರೆಸ್' ಎಂದ ಕೂಡಲೆ ಜನರು ಹೇಗೆ ರಾಧಾದೇವಿಯ ಕಡೆಗೆ ಬೆರಳು ಮಾಡುತ್ತಿದ್ದರೋ, ಅದರಂತೆಯೆ ಕಂಕಣಬಹಾದ್ದರನೆಂದ ಕೂಡಲೆ ಎಲ್ಲರೂ ಆನಂದರಾಯನ ಕಡೆಗೆ ಬೆರಳು ಮಾಡುತ್ತಿದ್ದರು. ಸಾಹೇಬರ ಸ್ವಂತ ಕೃಪಾಛತ್ರದಲ್ಲಿ ಸೇರ್ಪಡೆಯಾಗಿ, ಸುಖಾನಂದಗಳನ್ನು ಅನುಭವಿಸಬೇಕೆಂಬ ಇಚ್ಛೆಯಿಂದ ಕಂಕಣಬಹಾದ್ದರ ಆನಂದರಾಯನು ತನ್ನ ಸಾಧ್ವೀ-ಪತ್ನಿಯನ್ನು ಬಲುಮೆಯಿಂದ ವರಿಷ್ಠರ ಪ್ರೇಮಪಾಶದಲ್ಲಿ ತೊಡಗಿಸಿ ಕೃತಕೃತ್ಯನಾಗಿದ್ದನು!

ಸಂಘದೊಳಗಿನ ಮತ್ತೊಂದು ಪಾತ್ರವೆಂದರೆ ಗೋವಿಂದರಾಯನು. ಇವನ ಹೆಂಡತಿಯು ಅಕಾಲ ಮರಣ ಹೊಂದಿದ್ದರಿಂದ, ಕಂಕಣಬಹಾದ್ದರನೆಂಬ ಸನ್ಮಾನಿತ ಪದವಿಯನ್ನು ಹೊಂದುವ ಸಂಧಿಯು ಇವನಿಗೆ ಪೂರಾ ತಪ್ಪಿತ್ತು; ಆದರೂ ಅವನು ಅನ್ಯ ಯುವತಿಯರ ಕಂಕಣಗಳ ಸುಂದರ ನಿನಾದವನ್ನು ಸಾಹೇಬರ ಕಿವಿಗೆ ಬೀಳುವಂತೆ ಮಾಡಿ, ಅವರನ್ನು ಪ್ರಸನ್ನೀಕರಿಸುತ್ತಿದ್ದನು. ಆದ್ದರಿಂದ ಇವನು ಆನಂದರಾಯನ ಕೆಳಗಿನ ನಂಬರನ್ನು ಸಂಪಾದಿಸಿದ್ದನು. ಇವನು ಕೆಲವು ಸಕೇಶಾ-ವಿಕೇಶಾ ವಿಧವೆಯರಲ್ಲಿ ಅನುಕಂಪೆಯುಳ್ಳವನೂ, ಅವರ ಸ್ನೇಹಪಾತ್ರನೂ ಆಗಿದ್ದುದರಿಂದ, ಇವನಿಗೆ 'ಗರುಡವಾಹನಗೋವಿಂದ' ರಾಯನೆನ್ನುತ್ತಿದ್ದರು.

ರಾಧಾ-ಕೃಷ್ಣ ಮತ್ತು ಸಂಘದೊಳಗಿನ ಬೇರೊಂದು ಪಾತ್ರವೆಂದರೆ, ವನಿತೆಯು. ಇವಳು ಸೌಭಾಗ್ಯವತಿಯು. ಇವಳು ಗಂಡನ ಭಾಗ್ಯದಿಂದ ಭಾಗ್ಯವತಿಯಾಗಿರದೆ, ಸ್ವಂತ ಕರ್ತವ್ಯ ಪ್ರಭಾವದಿಂದ ಭಾಗ್ಯವತಿ ಸೌಭಾಗ್ಯ ವತಿಯೆನಿಸಿಕೊಳ್ಳತೊಡಗಿದ್ದಳು. ಗಂಡನ ಭಾಗ್ಯವು ಕರ್‍ರಗಿರುವದೋ-ಬೆಳ್ಳ ಗಿರುವದೋ ಎಂಬುದನ್ನು ಸಹ ಇವಳು ಕಂಡವಳಲ್ಲ. ತೀರ ಕಂಡಿರಲಿಲ್ಲ ವೆನ್ನಲಿಕ್ಕೆ ಬರುವಂತೆ ಮಾತ್ರ ಇದ್ದಿಲ್ಲ; ಯಾಕಂದರೆ ಗಂಡನ ಸೌಭಾಗ್ಯ ಚಿಹ್ನಗಳಾದ ಮಾಂಗಲ್ಯವು ಪತಿದತ್ತವಾದದ್ದು. ರಾಜಯಕ್ಷ್ಮಾರೋಗಯುಕ್ತ ವಾದ ಪ್ರಕೃತಿಗಳಲ್ಲಿ ಕ್ಷೀಣದೆಸೆಯನ್ನು ಹೊಂದಿದ್ದ ಕುಂಕುಮ ಚಿಹ್ನವು ಗಂಡನ ಅಸ್ತಿತ್ವವನ್ನು ಮಸಮಸಕಾಗಿಯಾದರೂ ಸೂಚಿಸುತ್ತಲಿತ್ತು. ವನಿ ತೆಯ ಪತಿಯು ಅಶಕ್ತನೂ, ವಯಾತೀತನೂ, ಕುರೂಪಿಯೂ, ಅಶಿಕ್ಷಿತನೂ ಆಗಿದ್ದನು. ವನಿತೆಯು ಸುಶಿಕ್ಷಿತಳು. ಅಶಿಕ್ಷಿತ ವಯಾತೀತನಾದ ಅಂದ ಗೇಡಿ ಪತಿಯೊಡನೆ ಬಾಳ್ವೆಮಾಡಿಕೊಂಡಿರಲಿಕ್ಕೆ ಆಕೆಯು ಹೇಸಿ, ತನ್ನಂತ ಹಳ ಪ್ರವೇಶಕ್ಕೆ ಸುಗಮವಾಗಿದ್ದ ಶಿಕ್ಷಣಸಂಸ್ಥೆಯಲ್ಲಿ ಸೇರ್ಪಡೆಯಾದಳು. ಅವಳು ಸ್ವಂತ ಕರ್ತವ್ಯಪ್ರಭಾವದಿಂದ ಸ್ವಲ್ಪ ದಿನಗಳಲ್ಲಿಯೇ ರಾಧಾ-ಕೃಷ್ಣ ಆ್ಯಂಡ ಕೋದಲ್ಲಿ ಪ್ರವೇಶಿಸಿದಳು. ತಾನು ಸೌಭಾಗ್ಯವತಿಯಿರುವೆನೆಂಬದನ್ನು ಇವಳು ಸ್ವಪ್ನದಲ್ಲಿ ಸಹ ತಿಳಿಯುತ್ತಿದ್ದಿಲ್ಲವಾದರೂ, 'ಸೌಭಾಗ್ಯವತಿ' ಎಂದು ಯಾರಾದರೂ ನುಡಿದರೆ, ರಾಧಾ-ಕೃಷ್ಣ ಆ್ಯಂಡ ಕೋದೊಳಗಿನ ವನಿತೆ ಯೆಂದೇ ಎಲ್ಲರೂ ಭಾವಿಸುತ್ತಿದ್ದರು. ಜನರು ಹಿಂದೆ ಮುಂದೆ ಅವಳನ್ನು ಸೌಭಾಗ್ಯವತಿಯೆಂದೇ ಸಂಬೋಧಿಸತೊಡಗಿದ್ದರು. ಸವಿಮಾತುಗಳಿಂದ ಗಂಡನ ನೆರವು ಹೊಂದಿ, ನೌಕರಿಯನ್ನೂ ಪ್ರೇಮದಿಂದ ಶಿಕ್ಷಣವನ್ನೂ ದೊರ ಕಿಸಿ ಅನಂತರದಲ್ಲಿ ಆವನಿಗೆ ಪಾದತಾಡನ ಮಾಡಿ ಹೊರಗೆ ಹಾಕಿದ ಮಹಾ

ಪರಾಕ್ರಮಿಯಾದ ಆದರ್ಶ ಆರ್ಯಾಂಗನೆಯೇ ಇವಳಾಗಿದ್ದಳು!! ಈ ಅಖಂಡ ಸೌಭಾಗ್ಯವತಿ ವನಿತೆಯು ರಾಧಾದೇವಿಯ ಬಲಗೈಯಾಗಿದ್ದಳು. ಕೃಷ್ಣರಾಯರ ಕಾಮದೇವನ ಕಾರಭಾರದಲ್ಲಿ ರಾಧಾದೇವಿಯಂತೆ ವನಿತೆಯೂ ಕಾಯಾ-ವಾಚಾ-ಮನಸ್ಸಿನಿಂದ ಭಾಗವಹಿಸಿದ್ದಳು; ಆದರೆ ಇವಳು ಅವಳಷ್ಟು ಪ್ರತಾಪಿಯಾಗಿಂಲಿಲ್ಲ.

ಚಂಪಾವತಿಯೆಂಬ ಬಾಲವಿಧವೆಯು ಆ ಸಂಘದೊಳಗಿನವಳೇ. ಇವಳು ಸಕೇಶಾ ವಿಧವೆಯು. ಸಿರಾಧಾರಿಯಾಗಿದ್ದ ಇವಳು ಹೊಟ್ಟೆಯ ಪಾಡಿಗಾಗಿ ಶಿಕ್ಷಣ ವ್ಯವಸಾಯವನ್ನು ಕೈಕೊಂಡಿದ್ದಳು. ಇವಳು ಮೊದಲು ನೀತಿವಂತ ೞ ಸುಶೀಲಳೂ ಇದ್ದಳು. ಆನಂದ-ಗೋವಿಂದ-ರಾಧಾವನಿತೆಯರಂತಹ ಕಟ್ಟಾ ಕಾರ್ಯನಿಷ್ಠರ ಕರ್ತವ್ಯಪ್ರಭಾವದಿಂದ ಅವಳು ತನ್ನ ಶೀಲ-ನೀತಿಗಳನ್ನು ವಿಜಯನಗರದ ವ್ಯಾಪಾರಪೇಟೆಯಲ್ಲಿ ಕಾಶಿಗೆ ಸಂಭೇರಾಗಿ ಮಾರಿಕೊಂಡವಳಾಗಿದ್ದಳು.

ರಾಧಾ ಕೃಷ್ಣ ಆ್ಯಂಡ ಕೋದಲ್ಲಿ ವರ್ಣಿಸಲ್ಪಡುತ್ತಿದ್ದ ಜನರು ಸ್ವಾತಂತ್ರ್ಯಗಿರಿಯ ಅತ್ಯುಚ್ಚ ಶಿಖರವನ್ನೇರಿದ್ದರು. ಇವರಿಗೆ ಧರ್ಮ-ನೀತಿಗಳ ಬಂಧನೆಯಂತೂ ಇದ್ದೇ ಇಲ್ಲ. ಇಷ್ಟಲ್ಲದೆ, ತಮ್ಮ ಕರ್ತವ್ಯದಲ್ಲಿಯೂ ಇವರಿಗೆ ಯಾವ ವಿಧದ ಕಟ್ಟು-ಕಾನೂನುಗಳು ಬಂಧನಕಾರಕಗಳಾಗಿದ್ದಿಲ್ಲ. ಕೃಷ್ಣರಾಯರಂತೂ ವಿದ್ಯಾಸಂಸ್ಥೆಯ ಸರ್ವತಂತ್ರ-ಸ್ವತಂತ್ರರಾದ ವಿಧಾತರು. ರಾಧಾದೇವಿಯು ಅವರ ಮುಖ್ಯಸೂತ್ರಧಾರಕಳು. ಸಂಘದೊಳಗಿನ ಜನರೆಲ್ಲರೂ ಅಧಿಕಾರಿಗಳ ಪೂರ್ಣ ಕೃಪಾಛತ್ರದೊಳಗಿನವರು. ಸಂಘದೊಳಗಿನ ಶಿಕ್ಷಕ-ಶಿಕ್ಷಕಿಯರು ತಮ್ಮ ಕರ್ತವ್ಯವನ್ನು ಮಾಡುತ್ತಿದ್ದರೇನೇ ವೇತನವು ದೊರೆಯುವದೆಂಬಂತಿರಲಿಲ್ಲ. ಅವರವರ ಯೋಗ್ಯತೆಗನುಸಾರವಾಗಿ ಅವರವರಿಗೆ ಸ್ವಾತಂತ್ರ್ಯವು ದೊರಕಿತ್ತು. ರಾಧಾದೇವಿಯಂತಹರು ತಿಂಗಳಗಟ್ಲೆ ಶಾಲೆಗೆ ದರ್ಶನವನ್ನು ಕೊಡದಿದ್ದರೂ ಸಾಗುತ್ತಿತ್ತು. ಚಂಪಾವತಿ-ವನಿತೆ-ಆನಂದ ಗೋವಿಂದರು ಎರಡೆರಡು ದಿನಕ್ಕೊಮ್ಮೆಯಾದರೂ ಹಾಜರಿಗೆ ಸಹಿ ಕೊಟ್ಟು, ತಮ್ಮ ವೇತನವು ಸರಳವಾಗಿ ಬರಲಿಕ್ಕೆ ದಾರೀ ಮಾಡಿಕೊಳ್ಳುತ್ತಿದ್ದರು. ಸಂಘದೊಳಗಿನ ಶಿಕ್ಷಕರೂ, ಶಿಕ್ಷಕಿಯರೂ ಶಾಲೆಯ ವೇಳೆಯಲ್ಲಿ ಬೇಕಾದತ್ತ ತಿರುಗುತ್ತಲಿದ್ದರೂ ಬಾಧೆಯಿದ್ದಿಲ್ಲ. ವಿದ್ಯಾಸಂಸ್ಥೆಯ ವಿಧಾತನು ಈ ಸಂಘದ ಅನುಮತಿಯಂತೆ ಶಿಕ್ಷಣ ಸಂಸ್ಥೆಯೊಳಗಿನ ಶಿಕ್ಷಕ-ಶಿಕ್ಷಕಿಯರ ಹಣೇಬರೆಹ ಬರೆಯುತ್ತಿದ್ದನು. ರಾಧಾ-ಕೃಷ್ಣ ಆ್ಯಂಡ ಕೋ ಚಂಡಾಲ ಚೌಕಳಿಯ ಉಪಸಭೆಗಳು ವಾರದಲ್ಲಿ ಎರಡು-ಮೂರು ಸಾರೆಯಾದರೂ ಕೂಡುತ್ತಿದ್ದವು;

ಆದರೆ ಮುಖ್ಯ ಸಾಧಾರಣ ಸಭೆಯು ತಿಂಗಳಲ್ಲೊಮ್ಮೆ ತಪ್ಪದೆ ನೆರವೇರಿಸಲ್ಪಡುತ್ತಿತ್ತು.

ಅಂದು ಸಂಘದ ಸಾಧಾರಣ ಸಭೆಯಿದ್ದಿತು. ಮಧ್ಯಾಹ್ನದ ಮೂರು ಗಂಟೆಗೆ ರಾಧಾದೇವಿಯ ವಿಲಾಸಮಂದಿರದಲ್ಲಿ ಆ ಸಭೆಯು ಕೂಡಬೇಕೆಂದು ಮುಂಚಿನ ದಿನವೇ ನಿರ್ಧರಿಸಲ್ಪಟ್ಟಿತ್ತು. ನಿಯಮಿತ ವೇಳೆಗೆ, ನಿಯಮಿತ ಸ್ಥಳಕ್ಕೆ ಎಲ್ಲ ಸಭಾಸದರೂ ಆಗಮಿಸಿದರು. ಆಗ ಶಾಲೆಯ ವೇಳೆಯಿದ್ದದರಿಂದ, ರಾಧಾದೇವಿಯ ಮದುವೆಯ ಗಂಡನಾದ ಅಡವೀರಾಯನು ಕೆಲಸಕ್ಕೆ ಹೋಗಿದ್ದನು. ಪತಿಯ ಗೈರಹಾಜರಿಯಲ್ಲಿಯೇ ತನ್ನ ಮನೆಯಲ್ಲಿ ಸಭೆಯ ಕಾರ್ಯ ಮಾಡುತ್ತಿರಬೇಕೆಂದು ಆ ಪಾಪಭೀರುವು ಇನಸ್ಪೆಕ್ಟರರಿಗೆ ವಿನಂತಿ ಮಾಡಿಕೊಂಡಿದ್ದಳು. ಇಂತಹ ಆರ್ಜದಾರರ ವಿನಂತಿಗಳು ಮೆಹೆರ್ಬಾನಿಗೆಯಿಂದ ಮನ್ನಿಸಲಲ್ಪಡುತ್ತಿದ್ದವು.

ವಿಲಾಸಮಂದಿರದಲ್ಲಿ ಸಭೆಯು ನೆರೆಯಿತು. ಸುರೇಂದ್ರರಾಯನ ಹೆಂಡತಿಯೂದ ರಮಾದೇವಿಯು ತಮ್ಮ ಆಜ್ಞೆಯನ್ನು ಉಲ್ಲಂಘಿಸಿದ್ದಕ್ಕಾಗಿ ಇನಸ್ಪೆಕ್ಟರರು ಸಂತಪ್ತರಾಗಿದ್ದರು. ತಪ್ಪುಗಾರರನ್ನು ಕೆಲಸದಿಂದ ತಳ್ಳಿದ್ದರೂ ಅವರ ಮನಸ್ಸು ಶಾಂತವಾಗಿದ್ದಿಲ್ಲ ರಮಾದೇವಿಯು ಮಾಡಿದ ತಪ್ಪಿಗೆ ಸುರೇಂದ್ರರಾಯನೂ ಪಾಲುಗಾರನಿರುವದರಿಂದ, ಅವನಿಗೂ ಶಾಸನ ವಿಧಿಸಬೇಕಾಗಿತ್ತು. ಇದೇ ವಿಷಯವಾಗಿ ವಿಚಾರ-ವಿನಿಮಯ ಮಾಡಲಿಕ್ಕೆ ರಾಧಾ-ಕೃಷ್ಣ ಆ್ಯಂಡ ಕೋದ ಸಭಿಕರು ರಾಧಾದೇವಿಯ ವಿಲಾಸಮಂದಿರಕ್ಕೆ ಆಗಮಿಸಿದ್ದರು. ಆಗ ಕೃಷ್ಣರಾಯರು ಸಭಿಕರನ್ನುದ್ದೇಶಿಸಿ— 'ರಮಾದೇವಿಯು ನಮ್ಮ ಆಜ್ಞೆಯನ್ನುಲ್ಲಂಘಿಸಿ ನಮಗೆ ಹೇಳಕೂಡದಷ್ಟು ಅಪಮಾನ ಮಾಡಿರುವಳು. ಅವಳು ತಪ್ಪುಮಾಡಲಿಕ್ಕೆ ಅವಳ ಪತಿಯೇ ಕಾರಣನಾಗಿರುವನು ವರಿಷ್ಠರ ಆಜ್ಞಾನುವರ್ತಿಯಾಗಿರಲಿಕ್ಕೆ ಅವನ ಅಡ್ಡಿಯೂ, ಭಯವೂ ಇರುವವೆಂಬದು ರಮೆಯ ವರ್ತನದಿಂದ ಸ್ಪಷ್ಟವಾಗುತ್ತದೆ. ಅವನ ಈ ಉನ್ಮತ್ತತನಕ್ಕೆ ಇಷ್ಟೊತ್ತಿಗೇ ಶಾಸನವನ್ನು ವಿಧಿಸುತ್ತಿದ್ದೆವು; ಆದರೆ ಸಾಮೋಪಾಯದಿಂದ ಇನ್ನು ಮೇಲಾದರೂ ದಾರಿಗೆ ಬಂದರೆ ಒಳಿತಾಗುವದೆಂದು ತಟಸ್ಥರಾಗಿರುವೆವು. ಸಭಿಕರೊಳಗಿನ ಯಾರಾದರೂ ರಮೆಯ ಅಥವಾ ಸುರೇಂದ್ರನ ಮನ ಮೆಚ್ಚಿಸಿ ದಾರಿಗೆ ತರುವಂತಿದ್ದರೆ ಹೇಳಿರಿ; ಇಲ್ಲವಿದ್ದರೆ ಅವನನ್ನು ಕೆಲಸದಿಂದ ತಳ್ಳಿಬಿಡುವೆವು. ಇಂತಹ ಉನ್ಮತ್ತರೂ, ಅವಿಧೇಯರೂ ಆದ ಜನರನ್ನ ಶಿಕ್ಷಣದಂತಹ ಪವಿತ್ರ ಸಂಸ್ಥೆಯಲ್ಲಿಟ್ಟುಕೊಳ್ಳುವದಕ್ಕೆ ನಾವು ಸಿದ್ಧರಿಲ್ಲ. ಹೇಳಿರಿ, ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನಿರುವದೆಂಬದನ್ನು ಹೇಳಿರಿ.'

ಸುರೇಂದ್ರನು ಸತ್ತರೆ ಸಂಘದೊಳಗಿನ ಯಾವ ಜನರಿಗೂ ಸೂತಕ ಬರುತ್ತಿದ್ದಿಲ್ಲ; ಆದರೂ ಅವನನ್ನು ಕೊಲ್ಲಬಾರದೆಂದೇ ಎಲ್ಲರೂ ವಿಚಾರಾಂತ್ಯದಲ್ಲಿ ನಿರ್ಧರಿಸಿಕೊಂಡರು. ನೌಕರಿಯಿಂದ ತಳ್ಳಲ್ಪಟ್ಟ ಮೇಲೆ ರಮಾದೇವಿಯಾಗಲಿ ಸುರೇಂದ್ರನಾಗಲಿ ತಮ್ಮ ಜಾಲದಲ್ಲಿ ಸಿಗುವದು ಅಸಂಭಾವ್ಯವೆಂದು ಅವರು ತಿಳಿದರು. ಅಸಾಧ್ಯವಾಗಿದ್ದ ಕಾರ್ಯವನ್ನು ಸಾಧ್ಯಗೊಳಿಸಿ, ವರಿಷ್ಠಾನುಗ್ರಹಗಳನ್ನು ಬೆಳಿಸಿಕೊಳ್ಳಬೇಕೆಂದು ಪ್ರತಿಯೊಬ್ಬ ಸಭಾಸದನ ಮಾನಸವಿತ್ತು. ತಮ್ಮ ತಮ್ಮೊಳಗೆ ವಿಚಾರ-ವಿನಿಮಯ ಮಾಡಿಕೊಂಡ ಮೇಲೆ ಸ್ಕೂಲ ಮಿಸ್ಟ್ರೆಸ್ಸ ರಾಧಾದೇವಿಯು ಎದೆಯ ಮೇಲೆ ಕೈಯಿರಿಸಿಕೊಂಡು ಪೌರುಷವಾಣಿಯಿಂದ—'ಮೆಹರ್ಬಾನ, ತಾವು ಈ ವಿಷಯದಲ್ಲಿ ಚಿಂತಿಸಕೂಡದು. ರಮೆಯು ನಿಮ್ಮ ಆಜ್ಞಾಭಂಗಮಾಡಿದ್ದರಿಂದ ನಿಮ್ಮಲ್ಲಿ ಹುಟ್ಟಿಬೆಳೆದ ಸಂತಾಪವನ್ನು ಅವಳ ಪ್ರೇಮಜಲದಿಂದಲೇ ಶಾಂತಗೊಳಿಸುವೆನು. ಸುರೇಂದ್ರನು ನೌಕರಿಯಿಂದ ತಳ್ಳಲ್ಪಟ್ಟರೆ, ಈ ಕಾರ್ಯವಾಗುವದು ಅಸಾಧ್ಯವು. ನೀವು ಅವನಿಗೆ ಬೇಕಾದಷ್ಟು ತೊಂದರೆಗಳನ್ನು ಕೊಡಿರಿ; ಆದರೆ ನೌಕರಿಯಿಂದ ಮಾತ್ರ ತಳ್ಳಬೇಡಿರಿ.'

ಅನಂತರದಲ್ಲಿ ಕಂಕಣಬಹಾದ್ದರ ಆನಂದರಾಯನು ವೀರಾವೇಶದಿಂದ:- ರಾವಸಾಹೇಬ, ಎಂಥ ಎಂಥವರನ್ನೇ ಮಣ್ಣುಮುಕ್ಕಿಸಿದ ಈ ಭಟನಿಗೆ ರಮೆಯ ಪಾಡೇನು? ರಾಧಾದೇವಿ-ಸ್ಕೂಲ ಮಿಸ್ಟ್ರೆಸ್ಸರಿಂದ ಈ ಕಾರ್ಯವಾಗದಿದ್ದರೆ, ನಾನು ನೆರವೇರಿಸುವೆನೆಂದು ಪ್ರತಿಜ್ಞಾಪೂರ್ವಕವಾಗಿ ಹೇಳುವೆನು.'

ಅನಂತರದಲ್ಲಿ ಸೌಭಾಗ್ಯವತಿ ವನಿತೆಯು ಅಂಗವಿಕ್ಷೇಪ ಮಾಡುತ್ತ—'ಖಾವಿಂದ, ನಾನು ಚಿಕ್ಕವಳಾದರೂ ನನ್ನ ಸಾಹಸ ಚಿಕ್ಕದಲ್ಲ. ನಾನು ಸ್ಕೂಲ ಮಿಸ್ಟ್ರೆಸ್ಸರಿಗೆ ಈ ಕಾರ್ಯದಲ್ಲಿ ಚನ್ನಾಗಿ ನೆರವಾಗುವೆನು.'

ತರುವಾಯ ಸಕೇಶಾ ಚಂಪಾವತಿಯು ಶಿಥಿಲ ಬಂಧನದಿಂದ ಹುಬ್ಬಿನವರೆಗೆ ಬಂದ ಕೇಶಗಳನ್ನು ಸರಿಪಡಿಸಿಕೊಳ್ಳುತ್ತ-'ಸಾಹೇಬರೆ, ನನ್ನ ಸ್ವಭಾವ ಪರಿಚಯವು ನಿಮಗೆ ಚನ್ನಾಗಿರುವದು. ಮೊದಲು ನನ್ನ ವ್ರತವು ಎಂತಹ ಕಟ್ಟುನಿಟ್ಟನದಿತ್ತೆಂಬ ಬಗ್ಗೆ ನಾನು ಹೇಳಬೇಕಾಗಿಲ್ಲ. ಯಾಕಂದರೆ, ನನ್ನ ಪ್ರಥಮ ಸ್ನೇಹವನ್ನು ಸಂಪಾದಿಸುವಾಗ ನೀವೂ, ನಿಮ್ಮ ಹಸ್ತಕರಾದ ಆನಂದರಾಯರೂ, ಗೋವಿಂದರಾಯರೂ ಮಾಡಿದ ಸಾಹಸಗಳಿಂದಲೇ ನನ್ನ ಸ್ವಭಾವವು ನಿಮಗೆ ಪರಿಚಯದ್ದಾಗಿರುವದು. ಕೆಟ್ಟ ಹೊಟ್ಟೆಗಾಗಿ ಕೆಟ್ಟು ಹೋದ ನಾನು, ಈಗ ಹೇಗೆ ನಡೆದರೂ ನೆಟ್ಟಗಾಗುವಂತಿಲ್ಲ. ಸ್ಕೂಲ ಮಿಸ್ಟ್ರೆಸ್ಸ ರಾಧಾದೇವಿಯವರು ಆಗ ಎಲ್ಲಿದ್ದರೋ-ಏನೋ! ಒಂದು ಸಮಯದಲ್ಲಿ ಅವರ

ಮಾನವು ನನಗಿತ್ತು; ಮತ್ತೆ ವಿಲಾಸವತಿ-ಸೌಭಾಗ್ಯವತಿ ಮೊದಲಾದ ನವ ಯೌವನದ ಚಲುವೆಯರು ಬಂದು ನನ್ನನ್ನು ಕಸಬರಿಗೆ ಮಾಡಿದ್ದಕ್ಕಾಗಿ ನಾನು ದುಃಖಿಸುವದಿಲ್ಲ. ಎಷ್ಟಾದರೂ ಸುಖವುಂಡಿರುವೆನು. ಉಂಡ ಉಪ್ಪಿಗಾಗಿ ಎಷ್ಟಾದರೂ ಸಾಹಸ ಮಾಡಬೇಕೆಂಬ ಸ್ಫೂರ್ತಿಯು ಹುಟ್ಟಿದೆ. ಗರುಡವಾಹನ ಗೋವಿಂದರಾಯರು ಸ್ವಲ್ಪ ಎತ್ತಿ ಹಿಡಿದರೆ, ನಾನೂ ಹೆಣಗಾಡಬೇಕೆಂದು ಮಾಡಿರುವೆನು.'

'ಯಾಕೆ ಗೋವಿಂದರಾಯರೇ?' ಇನಸ್ಪೆಕ್ಟರ ಸಾಹೇಬರು ದರ್ಪದಿಂದ—'ಎಲ್ಲರೂ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೂ ನೀವು ಸುಮ್ಮನೆ ಕುಳಿತಿರುವಿರಿ. ಯಾಕೆ? ನೀವು ಈ ಕಾರ್ಯದಲ್ಲಿ ಭಾಗತೆಗೆದುಕೊಳ್ಳಲಿಚ್ಛಿಸುವದಿಲ್ಲವೇನು? ನಮ್ಮಿಂದ ಹೊಂದುತ್ತಲಿದ್ದ ಲಾಭದ ಕಡೆಗೆ ನೋಡಿ ವರ್ತನವನ್ನಿಡಿರಿ. ನೀವು ನಮಗೆ ಸಹಾಯಕರಾಗದಿದ್ದರೆ, ಸಂಘದಿಂದ ತಳ್ಳಲ್ಪಡುವಿರಿ.'

'ಛೇ! ಹೀಗೇನು ಮಾತಾಡುವಿರಿ ರಾವಸಾಹೇಬರೆ? ನನ್ನಿಂದ ಅನುಚಿತವೆಂದಿಗೆ ಘಟಿಸೀತು? ನಾನೂ ಚಂಪಾವತಿದೇವಿಯವರೂ ತುಂಬಾ ಸಾಹಸ ಮಾಡಿ ನಿಮ್ಮ ಇಚ್ಛೆಯನ್ನು ಪೂರೈಸುವೆವು.'

ಸೌಭಾಗ್ಯವತಿಯು ಗೋವಿಂದರಾಯನ ಹೆಸರಿನ ಹಿಂದೆ 'ಗರುಡವಾಹನ' ಪದವಿಯಿರುವದೆಂಬದನ್ನು ಇದುವರೆಗೆ ಕೇಳಿದ್ದಿಲ್ಲ; ಯಾಕಂದರೆ ಅವಳು ಸಂಘದಲ್ಲಿ ಪ್ರವೇಶವಾಗಿ ಬಹಳ ದಿನಗಳಾಗಿದ್ದಿಲ್ಲ; ಹಾಗು ಅಷ್ಟು ದೂರದ ವರೆಗೆ ಪ್ರವೇಶಿಸಲಿಕ್ಕೆ ಅವಳಲ್ಲಿ ಸಾಮರ್ಥ್ಯವೂ ಇದ್ದಿಲ್ಲ. ಯಾಕಂದರೆ, ಅವಳು ಇನ್ನೂ ಎಳಕಳು. ಸಂಸಾರಕ್ಕೆ ಹತ್ತಿ ಅಷ್ಟೇ ಎರಡು-ಮೂರು ವರ್ಷಗಳಾಗಿದ್ದವು. ಗೋವಿಂದರಾಯನ ಉಪನಾಮವನ್ನು ಕೇಳಿ ಅವಳು ಬಳಿಯಲ್ಲಿದ್ದ ರಾಧಾದೇವಿಯನ್ನು ಕುರಿತು—'ನಮ್ಮಂತೆ ಗೋವಿಂದರಾಯರಿಗೂ ಉಪನಾಮವಿರುವದೇನು?' ಎಂದು ಮೆಲ್ಲನೆ ಕೇಳಿದಳು.

'ಅದಕ್ಕೇಕೆ ಇಷ್ಟು ಕಳವೇ ವನಿತಾ? ನಮ್ಮ ಸಂಘದಲ್ಲಿ ರಾವಸಾಹೇಬರಿಂದ ಸಿನ್ನವರೆಗೆ ಎಲ್ಲರಿಗೂ ಉಪನಾಮಗಳುಂಟು ಸಕೇಶಾ-ವಿಕೇಶಾ-ವಿಧವೆಯರಿಗೆ ಆಶ್ರಯಸ್ಥಾನರೂ, ಅವರ ವಿಷಯವಾಗಿ ಕಕ್ಕುಲತೆಯನ್ನು ಹೊಂದುವವರೂ ಆದ ಅವರಿಗೆ 'ಗರುಡವಾಹನ' ಎಂಬ ಉಪನಾಮವು ಪ್ರಾಪ್ತವಾಗಿದೆ. ಊರೊಳಗಿನ ಕೆಲವು ಕುಚೋದ್ಯಗಾರರು ಹೀಗೆ ಹೆಸರಿಟ್ಟಿದ್ದರೂ, ಅದು ಚನ್ನಾಗಿ ಪ್ರಚಾರದಲ್ಲಿ ಬರತೊಡಗಿದೆ. ಗೋವಿಂದರಾಯರು ಈ ಪದವೀಲಾಭದಿಂದ ಸಂಭ್ರಮಗೊಂಡಿರುವರು. ಯಾರಾದರೂ 'ಗರುಡ

ವಾಹನ ಗೋವಿಂದರಾಯ' ಎಂದು ಸಂಬೋಧಿಸಿದರೆ, ಅವರ ಮುಖವು ಅರಳುತ್ತದೆ. ಚಂಪಾವತಿ ದೇವಿಯವರು ಅವರ ಪರಮ ಸ್ನೇಹಿತೆಯವರಿರುವದರಿಂದ, ಅವರು ಪ್ರೇಮಪೂರ್ವಕವಾಗಿ ಈ ಪದವಿಯನ್ನು ಉಪಯೋಗಿಸಿ ಸಂಬೋಧಿಸುತ್ತಿರುವರುವರು.'

'ಯಾಕೆ, ಸೌಭಾಗ್ಯವತಿಯವರಿಗೆ ಇದುವರೆಗೆ ಈ ವಿಷಯವು ಅಪರಿಚಿತವಾಗಿತ್ತೇನು?' ಎಂದು ಗರುಡವಾಹನ ಗೋವಿಂದರಾಯರು ನಗುತ್ತ ಕೇಳಿದರು.

'ಇಲ್ಲ; ನಾನು ನಿಮ್ಮ ಸನ್ಮಾನದ ಪದವಿಯನ್ನು ಕೇಳಿದ್ದಿಲ್ಲ,' ಎಂದು ಸೌಭಾಗ್ಯವತಿಯು ನಗುತ್ತಲೇ ನುಡಿದಳು.

ತರುವಾಯ ಕೃಷ್ಣರಾಯರು—'ಸಭಿಕರೇ, ನಿಮ್ಮ ಸ್ಫೂರ್ತಿದಾಯಕವಾದ ಭಾಷಣಗಳಿಂದ ನನಗೆ ಆನಂದವಾಯಿತು. ನೀವು ಮಾತಾಡಿದ ಮೇರೆಗೆ ಕಾರ್ಯ ಮಾಡುವಿರೆಂಬ ವಿಶ್ವಾಸದಿಂದ ಸುರೇಂದ್ರನನ್ನು ನೌಕರಿಯಿಂದ ತಳ್ಳುವದಿಲ್ಲ. ಆನಂದರಾಯರೆ, ಅವನು ನಿಮ್ಮ ಶಾಲೆಯಲ್ಲಿಯ ಉಪಶಿಕ್ಷಕನಿರುವದರಿಂದ, ನಿಮಗೆ ಯಶೋಲಾಭವಾಗುವ ಸಂಭವವಿದೆ. ರಾಧಾದೇವಿಯವರು ರಮೆಯನ್ನು ದಾರಿಗೆ ತರಲಿಕ್ಕೆ ಪ್ರಯತ್ನಿಸುವರು. ನೀವು ಸುರೇಂದ್ರನಿಗೆ ಬುದ್ಧಿಗಲಿಸಿರಿ.'

'ಮಹದಾಜ್ಞೆ!' ಎಂದು ಆನಂದರಾಯನು ಸಾಹೇಬರ ಆಜ್ಞೆಯನ್ನು ಶಿರಸಾವಹಿಸಿದನು.

ಅನಂತರದಲ್ಲಿ ದಿವಾಣರ ಶಕುಂತಲೆ ಮೊದಲಾದ ಸಣ್ಣ-ದೊಡ್ಡ ಪ್ರಕರಣಗಳ ವಿಷಯವಾಗಿ ವಿಚಾರಣೆಯಾಯಿತು; ಹಾಗು ಯಾವ ಶಿಕ್ಷಕ-ಶಿಕ್ಷಕಿಯರು ಹೇಗೆ-ಹೇಗಿರುವರು, ಯಾರಿಗೆ ಸೌಕರ್ಯವನ್ನೊದಗಿಸಬೇಕು, ಯಾರಿಗೆ ದಂಡನೆ ವಿಧಿಸಬೇಕು ಮೊದಲಾದ ಮಾತು-ಕತೆಗಳು ನಡೆದವು. ಆ ಮೇಲೆ ಕೃಷ್ಣರಾಯರು—'ಗೋವಿಂದರಾಯರೆ, ನಿಮ್ಮ ಉಪಶಿಕ್ಷಕರಾದ ಅಡವೀರಾಯರು ಈಗ ಸುಧಾರಿಸಿರುವರೆ?'

'ಸಾಹೇಬರೇ, ನಾನು ಅವರನ್ನು ದಾರಿಗೆ ತರುವದಕ್ಕಾಗಿ ಬಹಳೇ ಶ್ರಮಬಟ್ಟೆನು. ಅವರಿಗೆ ಅಕ್ಷರಜ್ಞಾನವು ಚನ್ನಾಗಿ ಆಗಿದೆ. ಶಿಶುವರ್ಗದ ಮಟ್ಟಿಗೆ ಹೇಗಾದರೂ ಶಿಕ್ಷಣ ಕೊಡುವಷ್ಟು ಯೋಗ್ಯತೆಯು ಅವರಲ್ಲಿ ಬಂದಿದೆ. ಈ ತಿಂಗಳಲ್ಲಿ ನಾನು ಶಾಲೆಗೇ ಹೋಗಿಲ್ಲ. ಅವರಿಗೆ ಇನ್ನೂ ಕೆಲವು ದಿನ ಶಿಕ್ಷಣ ಕೊಟ್ಟರೆ, ಒಂದೆರಡು ಇಯತ್ತೆಗಳನ್ನಾದರೂ ಕಲಿಸುವ ಯೋಗ್ಯತೆಯುಂಟಾಗುವದು.'

'ಯೋಗ್ಯತೆ ಬರಲಿ-ಬಾರದಿರಲಿ, ಅದನ್ನು ತೆಗೆದುಕೊಂಡು ಮಾಡುವ ದೇನು? ಅವರು ಕಾನೂನಿನ ಮೇರೆಗೆ ಕೆಲಸ ಮಾಡಿಯೇ ತೀರಬೇಕೆಂದು ಯಾರು ಅನ್ನುತ್ತಾರೆ? ನಮ್ಮ ಪರಮ ಸ್ನೇಹಿತೆಯರಾದ ರಾಧಾದೇವಿಯರಿಗೆ ಅವರು ಮದುವೆಯ ಗಂಡಂದಿರಾದುದರಿಂದ, ಇವರ ಮೋರೆಯನ್ನು ನೋಡಿ ನಾವು ಸುಧಾರಿಸಿಕೊಂಡು ಹೋಗುತ್ತೇವೆ'

'ದೊಡ್ಡವರ ಮನಸ್ಸು ದೊಡ್ಡದೇ ಇರುತ್ತದೆ' ಎಂದು ಗೋವಿಂದ ರಾಯನು ಧನ್ಯೋದ್ಗಾರ ತೆಗೆದನು.

ಅನಂತರದಲ್ಲಿ ರಾಧಾದೇವಿಯು ಆಗತ ಮಂಡಲಿಗೆ ಕಾಫಿ-ಉಪಹಾರ ಗಳನ್ನು ಕೊಟ್ಟಳು. ಆ ಮೇಲೆ ರಾಧಾದೇವಿಯು ತನ್ನ ಕೈ ವೇಳಾಯಂತ್ರದ ಕಡೆಗೆ ನೋಡಿ—'ಓಹೋ! ಐದು ಗಂಟೆಯಾಯಿತು. ಇಷ್ಟರಲ್ಲಿ ಅಡವಿಯು ಶಾಲೆಯಿಂದ ಹೊರಟಿರಬಹುದು.'

ಕೃಷ್ಣರಾಯರು ಎಷ್ಟೇ ಕೆಚ್ಚೆದೆಯವರಿದ್ದರೂ, ರಾಧಾದೇವಿಯ ಪತಿ ಯೆದುರಿಗೆ ತಾಂಡವ ನಡೆಯಿಸಲಿಕ್ಕೆ ಇನ್ನೂ ಅಂಜುತ್ತಿದ್ದರು. ರಾಧಾದೇವಿ ಯಾದರೂ ಜನಕ್ಕೋ-ಮನಕ್ಕೋ-ಪತಿಗೋ ಅಲ್ಪ ಸ್ವಲ್ಪ ಅಂಜುತ್ತಿದ್ದಳು.

ಅಡವೀರಾಯನ ಆಗಮನವಾಗುವದಕ್ಕಿಂತ ಮೊದಲೇ ಸಭೆಯು ವಿಸ ರ್ಜನೆಯಾಗುವದು ವಿಹಿತವೆಂದು ರಾಧಾ-ಕೃಷ್ಣ ಟ್ಯಾಂಡ ಕೋದ ಸಭಿಕರು ಅಲ್ಲಿಂದ ತೆರಳಿದರು. ರಾಧಾದೇವಿಯಾದರೂ ವಿಲಾಸಮಂದಿರಕ್ಕೆ ಬೀಗ ಹಾಕಿ, ಅವರ ಜೊತೆಯಲ್ಲಿಯೇ ಸಾಗಿದಳು. ಸ್ವಲ್ಪ ದೂರ ಹೋದ ಮೇಲೆ ಜನರು ತಮ್ಮ ತಮ್ಮ ಮನೆಗೆ ಹೋಗುವದಕ್ಕಾಗಿ ಒಡೆದರು. ರಾಧಾದೇವಿ ಯು ತನ್ನ ಪಟ್ಟಶಿಷ್ಯಳಾದ ಸೌಭಾಗ್ಯವತಿಯೊಡನೆ ಕೃಷ್ಣರಾಯರ ಹಿಂದೆ ಅವರ ಮಂದಿರಕ್ಕೆ ಹೋದಳು. ಆಗ ಕೃಷ್ಣರಾಯರ ಮೋಟರ ಬಂಡಿಯು ಸಿದ್ಧವಾಗಿ ಮನೆಯ ಮುಂದೆ ನಿಂತುಕೊಂಡಿತ್ತು. ಕೃಷ್ಣರಾಯರು ರಾಧಾ ದೇವಿಯ ಕೈ ಹಿಡಿದುಕೊಂಡು ಮೋಟರನ್ನೇರಿದರು. ಸೌಭಾಗ್ಯವತಿ ವನಿ ತೆಯೂ ಸಾಹೇಬರ ಪಕ್ಕದಲ್ಲಿ ತಾನಾಗಿ ಹೋಗಿ ಕುಳಿತಳು.

ಬಂಡಿಯು ನಗರದ ಬಳಿಯಲ್ಲಿದ್ದ ತುಂಗಭದ್ರಾ ನದಿಯ ಕಡೆಗೆ ರಭಸ ದಿಂದ ಸಾಗಿತು. ಎಡದಲ್ಲಿ ರಾಧೆ, ಬಲದಲ್ಲಿ ವನಿತೆ. ರಾಧಾ-ವನಿತೆಯರ ಮಧ್ಯವರ್ತಿಯಾದ ಕೃಷ್ಣನು ಹೊಸ ಮದುವಣಿಗನಂತೆ ಸಂಭ್ರಮವುಳ್ಳವ ನಾದನು! ಪುರವಾಸಿಗಳು ಹೊಸ ಪದ್ಧತಿಯ ಮದುವೆಯ ಈ ಮೆರವಣಿಗೆ ಯನ್ನು ದಂಗುಬಡೆದು ನೋಡುತ್ತಿರುವಾಗಲೆ, ಮೋಟಾರ ಬಂಡಿಯು ಕಣ್ಣು ಮರೆಯಾಯಿತು.

———

## ಬೈಲಿಗಿದ್ದ ಪ್ರಕರಣ ಫೈಲಿಗೆ.

ಸುರೇಂದ್ರರಾಯನು ಪ್ರವಾಹಪತಿತನಂತಾಗಿದ್ದನು. ತನ್ನ ಪತ್ನಿಯ ಕೆಲಸವು ಹೋಯಿತೆಂದು ಅವನು ಚಿಂತೆ ಮಾಡುತ್ತಿದ್ದಿಲ್ಲ. ರಾಧಾದೇವಿಯು ಲಜ್ಜಾವಿನಯಸಂಪನ್ನೆಯೂ, ಸದಾಚಾರಿಯೂ, ಸಾಧ್ವಿಯೂ ಆದ ತನ್ನ ಪತ್ನಿಯ ಬಳಿಯಲ್ಲಿ ಕುತ್ಸಿತ ವಿಚಾರವನ್ನು ತೆಗೆದದ್ದೂ, ಗುಪ್ತ ಪ್ರಣಯ ದಾನ ಮಾಡಬೇಕೆಂಬ ವಿಚಾರವನ್ನು ಬರೆಹದ ಮೂಲಕವಾಗಿ ಇನಸ್ಪೆಕ್ಟ ರರು ಅವಳಿಗೆ ತಿಳಿಸಿದ್ದೂ ಸುರೇಂದ್ರರಾಯನ ಮನಸ್ಸನ್ನು ಸಂತಪ್ತಗೊಳಿಸಿ ದ್ದವು. ವಿದ್ಯಾಸಂಸ್ಥೆಯೊಳಗಿನ ಶಿಕ್ಷಕ-ಶಿಕ್ಷಕಿಯರ ಶೀಲವನ್ನು ಸೂರೆಮಾಡ ಲಿಕ್ಕೆ ಟೊಂಕಕಟ್ಟಿದ್ದ ರಾಧಾ-ಕೃಷ್ಣರ ಸಮಾಚಾರವನ್ನು ತೆಗೆದುಕೊಳ್ಳ ಬೇಕೆಂಬ ವಿಚಾರವು ಅವನಲ್ಲಿ ಹುಟ್ಟಿ ಮಾಯವಾಯಿತು. ಆ ವಿಚಾರವು ಮಾಯವಾಗಲಿಕ್ಕೆ ಕಾರಣವೆಂದರೆ, ಕೃಷ್ಣರಾಯರು ವಿಜಯನಗರದರ ಬಾರ ದಲ್ಲಿಯ ಪ್ರತಿಷ್ಠಿತ ಅಧಿಕಾರಿಗಳು; ಅಮಾತ್ಯರ ಹಾಗು ಮಿಕ್ಕ ಮೇಲಧಿಕಾರಿ ಗಳ ಸ್ನೇಹಾಂಕಿತರು; ಮೇಲಾಗಿ ಸಂಸ್ಥಾನಾಧಿಪತಿಗಳ ಆಪ್ತರು. ಅಂದ ಮೇಲೆ ಅವನು ಕೃಷ್ಣರಾಯರ ಸಮಾಚಾರವನ್ನು ಹೇಗೆ ತೆಗೆದುಕೊಳ್ಳು ವನು? ಸುರೇಂದ್ರರಾಯನು ಅಶಿಕ್ಷಿತನೂ ಹುಂಬನೂ ಆಗಿದ್ದರೆ, ಹುಂಬ ತನದ ಸಮಾಚಾರವು ಇಷ್ಟೊತ್ತಿಗೆ ತೆಗೆದುಕೊಳ್ಳಲ್ಪಟ್ಟು ಹಳೆಯ ಮಾತಾಗು ತ್ತಿತ್ತು. ವರಿಷ್ಠ ಅಧಿಕಾರಿಗಳಲ್ಲಿ ಹೋಗಿ ವಿನಂತಿ ಪತ್ರಿಕೆಯ ಮೂಲಕ ನ್ಯಾಯ ಬೇಡಬೇಕೆಂದು ಅವನ ಯೋಚನೆಯಿತ್ತು; ಆದರೆ ಈ ಪ್ರಯತ್ನವು ನಿರರ್ಥಕ ವಾಗುವದೆಂದು ಅವನ ಮಿತ್ರನಾದ ದಿವಾಣರ ಮಾಧವರಾಯನು ಹೇಳಿದ್ದ ರಿಂದ, ಆ ಕೆಲಸವನ್ನು ಅಲ್ಲಿಗೇ ನಿಲ್ಲಿಸಿದನು. ಮುಂದೆ ಏನು ಮಾಡಬೇಕು, ಹೇಗೆ ಮಾಡಬೇಕು? ಮೊದಲಾದ ವಿಚಾರಗಳು ಅವನಿಗೆ ತೋಚದ್ದರಿಂದ ಅವನು ಪ್ರವಾಹಪತಿತನಂತಾಗಿದ್ದನು.

ಸುರೇಂದ್ರರಾಯನಲ್ಲಿ ಸಂತಾಪ-ಕ್ಲೇಶಗಳನ್ನು ಉತ್ಪನ್ನ ಮಾಡಿದ ಪ್ರಕರಣದ ಪರಿಸಮಾಪ್ತಿಯು ಇನ್ನೂ ಆಗಿರಲಿಲ್ಲ. ಅದು ಸಂಪೂರ್ಣವಾ ಗುವ ಚಿಹ್ನವೂ ಸದ್ಯಕ್ಕೆ ಕಾಣುತ್ತಿದ್ದಿಲ್ಲ. ರಾಧಾ-ಕೃಷ್ಣಲ್ಯಾಂಡ ಕೋದೊಳ ಗಿನ ಜನರು ಪರ್ಯಾಯದಿಂದಲೂ, ಯುಕ್ತಿ-ಪ್ರಯುಕ್ತಿಗಳಿಂದಲೂ ರಮಾ ದೇವಿಯ ವಿಷಯವನ್ನು ತೆಗೆದು, ಅವನ ಕ್ಲೇಶ-ಸಂತಾಪಗಳನ್ನು ಉಕ್ಕ ಗೊಳಿಸುತ್ತಲಿದ್ದರು. ಕಂಕಣಬಹಾದ್ದರ ಆನಂದರಾಯ, ಸ್ಕೂಲ ಮಿಸ್ಟ್ರೆಸ್

ರಾಧಾದೇವಿ ಇವರಿಬ್ಬರೂ ಸಂಘದೊಳಗೆ ಎಲ್ಲರಿಗಿಂತ ಹೆಚ್ಚು ಯೋಗ್ಯತೆ ಯುವರಿದ್ದರು; ಯಾಕಂದರೆ ಇವರಿಬ್ಬರೂ ಸಾಹೇಬರ ಪೂರ್ಣ ಕೃಪೆಗೆ ಪಾತ್ರರಾಗಿದ್ದರು ರಾಧಾದೇವಿಯಂತು ಕೃಷ್ಣರಾಯರ ಪರಮ ಸ್ನೇಹಿತೆ. ಆದ್ದರಿಂದ ಮಿಕ್ಕವರಿಗಿಂತಲೂ ಇವಳ ಕಾಟವು ಸುರೇಂದ್ರರಾಯನಿಗೆ ಅಸಹ ನೀಯವಾಗಿತ್ತು ಒಮ್ಮೆ ರಾಧಾ-ಕೃಷ್ಣಾಂ ನಮಃ! ಎಂದು ನೌಕರಿಗೆ ಕೊನೆಯ ನಮಸ್ಕಾರ ಮಾಡಿಬಿಡಬೇಕೆಂಬ ಯೋಚನೆಯೂ ಅವನಲ್ಲಿ ಹುಟ್ಟಿತ್ತು; ಆದರೆ ಅವನ ಸುಶೀಲ ಪತ್ನಿಯೂ ಹಾಗು ಮಿತ್ರನಾದ ಮಾಧವ ರಾಯನೂ ಈ ಕೆಲಸಕ್ಕೆ ಅಡ್ಡಿ ಮಾಡಿದ್ದರು. ಬೇರೆ ಕಡೆಗೆ ಕೆಲಸವನ್ನು ಸಂಪಾದಿಸದೆ ನೌಕರಿ ಬಿಟ್ಟರೆ, ಸಂಸಾರ ಘಾತವಾಗುವ ಪ್ರಸಂಗವೊದಗುವ ದೆಂದು ಅವರು ಸುರೇಂದ್ರರಾಯನಿಗೆ ಉಪದೇಶ ಮಾಡಿದರು ಈ ಮಾತು ಗಳು ಸರಿಯಾಗಿ ತೋರಿದ್ದರಿಂದ, ಅವನು ವ್ಯವಸಾಯ ತ್ಯಜಿಸುವ ವಿಚಾರ ವನ್ನು ಬಿಟ್ಟು ಕೊಟ್ಟನು.

ಅತ್ಯಾಚಾರಿಯೂ, ಅನಾಚಾರಿಯೂ ಆದ ಆ ಸಂಘದ ಕಾಟವನ್ನು ಸಹನ ಮಾಡಿಕೊಳ್ಳುವದೇ ವಿಹಿತವೆಂದು ಸುರೇಂದ್ರರಾಯನಿಗೆ ತೋರಿತು. ಅವನ ಪತ್ನಿಯು ಪ್ರಥಮ ಗರ್ಭವತಿಯಿದ್ದು, ಬಾಣಂತಿತನಕ್ಕಾಗಿ ಅವ ಳನ್ನು ತಿಂಗಳೊಪ್ಪತ್ತಿನಲ್ಲಿ ತವರೂರಿಗೆ ಕಳಿಸಬೇಕಾಗಿತ್ತು ಅವಳು ಹೋದ ಮೇಲೆ ಸಂಘದ ನಾಟಕವು ಮುಗಿದು, ಕಾಟವು ತಪ್ಪುವದೆಂದು ಸುರೇಂದ್ರ ರಾಯನು ಧೈರ್ಯಗೊಂಡಿದ್ದನು. ಅವಳು ತಿರುಗಿ ಬರುವ ಒಂದು ವರ್ಷದ ಅವಧಿಯಲ್ಲಿ ಕೃಷ್ಣಕಾಂತಸ್ಥಾನದ ಜನರಿಗೆ ವಿಷಯ-ವಿಸ್ಮೃತಿಯಾಗುವದೆಂದು ಅವನ ಕಲ್ಪನೆಯಿತ್ತು.

ರಮಾದೇವಿಯು ಶಿಕ್ಷಣ ವ್ಯವಸಾಯವನ್ನು ಬಿಟ್ಟ ಮೇಲೆ ಸುರೇಂದ್ರ ರಾಯನ ವೇತನದಲ್ಲಿ ಎರಡು ರೂಪಾಯಿಗಳು ಕಡಿಯಲ್ಪಟ್ಟವು. ಮೂರು ಸಾರೆ ದಂಡವಾಗಿತ್ತು. ಹುಕುಮು-ತಾಕೀದಿಗಳಂತು ವಾರಕ್ಕೊಂದಾದರೂ ಇದ್ದೇ ಇರುತ್ತಿದ್ದವು. ಶಿಕ್ಷಣ ವ್ಯವಸಾಯದಲ್ಲಿ ಅವನು ತನ್ನ ಎಲುವುಗಳನ್ನು ಕಡ್ಡಿಗಿಂತ ಸಣ್ಣ ಮಾಡಿದ್ದರೂ, ಅದರ ಪ್ರಶಂಸೆಯಾಗುವಂತಿದ್ದಿಲ್ಲ; ಇಷ್ಟೇ ಅಲ್ಲ, ಇನಸ್ಪೆಕ್ಟರರ ಪರೀಕ್ಷೆಯಲ್ಲಿ ಅವನ ವರ್ಗದೊಳಗಿನ ಒಬ್ಬ ವಿದ್ಯಾರ್ಥಿ ಯಾದರೂ ಉತ್ತೀರ್ಣನಾಗುತ್ತಿರಲಿಲ್ಲ. ಪರೀಕ್ಷಕರೇ ಮುನಿದ ಮೇಲೆ ವಿದ್ಯಾರ್ಥಿಗಳು ಉತ್ತೀರ್ಣರಾಗುವ ಬಗೆ ಹೇಗೆ?

ಇನಸ್ಪೆಕ್ಟರ ಸಾಹೇಬರ ಸವಾರಿಯು ಸುರೇಂದ್ರರಾಯನು ಕೆಲಸ ಮಾಡುತ್ತಿದ್ದ ಶಾಲೆಯ ನಿರೀಕ್ಷಣೆಗಾಗಿ ಆಗಮಿಸಿತ್ತು. ಆ ಶಾಲೆಯ ಮುಖ್ಯ

ಶಿಕ್ಷಕನು ಆನಂದರಾಯನಾಗಿದ್ದನು. ಇನಸ್ಪೆಕ್ಟರರು ಮಿಕ್ಕ ಶಿಕ್ಷಕರ ವರ್ಗಗಳ ನಿರೀಕ್ಷಣೆಯನ್ನು ಕೆಲವು ನಿಮಿಷಗಳಲ್ಲಿ ಮುಗಿಸಿಕೊಂಡು ಸುರೇಂದ್ರರಾಯನ ಕೋಣೆಗೆ ಬಂದರು ಸುರೇಂದ್ರರಾಯನ ಕಡೆಗೆ ಒಂದು ಸಂಪೂರ್ಣ ವರ್ಗವಿತ್ತು; ಮತ್ತೊಂದು ವರ್ಗದ ಅರ್ಧ ಭಾಗವು ಮಾತ್ರ ಅವನ ಕಡೆಗಿತ್ತು. ಆ ವರ್ಗದ ಉಳಿದ ಅರ್ಧಭಾಗವು ಬೇರೊಬ್ಬ ಶಿಕ್ಷಕನ ಕಡೆಗಿತ್ತು. ಆ ವರ್ಗವು ದೊಡ್ಡದಿದ್ದದರಿಂದ ಹೀಗೆ ವಿಭಾಗಿಸಲ್ಪಟ್ಟಿತ್ತು.

ಪರೀಕ್ಷೆಗೆ ಪ್ರಾರಂಭವಾಯಿತು. ಪರೀಕ್ಷಕರು ಮೊಟ್ಟ ಮೊದಲು ವಿದ್ಯಾರ್ಥಿಗಳಿಗೆ ಗುಡುಗು ಹಾಕಿದರು. ಅನಂತರದಲ್ಲಿ ಅವರು ಸುರೇಂದ್ರರಾಯನನ್ನು ಕುರಿತು—'ಮಾಸ್ತರರೇ, ನಿಮ್ಮ ಹುಡುಗರಲ್ಲಿ ಸ್ವಚ್ಛತೆ-ಸುವ್ಯವಸ್ಥೆಗಳು ತಿಲಾಂಶವಾದರೂ ಕಂಡು ಬರುವದಿಲ್ಲ. ಮಿಕ್ಕ ವರ್ಗಗಳನ್ನು ನೋಡಿದ್ದರಿಂದ ಉಂಟಾದ ಆನಂದವು ನಿಮ್ಮ ಕೋಣೆಯನ್ನು ಪ್ರವೇಶಿಸಿದ ಕೂಡಲೆ ಮಾಯವಾಯಿತು.' ಎಂದು ನುಡಿದು, ಆನಂದರಾಯನನ್ನು ಕುರಿತು—'ಆನಂದರಾಯರೆ, ಸುರೇಂದ್ರರಾಯರ ವರ್ಗವು ಸುವ್ಯವಸ್ಥಿತವಾದ ನಿಮ್ಮ ಶಾಲೆಯ ಮರ್ಯಾದೆ ಕಳೆಯುವಂತಹದಿರುವದು. ಕೆಲಸ ಮಾಡುವದು ಬೇಡ; ವೇತನ ಬೇಕು. ಸುರೇಂದ್ರರಾಯರೆ, ನೀವು ಶಿಕ್ಷಣಸಂಸ್ಥೆಯಲ್ಲಿರಲಿಕ್ಕೆ ಅಪಾತ್ರರಿರುವಿರಿ!'

ವರಿಷ್ಠರೊಡನೆ ಪ್ರಸಂಗ! 'ಬ್ರ' ಅಂದರೆ ಬ್ರಹ್ಮಹತ್ಯೆ! ಅದಕ್ಕಾಗಿ ಸುರೇಂದ್ರರಾಯನು ಸುಮ್ಮನಿದ್ದನು.

ಪರೀಕ್ಷಕರು ಎರಡೂ ವರ್ಗಗಳ ವಿಷಯಗಳನ್ನು ತೆಗೆದುಕೊಳ್ಳಲಿಕ್ಕೆ ಪ್ರಾರಂಭಿಸಿದರು. ಬೆದರಿಸುವಿಕೆ, ಕೂಗಾಟ, ಅವಸರ, ಕಠಿಣ ಪ್ರಶ್ನೆ ಮೊದಲಾದ ಅಸ್ತ್ರಗಳನ್ನು ಅವರು ಬತ್ತಳಿಕೆಯಲ್ಲಿ ಸಜ್ಜುಗೊಳಿಸಿಕೊಂಡೇ ಸುರೇಂದ್ರರಾಯನ ಕೋಣೆಯನ್ನು ಪ್ರವೇಶಿಸಿದ್ದರು. ಆ ಅಸ್ತ್ರಗಳು ಸುರೇಂದ್ರರಾಯನ ವರ್ಗದಲ್ಲಿ ಹೊರಬಿದ್ದವು. ಪರೀಕ್ಷೆಯಲ್ಲಿ ಒಬ್ಬ ವಿದ್ಯಾರ್ಥಿಯೂ ಉತ್ತೀರ್ಣವಾಗಲಿಲ್ಲ. ಸಾಹೇಬರ ಮುಖಮುದ್ರೆಯು ವಿಜಯಾನಂದದಿಂದ ಅರಳಿತು. ಅವರು ತಮ್ಮ ಬೆನ್ನು ಚಪ್ಪರಿಸಿಕೊಂಡರು. ಅನಂತರದಲ್ಲಿ ಅವರು ಕರ್ಕಶ ವಾಣಿಯಿಂದ—'ಮಹಾರಾಯಾ, ಇಡೀ ವರ್ಷ ದುಡಿದದ್ದಕ್ಕೆ ಒಬ್ಬನಾದರೂ ಉತ್ತೀರ್ಣವಾಗಬಾರದೆ? ಸರಕಾರವು ಒಂದು ವರ್ಷದ ವರೆಗೆ ವೇತನ ಕೊಟ್ಟಿದ್ದು ಫುಕ್ಕಟೆಯಾಯಿತು. ವರ್ಷದಲ್ಲಿ ಕೆಲವು ವಾರ ದುಡಿದಿದ್ದರೆ ಒಂದೆಗಡು ವಿದ್ಯಾರ್ಥಿಗಳಾದರೂ ತೇರ್ಗಡೆ ಹೊಂದುತ್ತಿದ್ದರು. ಇಡಿ ವರ್ಷ ಸ್ವಸ್ಥವಾಗಿ ಕುಳಿತು, ಸರಕಾರದಹಣವನ್ನು ಫುಕ್ಕಟೆಯಾಗಿ ತಿನ್ನಲಿಕ್ಕೆ

ನಾಚಿಕೆಯೂ ಹೇಯವೂ ಉಂಟಾಗಲಿಲ್ಲವೆ? ಆರು ತಿಂಗಳ ಸಿರೀಕ್ಷಣೆಯಲ್ಲಿ ಎರಡು ರೂಪಾಯಿಗಳನ್ನು ಕಡಿಸಿಕೊಂಡಿರುವೆ. ಮೂರು ಸಾರೆ ದಂಡಮಾಡಿಸಿಕೊಂಡಿರುವೆ. ಇನ್ನು ನಿನಗೆ ಯಾವ ಶಾಸನವನ್ನು ವಿಧಿಸಬೇಕು? ನಿನ್ನ ನೌಕರಿಯ ವಿಷಯವಾಗಿ ವಿಚಾರಮಾಡಲಿಕ್ಕೆ ಹಚ್ಚಿಸಿದೆ. ನಿನ್ನಂತಹ ಕೆಲಸಗೇಡಿಯನ್ನು ಶಿಕ್ಷಣ ಸಂಸ್ಥೆಯಿಂದ ತಳ್ಳಿಬಿಡುವದೇ ಒಳಿತೆಂಬ ವಿಚಾರವು ಉತ್ಪನ್ನವಾಗಿರುವದು.'

ಸುರೇಂದ್ರರಾಯನು ಬೆದರಿದನು. ತನ್ನ ಮೇಲೆ ನಿಷ್ಕಾರಣವಾಗಿ ದುರ್ಭಾಷಣವು ಪ್ರಾರಂಭವಾದದ್ದರಿಂದ ಅವನಲ್ಲಿ ಸಂತಾಪವೂ ಹುಟ್ಟಿತು; ಆದರೆ ಮಾಡುತ್ತಾನೇನು? ವರಿಷ್ಠರೊಡನೆ ಪ್ರಸಂಗ!

'ಕತ್ತೇ! ಸುಮ್ಮನೆ ಏಕೆ ನಿಂತೆ? ನಿನ್ನನ್ನು ನೌಕರಿಯಿಂದ ಏಕೆ ತಳ್ಳಬಾರದು ಹೇಳು!'

ಇನಸ್ಪೆಕ್ಟರರು ಹೀಗೆ ದುರ್ಭಾಷಣಮಾಡಿದ ಕೂಡಲೆ ಸುರೇಂದ್ರರಾಯನ ಸಂತಪ್ತ ಹೃದಯವು ಮತ್ತಿಷ್ಟು ಜಾಗ್ರತವಾಯಿತು. ಅವನು ಉಕ್ಕುತ್ತಿರುವ ಸಂತಾಪವನ್ನು ನುಂಗಿಕೊಂಡು ವಿನಯದಿಂದ— 'ರಾವಸಾಹೇಬರೆ, ಪ್ರಶ್ನೆಗಳು ಕಠಿಣವಿರುವವು; ವಿದ್ಯಾರ್ಥಿಗಳ ಯೋಗ್ಯತೆ ಮೀರಿ ಪ್ರಶ್ನೆಮಾಡಿದರೆ ಹೇಗೆ? ನನ್ನ ವರ್ಷದ ಶ್ರಮವು ಮಣ್ಣುಗೂಡುವದೊತ್ತಟ್ಟಿಗಿರಲಿ, ವಿದ್ಯಾರ್ಥಿಗಳ ಆಯುಷ್ಯವು ಹಾಳಾಗುವದೆಂದು ವ್ಯಥೆಯಾಗಿದೆ. ನನ್ನ ವರ್ಗದೊಳಗಿನ ನಾಲ್ಕರಲ್ಲಿ ಮೂರು ಪಾಲು ವಿದ್ಯಾರ್ಥಿಗಳು ಮೇಲಿನ ವರ್ಗವನ್ನು ಸೇರಲಿಕ್ಕೆ ಪಾತ್ರರಿರುವರು.'

'ಪಾತ್ರಾಪಾತ್ರತೆಗಳನ್ನು ನಿರ್ಣಯಿಸುವ ಕೆಲಸವು ನಿನ್ನದಲ್ಲ. ನಾನು ಆ ಕೆಲಸ ಮಾಡಿರುವೆನು. ನಿನ್ನ ವರ್ಗದೊಳಗಿನ ಒಬ್ಬ ವಿದ್ಯಾರ್ಥಿಯೂ ಕೂಡ ಮೇಲಿನ ವರ್ಗವನ್ನು ಸೇರಲಿಕ್ಕೆ ತಕ್ಕವನಿಲ್ಲ. ವಿದ್ಯಾರ್ಥಿಗಳ ಆಯುಷ್ಯವನ್ನೂ ಸರಕಾರದ ಹಣವನ್ನೂ ಹಾಳು ಮಾಡಿ, ಮೇಲೆ ಡಾಂಭಿಕತನದ ವ್ಯಥೆಯನ್ನು ತೋರಿಸುವೆಯಾ? ನಿನ್ನನ್ನು 'ಡಿಸ್‌ಮಿಸ್' ಮಾಡಿರುವೆ. ಪ್ರಶ್ನೆಗಳು ಕಠಿಣವಿರುವವಂತೆ ಕಠಿಣ! ಕಲಿಸಿದ್ದರೆ ಹಗುರಾಗುತ್ತಿದ್ದವು.'

'ಸಾಹೇಬರೆ, ಕ್ಷಮಿಸಿರಿ. ನನ್ನಲ್ಲಿದ್ದ ಒಂದು ವರ್ಗದ ಅರ್ಧಭಾಗವು ಆ ಕೋಣೆಯಲ್ಲಿದೆ. ಈ ವರ್ಗಕ್ಕೆ ಕೇಳಿದ ಪ್ರಶ್ನೆಗಳಾದರೂ ಬರೆಯಲ್ಪಟ್ಟಿವೆ. ಈ ಪ್ರಶ್ನೆಗಳನ್ನು ಆ ವರ್ಗಕ್ಕೆ ಹಾಕಿರಿ; ಅಂದರೆ ನನ್ನ ಮಾತು ನಿಜವೆಂಬದರ ಅನುಭವವಾಗುವದು.'

ಸುರೇಂದ್ರರಾಯನ ಮಾತುಗಳಿಂದ ಆ ವರ್ಗದ ಶಿಕ್ಷಕನು ಈರ್ಷೆಗೆ

ಬಿದ್ದನು. ಅವನು ಸಾಹೇಬರನ್ನು ಕುರಿತು—'ಅವಶ್ಯವಾಗಿ ಈ ಪ್ರಶ್ನೆಗಳನ್ನು ಹಾಕಿರಿ. ನನ್ನ ವಿದ್ಯಾರ್ಥಿಗಳು ಉತ್ತರ ಕೊಟ್ಟರೆ ಸುರೇಂದ್ರರಾಯರ ಗರ್ವವು ಭಂಗವಾಗುವದು.'

ಆ ಶಿಕ್ಷಕನಂತೆ ಇವಸ್ಪೆಕ್ಟರರು ಹುಚ್ಚರಿದ್ದಿಲ್ಲ. ಅವರು ಅನುಭವಿಕರಿದ್ದರು. ತಾವು ತೆಗೆದ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವ ಯೋಗ್ಯತೆಯು ಆ ವರ್ಗದ ಯಾವ ವಿದ್ಯಾರ್ಥಿಗಳಲ್ಲಿಯೂ ಇರುವದಿಲ್ಲವೆಂಬದನ್ನು ಅವರು ಅರಿತಿದ್ದರು ವಿದ್ಯಾರ್ಥಿಗಳನ್ನು ಒರೆಗೆ ಹಚ್ಚ ಬಂದ ಪರೀಕ್ಷಕನನ್ನೇ ವರೆಗೆ ಹಚ್ಚುವ ಸುರೇಂದ್ರರಾಯನ ಭಾಷಣದಿಂದ ಇನಸ್ಪೆಕ್ಟರರು ಮತ್ತಿಷ್ಟು ರೇಗಿ 'ಮೂರ್ಖ! ಪರೀಕ್ಷಕರ ಪರೀಕ್ಷೆ ತಕ್ಕೊಳ್ಳತೊಡಗಿದೆಯಾ?'

ಪರೀಕ್ಷಕರ ಪರೀಕ್ಷೆಯಲ್ಲ; ಪ್ರಶ್ನೆಗಳ ಪರೀಕ್ಷೆಯು, ಈಗಲೆ ಈ ಪ್ರಶ್ನೆಗಳನ್ನು ವರೆಗೆ ಹಚ್ಚಿ ನಿಮ್ಮ ಮನಸ್ಸನ್ನು ವಿಕುಪ್ಪಗೊಳಿಸುವ ಸಾಹಸವನ್ನು ನಾನು ಮಾಡುವದಿಲ್ಲ ಈ ಮಾಸ್ತರರು ಜಂಭದಿಂದ ಮಾತಾಡುವರೆಂದ. ಅವರ ವರ್ಗದ ವಿದ್ಯಾರ್ಥಿಗಳು ಉತ್ತರ ಕೊಡಲು ಸಮರ್ಥರಾಗುವದಿಲ್ಲ. ಈ ಪ್ರಶ್ನೆಗಳನ್ನು ಸಂಸ್ಥಾನದೊಳಗಿನ ಬೇಕಾದ ಶಾಲೆಯೊಳಗಿನ ವಿದ್ಯಾರ್ಥಿಗಳಿಗೆ ಹಾಕಿರಿ; ಅಂದರೆ ನನ್ನ ಮಾತು ಸರಿಯಾದುದೆಂದು ತೋರುವದು. ವಸ್ತುಸ್ಥಿತಿಯನ್ನಾಡಿದ ಒಗ್ಗರೇಗಬಾರದು. ನಿಜವಾಗಿ ಹೇಳಬೇಕಾದರೆ ನನ್ನಲ್ಲಿರುವ ವಿಭಾಗದ ಕೊನೆಯ ಹುಡುಗನ ಯೋಗ್ಯತೆಯು ಈ ಮಾಸ್ತರರ ಕಡೆಯ ವಿಭಾಗದ ಮೊದಲನೇ ವಿದ್ಯಾರ್ಥಿಯಲ್ಲಿಲ್ಲ.'

'ಸಾಹೇಬರೆ!' ಆ ವರ್ಗದ ಮಾಸ್ತರನು ಹೇವಕ್ಕೆ ಬಿದ್ದು ಎದೆಯ ಮೇಲೆ ಕೈಯಿರಿಸಿಕೊಂಡು 'ಅಪಮಾನ! ಅಪಮಾನ! ಸುರೇಂದ್ರರಾಯರು ನನ್ನ ಅಪಮಾನಮಾಡಿದರು. ನೀವು ಈ ಪ್ರಶ್ನೆಗಳನ್ನು ನನ್ನ ವಿದ್ಯಾರ್ಥಿಗಳಿಗೆ ಕೇಳಿ ನನ್ನ ಮಾನವನ್ನು ತುಂಬಿಕೊಡಲಿಕ್ಕೇ ಬೇಕು.'

'ಹೇವಕ್ಕೆ ಬೀಳಬೇಡಿರಿ. ನಿಮ್ಮ ಹುಡುಗರಷ್ಟೇ ಏಕೆ, ನಿಮ್ಮ ವಿಭಾಗದ ಮೇಲಿನ ವರ್ಗವು ಆನಂದರಾಯಮಾಸ್ತರರ ಕಡೆಗಿರುವದು. ಆ ವಿದ್ಯಾರ್ಥಿಗಳೂ ಸಹ ಈ ಪ್ರಶ್ನೆಗಳಿಗೆ ಉತ್ತರ ಕೊಡಲಿಕ್ಕೆ ಸಮರ್ಥರಾಗಲಾರರು'

ಆನಂದರಾಯನೂ ಹೇವಕ್ಕೆ ಬಿದ್ದನು. ಈ ವಿಷಯದ ಪರಿಷ್ಕಾರ ಮಾಡಬೇಕೆಂದು ಅವನೂ ಸಾಹೇಬರಿಗೆ ದುಂಬಾಲ ಬಿದ್ದನು. ಸಾಹೇಬರಿಗೆ ಮಾತ್ರ ಜೀವದ ಸುತ್ತು ಬಂತು. ಇವರವರ ಕಾದಾಟದೊಳಗೆ ನನ್ನ ಜೀವವೆಲ್ಲಿ ಹೋಗುವದೋ? ಎಂದು ಆ ಮಾನಧನನು ಬೆವರಿದನು! ಆದರೂ ಶಿಕ್ಷಕರ ಧೈರ್ಯವನ್ನು ನಂಬಿ ಪರೀಕ್ಷೆಯನ್ನು ಪ್ರಾರಂಭಿಸಿದನು:-ತಮ್ಮಗಳಿರಾ,

ಬೆದರಬೇಡಿರಿ. ನಾನೇನು ಹುಲಿಯಲ್ಲ, ಕರಡಿಯಲ್ಲ; ನಿಮ್ಮಂತೆ ಮನುಷ್ಯನು. ನೀವೆಲ್ಲರೂ ಜಾಣರಿರುವಿರೆಂಬದನ್ನು ನಾನು ಬಲ್ಲೆನು. ನಿಮ್ಮ ಮಾಸ್ತರರೇ ನಿಮ್ಮನ್ನು ಹಾಗೆ ಸಿದ್ಧಪಡಿಸಿರುವರು.' ಎಂದು ಉಪೋದ್ಘಾತ ಮಾಡಿ—'ಬಾಲಕರೆ, ನೀವು ಎರಡನೆಯ ಇಯತ್ತೆಯವರಲ್ಲವೇ?'

'ಹೌದು ಸಾರ್!' ಎಲ್ಲ ಹುಡುಗರು ಏಕಕಂಠದಿಂದ ಕೂಗಿದರು. ಈ ಗರ್ಜನೆಯಿಂದ ಸಾಹೇಬರ ಕಿವಿಗಳು ಗಡಚಿಕ್ಕಿದವು ಸಾಹೇಬರ ಪ್ರಶ್ನೆಗೆ ಉತ್ತರ ಕೊಟ್ಟೆವೆಂದು ಹುಡುಗರ ಆನಂದಕ್ಕೆ ಮೇರೆದಪ್ಪಿತು.

'ನಾ ಪಾಸ ನಾ ಪಾಸ' ಎಂದು ಹುಡುಗರು ಗದ್ದಲವೆಬ್ಬಿಸಿದರು. 'ಎಲ್ಲರೂ (ಫೇಲ್) ನಾಪಾಸೇ' ಎಂದು ಸಾಹೇಬರು ಮನದಲ್ಲಿ ಅಂದು ಕೊಂಡು ನೊಂದುಕೊಂಡರು.

ಅಷ್ಟರಲ್ಲಿ ಒಬ್ಬ ಗಟ್ಟಿಗನಾದ ಹುಡುಗನು ಎದ್ದು ನಿಂತು—'ನಾ ಪಾಸ ಆದೆನೇನ್ ಸಾರ್' ಎಂದು ಸಾಹೇಬರನ್ನು ಕೇಳಿಯೇ ಬಿಟ್ಟನು.

'ಆ ಕೆಲಸವು ಇನ್ನು ಮೇಲೆ.' ಎಂದು ನುಡಿದು, ಸಾಹೇಬರು ಹುಡುಗರ ಗದ್ದಲವನ್ನು ಶಾಂತಪಡಿಸುವಬಗ್ಗೆ ವರ್ಗದ ಮಾಸ್ತರರಿಗೆ ಹೇಳಿದರು. ಒಮ್ಮೆ ಗದ್ದಲವು ಶಾಂತವಾಯಿತು 'ಹುಡುಗರು ಅಂಜಿದಂತೆ ತೋರು ವರು, ಉತ್ತರವನ್ನು ಕೊಡುವಿರೋ-ಇಲ್ಲವೋ!' ಎಂದು ಸಾಹೇಬರು ನುಡಿದು ಗಣಿತ ಪೇಪರಿನೊಳಗಿನ ಒಂದು ಹಗುರಾದ ಲೆಕ್ಕವನ್ನು ಆರಿಸಿ ಹೇಳಲಿಕ್ಕೆ ಪ್ರಾರಂಭಿಸಿದರು. 'ಹಲಗೆ ತೆಗೆದುಕೊಂಡು ತಿರುಗಿ ಕುಳಿತುಕೊಳ್ಳಿರಿ.' ಎಂದು ನುಡಿದು—'ಹದಿನೆಂಟರ ಇಮ್ಮಡಿಯ ಎಂಟು ಪಟ್ಟಿನಲ್ಲಿ ನೂರಾ ಎಂಟರ ಮೂರನೇ ಪಾಲಿನ ನಾಲ್ಕು ಪಟ್ಟು ಕಳೆಯಿರಿ.'

ಹುಡುಗರು ಹಲಗೆಯಲ್ಲಿ ಲೆಕ್ಕವನ್ನು ಬರೆದವರೇ ಕೆಳಗೆ ಹಾಕಿ; 'ನಾ ಪಾಸ, ನಾ ಪಾಸ' ಎಂದು ಗದ್ದಲವೆಬ್ಬಿಸಿದರು

ಲಕ್ಷಣವು ಸಾಹೇಬರಿಗೆ ತಿಳಿಯಿತು. 'ಲೆಕ್ಕವನ್ನು ಮಾಡಿ ಹಾಕಿರೋ, ಎಂದು ಮೆತ್ತಗೆ ಹೇಳಿದರು.

'ಲೆಕ್ಕವೇನ್ ಸಾರ್ ಇದು? ನಾವು ಶುದ್ಧಲೇಖನವೆಂದು ತಿಳಿದು ಕೊಂಡಿದ್ದೆವು ಇದೆಂಥ ಲೆಕ್ಕವು ಸಾರ್!'

'ಹುಡುಗರು ಅಂಜಿವೆ!' ಸಾಹೇಬರು ನುಡಿದರು.

ಎದೆಯೊಡೆಯುವಂತೆ ಹುಡುಗರು ಗದ್ದಲ ಹಾಕಿದ್ದರ ಪರಿವೆಯಿಲ್ಲದೆ ಸಾಹೇಬರು ಮಾತಾಡುವದರ ಇಂಗಿತವು ಸುರೇಂದ್ರರಾಯನಿಗೆ ತಿಳಿಯದಿರ ಲಿಲ್ಲ. ಅವನು ಯಾವ ಮಾತನ್ನೂ ಆಡದೆ ಸುಮ್ಮನೆ ನಿಂತಿದ್ದನು

ತಮ್ಮಗಳಿರಾ, ನೀವು ಬೆದರಿರುವಿರೆಂಬದನ್ನು ನಾವು ಬಲ್ಲೆವು. ಗಣಿತ ವಿಷಯವು ಇರಲಿ. ಮುಂಜಾನೆ ಎದ್ದ ಕೂಡಲೆ ಏನು ಮಾಡಬೇಕು?'

'ಟೀ ಕುಡಿಯಬೇಕ್ ಸಾರ್!' ಎಂದು ಒಬ್ಬ ವಿದ್ಯಾರ್ಥಿಯು ಹೇಳಿದನು.

'ಅಲ್ಲ ಸಾರ್, ಕಾಫಿ!' ಮತ್ತೊಬ್ಬ ವಿದ್ಯಾರ್ಥಿಯು ಉತ್ತರಿಸಿದನು.

'ಚಹಾ-ಕಾಫಿಯುಗದ ದುಷ್ಪರಿಣಾಮವಿದು. ಇದರಲ್ಲಿ ಹುಡುಗರ ತಪ್ಪಿಲ್ಲ; ಮಾಸ್ತರರ ತಪ್ಪಿಲ್ಲ.' ಎಂದು ಸಾಹೇಬರು ನುಡಿದು-'ಬಾಲಕರೆ, ನಿಮ್ಮ ಸಲುವಾಗಿ ಒಂದು ಹಗುರಾದ ಪ್ರಶ್ನೆ ಕೇಳುವೆನು. ಸಾರಂಗದ ಪಾಠದಿಂದ ನೀವು ಏನು ಕಲಿತಿರಿ?

ಈ ಪ್ರಶ್ನೆಯು ಸುರೇಂದ್ರರಾಯನ ವರ್ಗದ ಹುಡುಗರಿಗೆ ಕೇಳಿದ ಪ್ರಶ್ನೆಯಾಗಿದ್ದಿಲ್ಲ. ಆದ್ದರಿಂದ ಸಾಹೇಬರಿಗೆ ಅವನು ವಿರೋಧ ಮಾಡಿದನು. ಯಾವದೊಂದು ಪ್ರಶ್ನೆ ಕೇಳಿದರಾಯಿತೆಂದು ಅವರು ಹೇಳಿ—'ಬಾಲಕರೆ, ಹೇಳಿರಿ, ಸಾರಂಗದ ಪಾಠದಿಂದ ಏನು ತಿಳಿಯಿತು?'

'ಮನುಶಾಗ ಕೋಡು ಇರಬಾರದು ಸಾರ!' ಒಬ್ಬ ವಿದ್ಯಾರ್ಥಿಯು ಹೇಳಿದನು.

'ಭಲೆ! ನೋಡಿದಿರಾ ಹೇಗೆ ಉತ್ತರ ಕೊಡುವನು! ಮನುಷ್ಯನಿಗಲ್ಲ ತಮ್ಮಾ; ಸಾರಂಗಕ್ಕೆ ಕೋಡುಗಳಿರದಿದ್ದರೆ ನೆಟ್ಟಗಾಗುತ್ತಿತ್ತು' ಎಂದು ಸಾಹೇಬರು ನುಡಿದು-'ಸುರೇಂದ್ರರಾಯರೇ, ನೋಡಿದಿರಾ? ದಿಟ್ಟತನದಿಂದ ಹೇಗೆ ಉತ್ತರ ಕೊಡುವರು! ಸ್ವಲ್ಪಾದರೂ ಅಂಜುವರೇ? ಶಿಕ್ಷಣ ಕೊಡುವದರಲ್ಲಿಯೂ ಜಾಣತನವುಂಟು. ನೀವು ಶಿಕ್ಷಣ ಕೊಡುವವರಲ್ಲ; ಬರಿಯ ಸಂಬಳ ತಿನ್ನುತ್ತ ಕುಳಿತುಕೊಳ್ಳುವವರು.'

ಸಾಹೇಬರ ಪರೀಕ್ಷಾ ಪದ್ಧತಿಯನ್ನು ನೋಡಿ ಸುರೇಂದ್ರರಾಯನಿಗೆ ಸಖೇದಾಶ್ಚರ್ಯವಾಯಿತು. ಸಾರಂಗದ ಪ್ರಶ್ನೆಗೆ ವಿದ್ಯಾರ್ಥಿಯು ಹೇಳಿದ ಉತ್ತರವನ್ನು ಸಾಹೇಬರು ವಿಲಕ್ಷಣವಾದ ರೀತಿಯಿಂದ ಸರಿಪಡಿಸಿದ್ದಕ್ಕಾಗಿ ಅವನಿಗೆ ಸೋಜಿಗವಾಯಿತು. ಶಿಕ್ಷಣಶಾಸ್ತ್ರದ ಗಂಧವನ್ನರಿಯದ ವಿದ್ಯಾಧಿಕಾರಿಗಳ ಯೋಜನೆಯಿಂದ ಹೇಗೆ ಅನರ್ಥಗಳಾಗುವವೆಂಬುದರ ನಂಬಿಗೆ ಅವನಿಗಾಯಿತು.

ಇಷ್ಟು ವೇಳೆಯವರೆಗೆ ಸುಮ್ಮನೆ ಕುಳಿತ ಆನಂದರಾಯನು ಉಪಶಿಕ್ಷಕರ ಪಕ್ಷಗಟ್ಟಿದಂತೆ ನಟಿಸುತ್ತ-'ರಾವಸಾಹೇಬರೆ, ಸುರೇಂದ್ರರಾಯರು ಸುಮ್ಮನೆ ಕುಳಿತು ವೇಳೆಗಳೆಯುವವರಲ್ಲ ನಾಲ್ಕೈದುವರ್ಷ ಕೆಲಸ ಮಾಡಿ

ದ್ದರೂ ಇವರಿಗೆ ಶಿಕ್ಷಣ ಕೊಡುವ ಪದ್ಧತಿಯೇ ತಿಳಿದಿಲ್ಲ. ಇನ್ನು ಮೇಲೆ ಹೇಗೆ ಶಿಕ್ಷಣ ಕೊಡಬೇಕೆಂಬವರ ಬಗ್ಗೆ ನಾನು ಇವರಿಗೆ ತಿಳಿಸುತ್ತೇನೆ. ನೀವು ಕ್ಷಮಿಸದೆ ಇನ್ನಾರು ಕ್ಷಮಿಸಬೇಕು? ಬಡವರ ಹೊಟ್ಟೆಯ ಮೇಲೆ ಹೊಡೆಯ ಬೇಡಿರಿ; ಬೆನ್ನ ಮೇಲೆ ಹೊಡೆಯಿರಿ. ಪಾಪ! ಹೆಂಡತಿಯ ನೌಕರಿಯೂ ಹೋಗಿದೆ; ಇವನದೂ ಹೋಯಿತೆಂದರೆ ಉಪಜೀವನ ಸಾಗುವದು ಕಠಿಣ.'

'ತಮ್ಮ ವೈಸೊಕ್ಕಿನ ಫಲವನ್ನು ಉಣ್ಣುತ್ತಾರೆ' ಎಂದು ಸಾಹೇಬರು ನುಡಿದು—'ಸುರೇಂದ್ರರಾಯರ ವೇತನದಲ್ಲಿ ಮತ್ತೆ ನಾಲ್ಕು ರೂಪಾಯಿ ಕಡಿಮೆ ಮಾಡಿ, ಒಂದು ವರ್ಷದ ಅವಧಿಯನ್ನು ಕೊಡುತ್ತೇನೆ. ಮುಂದಿನ ವರ್ಷವೂ ಹೀಗಾದರೆ, ಖಂಡಿತವಾಗಿ ಕೆಲಸದಿಂದ ಕಡಿಮೆ ಮಾಡುವೆನು.'

ಸಾಹೇಬರು ಕುರ್ಚಿಯಿಂದೆದ್ದರು. ಅನಂತರದಲ್ಲಿ ಅವರು—'ಆನಂದ ರಾಯರೆ, ನಿಮ್ಮ ಶಾಲೆಯ ಶಿಕ್ಷಣ-ಸುವ್ಯವಸ್ಥೆಗಳನ್ನು ನೋಡಿ ಆನಂದ ವಾಯಿತು. ಸುರೇಂದ್ರರಾಯರ ವರ್ಗವನ್ನು ಬಿಟ್ಟು ಮಿಕ್ಕ ವರ್ಗಗಳ ಪರಿಣಾಮವು ಚನ್ನಾಗಿ ಆಗಿರುವದು. ಇನ್ನು ಮೇಲೆ ಸುರೇಂದ್ರರಾಯರಿಗೆ ಶಿಶು ವರ್ಗವನ್ನು ಕೊಡಿರಿ ಮೇಲಿನ ಇಯತ್ತೆಗಳಿಗೆ ಶಿಕ್ಷಣ ಕೊಡುವ ಯೋಗ್ಯತೆಯು ಅವರಲ್ಲಿಲ್ಲ.'

ಸಾಹೇಬರು ಶಾಲೆಯಿಂದ ಹೊರಹೊರಟರು. ಶಿಕ್ಷಕರು ಅವರನ್ನು ಮುಂದತ್ತ ಕಳಿಸಿ ತಿರುಗಿ ಬಂದು, ಸುರೇಂದ್ರರಾಯನ ವಿಷಯವಾಗಿ ಅವರು ತೋರಿಸಿದ ದಯೆಯನ್ನು ಕೊಂಡಾಡತೊಡಗಿದರು. ಅಷ್ಟರಲ್ಲಿ ಶಾಲೆ ಬಿಡುವ ವೇಳೆಯಾಯಿತು ಶಿಕ್ಷಕರೆಲ್ಲರೂ ತಮ್ಮ ತಮ್ಮ ಮನೆಗಳನ್ನು ಸೇರಿದರು.

ಸುರೇಂದ್ರರಾಯನು ಉದ್ವಿಗ್ನ ಮನಸ್ಕನಾಗಿದ್ದನು ಅವನು ಮನೆಗೆ ಬಂದು, ಶಾಲೆಯಲ್ಲಿ ನಡೆದ ಎಲ್ಲ ಸಂಗತಿಯನ್ನು ಪತ್ನಿಗೆ ತಿಳಿಸಿ, ಇನ್ನು ಮೇಲೆ ನೌಕರಿ ಮಾಡುವದು ಅಸಾಧ್ಯವೆಂದು ಹೇಳಿದನು. ಆ ಆದರ್ಶ ಲಲನೆಯು ಪತಿಗೆ ಧೈರ್ಯವನ್ನು ಹೇಳಿ, ಅವನ ಮನಸ್ಸಿನ ಉದ್ವಿಗ್ನತೆಯನ್ನು ದೂರ ಮಾಡಿದಳು.

ಅಂದೇ ಸಂಜೆಗೆ ರಮಾದೇವಿಯನ್ನು ಕರೆಯಲಿಕ್ಕೆ ಅವಳ ತವರೂರಿನ ವರು ಬಂದರು. ಸುರೇಂದ್ರರಾಯನಿಗೆ ಇದ್ದದರಲ್ಲಿಯೇ ಸಂತೋಷವಾಯಿತು. ಪತ್ನಿಯು ಬೇಗನೆ ತವರೂರಿಗೆ ಹೋಗುವದೇ ಅವನಿಗೆ ಬೇಕಾಗಿತ್ತು ಅವಳು ಹೋದರೆ, ರಾಧಾ-ಕೃಷ್ಣಳ್ಯಂಡಕೋಸವರ ಪೀಡೆಯಾದರೂ ತಪ್ಪುವ ದೆಂದು ಅವನು ತಿಳಿದಿದ್ದನು. ಮರನೆಯ ದಿನವೇ ರಮಾದೇವಿಯು ಪತಿಯ ನಿರೂಪ ಪಡೆದು ತವರೂರಿಗೆ ಹೋದಳು.

ರಮಾದೇವಿಯು ತವರೂರಿಗೆ ಹೋದ ದಿನ ಸಂಜೆಯ ಐದು ಗಂಟೆಗೆ ರಾಧಾದೇವಿಯು ಸೌಭಾಗ್ಯವತಿಯೊಡನೆ ಸುರೇಂದ್ರರಾಯನ ಮನೆಗೆ ಬಂದಳು. ಮನೆಯು ಭಣ ಭಣ ಅನ್ನುತ್ತಿತ್ತು. ಕೂಡಲೆ ಅವಳ ಎದೆಯು 'ಧಸ್' ಎಂದಿತು. ಅವಳು ಸುರೇಂದ್ರರಾಯನನ್ನು ಕುರಿತು—'ಮನೆಯಲ್ಲಿ ರಮಾ ದೇವಿಯವರು ಕಾಣುವದಿಲ್ಲವಲ್ಲ?'

'ಬನ್ನಿರಿ, ಕುಳಿತುಕೊಳ್ಳಿರಿ' ಮನಸ್ಸಿರದಿದ್ದರೂ ಬಾಹ್ಯೋಪಚಾರ ಕ್ಕಾಗಿ ಸುರೇಂದ್ರರಾಯನು ಸ್ಕೂಲ ಮಿಸ್ಟ್ರೆಸ್ಸಳ ಹಾಗು ಸೌಭಾಗ್ಯವತಿಯ ಸ್ವಾಗತ ಮಾಡಿ—'ಅವಳನ್ನು ತವರೂರಿಗೆ ಕಳಿಸಿದೆನು.'

ರಾಧಾದೇವಿಯು ನಿಟ್ಟುಸಿರು ಬಿಟ್ಟಳು. ಸೌಭಾಗ್ಯವತಿಯೂ ಸಣ್ಣ ದೊಂದು ಉಸಿರ್ಗರೆದಳು. ಅವರ ನಿಟ್ಟುಸಿರಿನ ಧ್ವನಿ ಕೇಳಿ, ಅಲ್ಲಿಯೇ ಕುಳಿತ ಮಾಧವರಾಯ ದಿವಾಣನು—'ಯಾಕೆ ಸ್ಕೂಲ ಮಿಸ್ಟ್ರೆಸ್ಸರೆ, ನಿಟ್ಟುಸಿರು ಬಿಡು ವಿರಿ? ಅವರು ಇಲ್ಲಿಯೇ ಇದ್ದರೆ ನಿಮ್ಮ ನಾಟಕವನ್ನು ರಂಗಭೂಮಿಯ ಮೇಲೆ ತರಲಿಕ್ಕೆ ಒಳಿತಾಗುತ್ತಿತ್ತು. ಅವರು ಹೋದ ಮೂಲಕ ವ್ಯಸನ ವಾಯಿತು, ಇಷ್ಟೇ ಅಲ್ಲವೇ ರಾಧಾದೇವಿ?'

'ಮಾಧವರಾಯರೆ, ನಾವೇನು ನಾಟಕ ಮಂಡಳಿಯವರಲ್ಲ.' ಎಂದು ರಾಧಾದೇವಿಯು ಆ ವಿಷಯವು ಬೆಳೆಯಬಾರದೆಂದು ಯೋಚಿಸಿ, ಬೇರೆ ಪ್ರಸ್ತಾಪ ತೆಗೆದಳು.

ತರುವಾಯ ಸಂಸಾರದ ಸುಖ-ದುಃಖದ ಮಾತುಗಳು ನಡೆದವು. ಮಾತಿಗೆ ಮಾತು ತೆಗೆದು ರಾಧಾದೇವಿಯು—'ನಿಮಗೆ ನಾಲ್ಕುರೂಪಾಯಿ ಡಿಗ್ರೇಡ ಆಯಿತು. ರಮಾದೇವಿಯ ನೌಕರಿಯೂ ಹೋಯಿತು. ಈಗಿನ ಕಠಿಣ ಕಾಲದಲ್ಲಿ ಜೀವನಯಾತ್ರೆ ನಡೆಯುವದಕ್ಕೆ ಅಡ್ಡಿಯಾದಂತಾಯಿತು. ನೀವು ನಿಮ್ಮ ಪತ್ನಿಯವರನ್ನು ಕೆಲಸದಲ್ಲಿ ತೊಡಗಲಿಚ್ಛಿಸುತ್ತಿದ್ದರೆ ಹೇಳಿರಿ. ನಾನು ರಾವಸಾಹೇಬರಿಗೆ ಹೇಳಿಕೊಂಡು ಕೆಲಸ ದೊರೆಯುವಂತೆ ಮಾಡು ವೆನು. ಮೊದಲಿನ ಸಾರೆಯಾದರೂ ನಾನೇ ಸಾಹಸ ಮಾಡಿ ಕೆಲಸ ದೊರೆಕಿಸಿ ಕೊಟ್ಟಿದ್ದೆನು; ಈ ಸಾರೆಯಾದರೂ ದೊರೆಕಿಸಿ ಕೊಡುವೆನು.'

'ಅವಳನ್ನು ನೌಕರಿಯಲ್ಲಿ ಸೇರಿಸಲಿಚ್ಛಿಸುವದಿಲ್ಲ.' ಎಂದು ನುಡಿದು, ಸುರೇಂದ್ರರಾಯನು—'ಸದ್ಯಕ್ಕೆ ಈ ವಿಷಯವನ್ನು ತೆಗೆದುಕೊಂಡು ಮಾ- ಡುವದೇನು? ಅವಳು ಹಡೆಯಲಿಕ್ಕೆ ತವರೂರಿಗೆ ಹೋಗಿದ್ದಾಳೆ. ಅವಳು ಇಲ್ಲಿಗೆ ಬರಲಿಕ್ಕೆ ಒಂದು ವರ್ಷ ಬೇಕು. ಬಂದ ಮೇಲೆ ಆಗಿನ ಪರಿಸ್ಥಿತಿಯನ್ನು ನೋಡಿಕೊಂಡು ಏನಾದರೂ ಮಾಡಲಿಕ್ಕೆ ಬಂದೀತು.'

'ವರಿಷ್ಠರ ಮನಸ್ಸು ವಿತುಷ್ಟಗೊಳಿಸಿದರೆ ಯಾವ ಪಸಿಣಾಮವಾಗುವ ದೆಂಬದನ್ನು ಚನ್ನಾಗಿ ತಿಳಿದಿರಾ?' ಎಂದು ಸೌಭಾಗ್ಯವತಿ ಪಸಿತೆಯು ನುಡಿದಳು.

'ಈ ಚಿಟಗುಬ್ಬಿಯನ್ನು ಎಲ್ಲಿಂದ ದೊರೆಕಿಸಿದಿರಿ? ನಿಮ್ಮ ರಾಯರ ಪಂಜರದಲ್ಲಿಡಲಿಕ್ಕೆ ಇದು ತಕ್ಕದ್ದಾಗಿದೆ. ಇಷ್ಟರಲ್ಲಿ ಅವರು ಇವಳನ್ನು ಪಂಜರದಲ್ಲಿರಿಸಿರಬಹುದು.' ಎಂದು ಮಾಧವರಾಯನು ನುಡಿದು-'ನೀವು ಒಂದು ವರ್ಷದ ವರೆಗಾದರೂ ರಮಾದೇವಿಯ ಪ್ರಕರ್ಣವನ್ನು ಫೈಲಿಗೆ ಹಾಕಲಿಕ್ಕೆ ವರಿಷ್ಠರೆದುರಿಗೆ ಹೇಳಿರಿ.'

ತರುವಾಯ ಭಗ್ನಮನೋರಥರಾದ ಸೌಭಾಗ್ಯವತಿ, ಸ್ಕೂಲ ಮಿಸ್ಟ್ರೆಸ್ಸರು ತಮ್ಮ ತಮ್ಮ ಮನೆಗಳಿನ್ನು ಸೇರಿದರು.

ಇಡೀ ವರ್ಷದ ವರೆಗೆ ಬೇಟಿಯು ಕೈಗೆ ಬರುವದಿಲ್ಲೆಂದು ರಾಧಾದೇವಿಯು ರಾವಸಾಹೇಬರಿಗೆ ಹೇಳಿದಳು. ಈ ಸಂಗತಿಯನ್ನು ಕೇಳಿ ಇನಸ್ಪೆಕ್ಟರರು ಖೇದಬಟ್ಟರು ಆಗ ಅವರು-'ರಾಧಾದೇವಿ, ಬೈಲಿಗಿದ್ದ ಪ್ರಕರಣವನ್ನು ಫೈಲಿಗಿಡಬೇಕಾಯಿತು.' ಎಂದು ಹೇಳಿದರು.

---

## ಮಾಂಗಲ್ಯಬಂಧನ

ರಾಧಾದೇವಿಯ ಸ್ವೈರ ವರ್ತನವು ಪರಮಾವಧಿ ಘನತೆಗೇರಿತು. ಸ್ವಚ್ಛಂದತೆ, ಸ್ವೈರಾಚಾರ, ವಿಲಾಸಾದಿಗಳೇ ಅವಳ ಜೀವನದ ಧ್ಯೇಯಗಳಾಗಿ ಹೋದವು ಬರಬರುತ್ತ ಅಡವೀರಾಯನು ಪತಿಯೆಂದು ಹೇಳಲಿಕ್ಕೆ ಸಹ ಅವಳು ನಾಚಹತ್ತಿದಳು. ಅಧಿಕಾರಬಲದಿಂದ ಅವಳು ಕೃಷ್ಣರಾಯನ ಕಳ್ಳರಾಣಿಯಾಗಿದ್ದರೂ, ಆನಂದರಾಯ——ಗೋವಿಂದರಾಯ——ವಕೀಲ ಗೋವರ್ಧನರಾಯ ಮೊದಲಾದ ಜನರೊಡನೆ ಗ ಪ್ತಸ್ನೇಹವಿಟ್ಟಿದ್ದಳು. ಗೋವರ್ಧನರಾಯನಂತು ರಾಧಾದೇವಿಯ ಮನಸ್ಸನ್ನು ತೃಪ್ತಿಬಡಿಸುವದಕ್ಕಾಗಿ ಬಹಳೇ ಯತ್ನಿಸುತ್ತಿದ್ದನು. ಅವನು ರಾಧಾದೇವಿಗೆ ಇಂದು ಕೈಗಡಿಯಾರ ಕಳಿಸಿದರೆ, ನಾಳೆ ಸುಂದರವಾದ ಕೋಯಿಮುತ್ತೂರುಪತ್ತಲ ಕಳಿಸುವನು. ನಾಡದು ಬಂಗಾರದ ಡಾಬು ಕಳಿಸುವನು. ಹೀಗೆ ಏನಾದರೊಂದು ಪದಾರ್ಥಗಳುಗೋವರ್ಧನರಾಯನಿಂದ ಅವಳಿಗೆ ಸಲ್ಲುತ್ತಿದ್ದವು. ವಕೀಲಸಾಹೇಬರಿಂದಾದ ಉಪಕೃತಿಯನ್ನು ಅವಳಾದರೂ ಇಟ್ಟುಕೊಳ್ಳುತ್ತಿದ್ದಿಲ್ಲ. ಕೃಷ್ಣರಾಯರೊಂದಿಗೆ ಪ್ರಣಯವಿಟ್ಟಿದ್ದು ಅನುಚಿತವೆಂದು ಅವಳ ಭಾವನೆಯೇ ಇದ್ದಿಲ್ಲ; ಆದರೆ ಮಿಕ್ಕವರ ಪ್ರಣಯವು ಗುಪ್ತವಾಗಿರಬೇಕೆಂದು ಅವಳ

ಇಚ್ಛಿಯಿತ್ತು; ಯಾಕಂದರೆ, ಕೃಷ್ಣರಾಯರು ವಿದ್ಯಾಖಾತೆಯ ಮುಖ್ಯಾಧಿಕಾರಿಗಳು ಅಂತೆಯೇ ಅವಳು ಜಾಗ್ರತೆಗೊಂಡಿದ್ದಳು. ಮಧ್ಯಮವಯಸ್ಕರಾದ ರಾವಸಾಹೇಬರನ್ನು ಅವಳು ಮನಸಾ ಪ್ರೀತಿಸುತ್ತಿದ್ದಿಲ್ಲ. ಅವಳ ನಿಜವಾದ ಪ್ರೇಮವು ಗೋವರ್ಧನರಾಯನಲ್ಲಿತ್ತು. ಆ ಪ್ರೇಮವು ಬೈಲಿಗೆ ಬೀಳಬಾರದೆಂಬ ಉದ್ದೇಶದಿಂದ ಅವಳು ಆನಂದ-ಗೋವಿಂದರೊಡನೆ ಪ್ರಣಯವಿಟ್ಟಿದ್ದಳು.

ತನ್ನ ಪತ್ನಿಯು ದುರಾಚಾರಿಣಿಯಿರುವಳೆಂಬದನ್ನು ತಿಳಿದೇ ಅಡವೀರಾಯನು ಅವಳನ್ನು ವಿವಾಹವಾಗಿದ್ದನು. ವಿವಾಹವಾದ ಮೇಲೆಯಾದರೂ ಅವಳು ಮನೆಯ ಹೆಂಡತಿಯಂತೆ ಬಾಳ್ವೆ ಮಾಡಿಕೊಂಡಿರಬಹುದೆಂದು ತಿಳಿದನು; ಆದರೆ ಸ್ವಲ್ಪದಿನಗಳಲ್ಲಿ ಆ ಹುಚ್ಚು ಬಯಲಾಯಿತು. ವಿಜಯನಗರವು-ಹೊಸ ಗ್ರಾಮವಾದ್ದರಿಂದ ಅಲ್ಲಿಯಾದರೂ ತಪ್ಪುಹೆಜ್ಜೆಯಿಡಲಿಕ್ಕಿಲ್ಲವೆಂದು ಅವನು ಬಗೆದನು; ಆ ತಿಳುವಳಿಕೆಯೂ ತಪ್ಪಾಯಿತು. ತಾನು ಶಿಕ್ಷಕನಾಗಿ ಸುಧಾರಕನಲ್ಲಿ ಗಣಿಸಲ್ಪಟ್ಟಮೇಲೆ, ರಾಧೆಯು ಮದುವೆಯ ಹೆಂಡತಿಯಂತಿರಬಹುದೆಂದು ಅಡವೀರಾಯನ ಗೃಹಿಕೆಯಾಯಿತು. ಅಡವಿಯು ಏನಾದಗೊಡವೆ ರಾಧೆಗಿದ್ದಿಲ್ಲ ಅವಳು ಪತಿಯನ್ನು ಕಣ್ಣೆತ್ತಿಸಹ ನೋಡುತ್ತಿದ್ದಿಲ್ಲ.

ಮೊದಮೊದಲು ಕಳ್ಳವ್ಯವಹಾರವು ಮುಚ್ಚುಮರೆಯಾಗಿ ನಡೆಯುತ್ತಿತ್ತು. ಬರಬರುತ್ತ ಅದರ ಆವರಣವು ತೆರೆಯಲ್ಪಟ್ಟಿತು. ರಾಧಾದೇವಿಯು ಕೃಷ್ಣರಾಯರೊಡನೆ ತಿರುಗಾಡುತ್ತ ಹೋಗುವದು, ಮೋಟರಿನಲ್ಲಿ ಕುಳಿತು ಅಡ್ಡಾಡುವದು, ಯಾವದೊಂದು ಸರಕಾರೀ ಕೆಲಸದ ನಿಮಿತ್ತ ಹೇಳಿ, ಸಾಹೇಬರ ಮನೆಯಲ್ಲಿಯೆ ವಸತಿ ಮಾಡುವದು ಮೊದಲಾದ ಕಾರ್ಯಗಳು ಮುಚ್ಚುಮರೆಯಿಲ್ಲದೆ ಸಾಗಿದ್ದವು. ಆನಂದ-ಗೋವಿಂದ ಹಾಗು ಗೋವರ್ಧನರಾಯರ ಮನೆಗೆ ಅವಳು ಆಗಿಂದಾಗ ಹೋಗುತ್ತಿದ್ದಳು. ಅವರಾದರೂ ರಾಧಾದೇವಿಯ ಮನೆಗೆ ವೇಳೆ-ಅವೇಳೆಯಲ್ಲಿ ಬಂದು ಮಾತಾಡುತ್ತ ಕುಳಿತುಕೊಳ್ಳುತ್ತಿದ್ದರು. ಅಡವೀರಾಯನಿದ್ದಾಗ ಮೊದಮೊದಲು ಯಾರೂ ರಾಧಾದೇವಿಯ ಮನೆಗೆ ಬರುತ್ತಿದ್ದಿಲ್ಲ; ಆದರೆ ಈಗ ಅವನ ಸಮಕ್ಷಮದಲ್ಲಿಯೇ ಎಷ್ಟೋ ಪ್ರಣಯ ವ್ಯವಹಾರಗಳು ಸಾಗತೊಡಗಿದವು. ರಾಧಾದೇವಿಯ ವಿಲಾಸಮಂದಿರದಲ್ಲಿ ಅವಳ ಸ್ನೇಹಿತರು ಹಗಲು-ರಾತ್ರಿಗಳೆನ್ನದೆ ಬರುತ್ತಿದ್ದರು. ಮೊದಲು ಕೃಷ್ಣರಾಯರು ಅಲ್ಲಿಗೆ ಬರುತ್ತಿದ್ದಿಲ್ಲ; ಆದರೆ ಅವಳ ಮನೆಯಲ್ಲಿ ವಿಲಾಸಮಂದಿರವು ಶೃಂಗಾರವಾದಂದಿನಿಂದ, ಅವರು ವಾರದಲ್ಲಿ ಒಂದೆರಡು ಸಾರೆಯಾದರೂ ಅಲ್ಲಿ ವಸತಿ ಮಾಡುತ್ತಿದ್ದರು.

ಅಡವೀರಾಯನು ಈ ಅತ್ಯಾಚಾರವನ್ನು ಸಹನೆ ಮಾಡುತ್ತಿದ್ದಿಲ್ಲ. ಒಮ್ಮೊಮ್ಮೆ ಅವನು ಸವಿಮಾತಿನಿಂದ ಪತ್ನಿಗೆ ಬುದ್ಧಿ ಹೇಳುತ್ತಿದ್ದನು. ತನ್ನೊಡನೆ ಮದುವೆಯ ಹೆಂಡತಿಯಂತಿರದಿದ್ದರೂ ಕೂಡಿಕೆಯವಳಂತಾದರೂ ಇರಬೇಕೆಂದು ಬೇಡಿಕೊಳ್ಳುತ್ತಿದ್ದನು; ಮಾಡುವ ವ್ಯವಹಾರದ ಮೇಲೆ ಹೊದಿಕೆ ಇರಲೆಂದು ಪ್ರಾರ್ಥಿಸುತ್ತಿದ್ದನು; ಸಂತೆಯ ಸೂಳೆಯರಂತೆ ವರ್ತಿಸದೆ, ಒಬ್ಬಿಬ್ಬರನ್ನು ನಂಬಿಕೊಂಡಿರಬೇಕೆಂದು ಉಪದೇಶಿಸುತ್ತಿದ್ದನು! ಎಷ್ಟಾದರೂ ಗಂಡಸಿನ ಜನ್ಮ. ಹೆಂಡತಿ ತೀರ ಅಡ್ಡನಡತೆಯವಳಿರ.ವಳೆಂದು ಊರಲ್ಲೆಲ್ಲ ವಾರ್ತೆಯಾದದ್ದು ಅವನ ವೈರಿಯನ್ನೆಲ್ಲ ಚುಚ್ಚುತ್ತಿತ್ತು. ಅದಕ್ಕಾಗಿ ಅವನು ಕೈಜೋಡಿಸಿ, ಸೆರಗೊಡ್ಡಿ ಪತ್ನಿಯನ್ನು ಬೇಡಿಕೊಳ್ಳುತ್ತಿದ್ದನು. ಎಷ್ಟಾದರೂ ಮಾನ ಕಾಯಬೇಕೆಂದು ಸಾಷ್ಟಾಂಗವೆರಗುತ್ತಿದ್ದನು! ಅವನ ಉಪದೇಶ-ವಿನಂತಿಗಳ ಪರಿಣಾಮವು ರಾಧಾದೇವಿಯ ಮನಸ್ಸಿನ ಮೇಲೆ ಸ್ವಲ್ಪವಾದರೂ ಆಗುತ್ತಿದ್ದಿಲ್ಲ. ಅವಳು ತನ್ನ ಕಾರ್ಯಕ್ರಮವನ್ನು ಯಥಾಸ್ಥಿತವಾಗಿಯೇ ಇಟ್ಟಿರುತ್ತಿದ್ದಳು. ಅವಳು ತಾನು ಕೆಡುವದಲ್ಲದೆ, ಎಷ್ಟೋ ಕುಲವಧುಗಳ ಶೀಲವನ್ನು ಸೂರೆ ಮಾಡಿ, ಪರಸ್ತ್ರೀ ಪ್ರೀತಿಸಂಪಾದನೆ ಮಾಡತೊಡಗಿದ್ದನ್ನು ನೋಡಿ ಅಡವೀರಾಯನಲ್ಲಿಯ ಸಂತಾಪವು ಹೆಚ್ಚಿತು. ಅವನು ಸಾವೋಪಾಯವನ್ನು ನಿಲ್ಲಿಸಿ, ಅವಳಿಗೆ ಸಿಟ್ಟು ಮಾಡಿ ಹೇಳತೊಡಗಿದನು. ಸಿಟ್ಟು ಮಾಡಿ ಹೇಳಿದಂತೆ ಅವಳು ಹೆಚ್ಚು-ಹೆಚ್ಚು ಮಾಡತೊಡಗಿದಳು. ಕೃಷ್ಣರಾಯರ ಮನೆಗೆ ಹೋಗಬೇಡವೆಂದಾಗ ಅವಳು ಅಲ್ಲಿಗೇ ಹೋಗುತ್ತಿದ್ದಳು ಹಗಲು ಹೋದರೂ ರಾತ್ರಿಯಲ್ಲಿ ವಸತಿ ಮಾಡಬೇಡವೆಂದಾಗ, ಒಂದೊಂದು ಎರಡೆರಡು ವಾರ ಅಲ್ಲಿಯೇ ಇದ್ದುಬಿಡುತ್ತಿದ್ದಳು. ಕೃಷ್ಣರಾಯರೊಡನೆ ತನ್ನ ಸಮ್ಮುಖದಲ್ಲಿಯೇ ವಿಲಾಸಮಾಡುತ್ತಿರಬೇಡವೆಂದಾಗ, ಬುದ್ಧಿಪೂರ್ವಕ ಅವರನ್ನು ಮನೆಗೆ ಬರಮಾಡಿಕೊಂಡು, ಕೈಗೆ ಕೈ ಹಿಡಕೊಂಡು ವಿಲಾಸ ಮಂದಿರವನ್ನು ಪ್ರವೇಶಿಸುತ್ತಿದ್ದಳು.

ಅಡವೀರಾಯನ ಹೃದಯದಲ್ಲಿ ಧಗಧಗಿಸುತ್ತಿದ್ದ ಸಂತಾಪವನ್ನು ಮತ್ತಿಷ್ಟು ಜಾಜ್ವಲ್ಯಮಾನಗೊಳಿಸಲಿಕ್ಕೆ ಮತ್ತೆ ಎರಡು ದೊಡ್ಡ ಕಾರಣಗಳು ಘಟಿಸಿದವು. ಮೊದಲನೆಯ ಕಾರಣವೆಂದರೆ, ರಾಧಾದೇವಿಯು ಗರ್ಭವತಿಯಾದ ಚಿಹ್ನವು ಸ್ಪಷ್ಟವಾಗಿ ತೋರಹತ್ತಿದ್ದು, ತನ್ನ ಹಾಗು ತನ್ನ ಪತ್ನಿಯ ವ್ಯವಹಾರವು ಎರಡು ವರ್ಷಗಳಿಂದ ಬಂಧು-ಭಗಿನಿಯರಂತೆ ಇರುತ್ತಿರಲು, ಅವಳು ಗರ್ಭವತಿಯಾದದ್ದು ಅಡವೀರಾಯನಿಗೆ ದ್ವೇಷವನ್ನುಂಟುಮಾಡಿತು. ಪತ್ನಿಯ ಅನಾಚಾರದಿಂದ ಗರ್ಭದಲ್ಲಿ ವಾಸವಾಗಿದ್ದ ಜೀವವು ಮುಂದೆ

ತನ್ನ ಔರಸ ಸಂತತಿಯಾಗಿ ಮೆರೆಯುವದೆಂಬದು ಸ್ಮರಣೆಯಲ್ಲಿ ಬಂದ ಕೂಡಲೆ ಅವನಿಗೆ ಮರಣಪ್ರಾಯ ವ್ಯಥೆಯಾಯಿತು. ಪತ್ನಿಯ ಈ ಅತ್ಯಾಚಾರಕ್ಕಾಗಿ ಏನು ಉಪಾಯ ಮಾಡಬೇಕೆಂದು ಅವನು ಬಹು ವಿಧವಾಗಿ ಯೋಚಿಸತೊಡಗಿದನು. ಇನ್ನು ಅವನ ಸಂತಾಪವನ್ನು ಪ್ರಜ್ವಲಿಸಿದ ಎರಡನೆಯ ಕಾರಣವೆಂದರೆ, ರಮಾದೇವಿಯ ಪ್ರಕರಣವು. ರಾಧಾ-ಕೃಷ್ಣ ಆ್ಯಂಡ ಕೋದೊಳಗಿನ ಎಲ್ಲ ಜನರು ರಮಾದೇವಿಯ ವಶೀಕರಣ ಕಾರ್ಯದಲ್ಲಿ ಹೆಣಗಿ ದಣಿದಿದ್ದಲು, ತನ್ನ ಪತ್ನಿಯು ಆ ಕಾರ್ಯಸಿದ್ಧಿಗಾಗಿ ಟೊಂಕಕಟ್ಟಿ ವ್ಯಾಹತಿಯಿಲ್ಲದೆ ತಂತ್ರಗಳನ್ನು ರಚಿಸಹತ್ತಿದ್ದಳು ಅವಳು ಎಷ್ಟೋ ಜನ ಸಾಧ್ವಿಯರನ್ನು ಯುಕ್ತಿ-ಪ್ರಯುಕ್ತಿಗಳಿಂದ ವಶಪಡಿಸಿಕೊಂಡು, ಕೃಷ್ಣನ ಗೋಕುಲದಲ್ಲಿ ರಾಸಕ್ರೀಡೆಗೆ ಕಳಿಸಿದ್ದಳು; ಆದರೆ ಈಗ ಸಾಧ್ವೀಶಿರೋಮಣಿಯಾದ ರಮಾದೇವಿಯ ಸುತ್ತು ಕೈ ತೊಳೆಕೊಂಡು ಬೆನ್ನ ಹತ್ತಿದ್ದರಿಂದ, ಅವನು ಸಿಟ್ಟಿನಿಂದ ಹುಚ್ಚಾದನು. ರಮಾದೇವಿಯು ಸೀತಾ-ಸಾವಿತ್ರಿಗೆ ಸಮಾನಳಾದ ಸತೀ ಶಿರೋಮಣಿಯಿರುವಳೆಂಬದು ಅಡವೀರಾಯನಿಗೆ ಚನ್ನಾಗಿ ಗೊತ್ತಾಗಿತ್ತು. ಅಂತೆಯೆ ಅವನ ತಲೆಯು ತಿರುಗಿ ಹೋಯಿತು.

ರಮಾದೇವಿಯು ಪುತ್ರ ರತ್ನವನ್ನು ಪಡೆದು ಮಗುವಿನೊಂದಿಗೆ ಪತಿಗೃಹಕ್ಕೆ ಬಂದಿದ್ದಳು. ಅವಳ ಕುಮಾರನಾದ ವಸಂತನಿಗೆ ಈಗ ಒಂಬತ್ತು ತಿಂಗಳು. ಸುರೇಂದ್ರರಾಯನೂ, ರಮಾದೇವಿಯೂ ಮಗುವಿನ ಬಾಲಲೀಲೆಗಳಿಂದ ಆನಂದಪಡತೊಡಗಿದ್ದರು. ಈ ಆನಂದವೊಡನೆ ಒಂದು ದುಃಖವೂ ಅವರ ಹೃದಯದಲ್ಲಿ ತುಂಬಿಕೊಂಡಿತ್ತು. ಇಷ್ಟು ದಿನ ಫೈಲಿಗೆ ಬಿದ್ದ ಪ್ರಕರಣವನ್ನು ರಾಧಾ-ಕೃಷ್ಣ ಆ್ಯಂಡ ಕೋದವರು ಬೈಲಿಗೆ ತೆಗೆದು, ಸರ್ವ ಭಾರವನ್ನು ರಾಧಾದೇವಿಯ ಕಡೆಗೆ ಒಪ್ಪಿಸಿದ್ದರು. ಕೃಷ್ಣರಾಯರಂತು ಶಿಕ್ಷಾ-ದಂಡವನ್ನು ಕೈಯಲ್ಲಿ ತೆಗೆದುಕೊಂಡು ಸಿದ್ಧರಾಗಿಯೇ ಇದ್ದರು. ಸುಮಾರು ಒಂದು ವರ್ಷ ತವರೂರಲ್ಲಿದ್ದು ಬಂದ ಮೇಲೆ ಸಹ ಸಂಘದವರೂ ಸಂಘದಲ್ಲಿ ಪ್ರಮುಖಳಾದ ರಾಧಾದೇವಿಯೂ ತಮ್ಮ ಕಾಯಕವನ್ನು ಬಿಡಲಿಲ್ಲ. ರಮಾದೇವಿಯ ಪಾವಿತ್ರ್ಯ ಜಲವನ್ನು ಕೃಷ್ಣರಾಯರ ಕೈ ಮೇಲೆ ಬಿಡಿಸಬೇಕೆಂದು ರಾಧಾದೇವಿಯು ಬದ್ಧಕಂಕಣಳಾಗಿದ್ದಳು.

ರಾಧಾದೇವಿಯು ಪುನಶ್ಚಹರಿಃ ಓಂ, ಎಂದು ಕಾಮುದೇವನ ಕಾರಭಾರವನ್ನು ರಭಸದಿಂದ ಪ್ರಾರಂಭಿಸಿದ್ದೂ, ಅದೇ ಕಾಲದಲ್ಲಿ ಅವಳು ಗರ್ಭವತಿಯಾದ ಚಿಹ್ನವು ಸ್ಪಷ್ಟವಾಗಿ ತೋರಲಾರಂಭಿಸಿದ್ದೂ ಅಡವೀರಾಯನಲ್ಲಿ ಉದ್ವೇಗವನ್ನುಂಟು ಮಾಡಿದ್ದವಷ್ಟೇ? ಆ ಉದ್ವೇಗದ ಭರದಲ್ಲಿ ಅವನ

ಪತ್ನಿಯನ್ನು ಕೆಣಕಿ ಬಿಟ್ಟನು.

'ರಾಧಾದೇವಿ, ನಾನು ನಿಮ್ಮ ವರ್ತನದ ವಿಷಯವಾಗಿ ಹೇಳಿ ಹೇಳಿ ಬೇಸತ್ತೆನು. ಕೈಮುಗಿದು ಹೇಳಿಕೊಳ್ಳುವದಾಯಿತ್ತು. ಸಾಷ್ಟಾಂಗವೆರಗುವದಾಯಿತು. ಇನ್ನೇನು ಮಾಡಬೇಕೆನ್ನುವಿರಿ? ನಿಮ್ಮ ಈ ನಡತೆಗಳಿಂದ ನನ್ನ ಮಾನವು ಪೇಟೆಯಲ್ಲಿ ಮಾರಿ ಹೋಗಿದೆ. ನನ್ನ ಮಾತು ಅಂತಿರಲಿ; ನೀವು ಆ ಸಾಧ್ವೀರಮಣಿಯಾದ ರಮಾದೇವಿಯ ಸುತ್ತುಯಾಕೆ ಗಂಟುಬಿದ್ದಿರುವಿರಿ? ನಿಮ್ಮ ಕರ್ತವ್ಯಪ್ರಭಾವದಿಂದ ನಿಮಗೂ ನನಗೂ ನೌಕರಿ ದೊರೆಯಿತು. ಮನೆಯಲ್ಲಿದುಡ್ಡು-ದುಗ್ಗಾಣಿಯಾಯಿತು. ಬೆಳ್ಳಿ-ಬಂಗಾರವಾಯಿತು. ಆ ಸಾಧ್ವಿಯ ಶೀಲವನ್ನು ಸೂರೆಗೈದು ಏನು ಸಂಪಾದಿಸಬೇಕೆನ್ನುವಿರಿ?'

'ಅಡವಿ!' ರಾಧಾದೇವಿಯು ಸಂತಾಪದಿಂದ—'ನನ್ನ ಕೆಲಸದಲ್ಲಿ ಕೈ ಹಾಕಬೇಡೆಂದು ನಿನಗೆ ಎಷ್ಟು ಸಾರೆ ಹೇಳಿದರೂ ನಾಚಿಕೆ ಬರಲಿಲ್ಲ. ನನ್ನ ಪುಣ್ಯವನ್ನುಣ್ಣುತ್ತ ನನ್ನಮೇಲೆಯೇ ತಿರುಗಿ ಬೀಳುವೆಯಾ? ನಿನ್ನನ್ನು ಅನ್ನಕ್ಕೆ ಮಾರ್ಗ ಮಾಡಿದವರು ಯಾರು? ಏನೋ ಹೆಸರಿಗೆ ಗಂಡನಾಗಿರುವೆ ಎಂದು ಧರ್ಮಕ್ಕೆ ಕಟ್ಟುಬಿದ್ದು, ನಿನ್ನನ್ನು ಅನ್ನಕ್ಕೆ ಹಚ್ಚಿದೆನು. ನಿನ್ನನ್ನು ನಚ್ಚಿದ್ದರೆ ಕುರ್ಚಿಯ ಬದಲು ಕುರ್ಚಿಗೆ ಬರುತ್ತಿತ್ತು. ನಿನ್ನ ಕೈಯಲ್ಲಿ ಲೆಕ್ಕಣಿಕೆಯ ಬದಲು ಗುದ್ದಲಿ ಬರುತ್ತಿತ್ತು. ತಿಂದುಂಡು ಸುಖದಿಂದ ಅಡ್ಡಾಡಲಿಕ್ಕೆ ನಿನಗೇನು ಧಾಡಿಯಾಗಿದೆ? ಯಾಕೆ, ನಿನ್ನ ದೈವ ಕಾಡುತ್ತದೇನು? ನಾನು ಮನಸ್ಸಿನ ಮೇಲೆ ತೆಗೆದುಕೊಂಡರೆ ನಿನ್ನನ್ನು ಮೊದಲಿನ ಮನೆಗೆ ಹಚ್ಚೇನು! ಆಂ! ಹೇಗೆ ಕಾಣುವದು? ನನ್ನ ಪುಣ್ಯ ತಿಂದುಂಡು ನನ್ನ ಮೇಲೆಯೇ ಹೇಗೆ ತಿರುಗಿ ಬೀಳುವನು ಶೂರ! ನಿನ್ನ ಗಂಡತನವನ್ನಂತೂ ನಾನು ಎಂದೂ ಮನ್ನಿಸುವದಿಲ್ಲ. ನಿನ್ನ ಹೆಂಡತಿಯೆಂದು ಹೇಳಿಕೊಳ್ಳಲಿಕ್ಕೆ ನನಗೆ ಹೇಸಿಕೆಯಾಗಿದೆ. ಇಂತಹ ಸ್ಕೂಲಮಿಸ್ಟ್ರೆಸ್ಸಳ ಗಂಡನೆಂದೆನಿಸಿಕೊಳ್ಳುವದು ನಿನಗೇ ಗೌರವವು. ನಿನ್ನೊಡನೆ ನಾನು ಒಮ್ಮೆ ಮದುವೆಯಾಗಿರುವೆನೆಂದು ಈ ಗೌರವವಾದರೂ ದೊರಕಲಿ ಅನ್ನುತ್ತ ದೊಡ್ಡ ಮನಸ್ಸು ಮಾಡಿದ್ದೇನೆ. ಬೇಡವಾದರೆ ಹೇಳು; ಇಂದೇ ಫಟಸ್ಫೋಟ!'

ಅಡವೀರಾಯನಿಗೆ ಭೂಮಿಯೇ ಸ್ಫೋಟವಾದಂತಾಯಿತು. ಮೆಟ್ಟಿಬಿದ್ದು ಕೆಳಗೆ ನೋಡಿದನು. ಅಲ್ಲಿಯ ಭೂಭಾಗವು ಯಥಾಸ್ಥಿತವಿತ್ತು. ಇದು ತನ್ನ ಧರ್ಮಪತ್ನಿಯ ಮುಖಸ್ಫೋಟವೆಂದು ಬಗೆದು, ಅವನು ಎದೆಯನ್ನು ಗಟ್ಟಿಮಾಡಿಕೊಂಡನು.

'ರಾಧಾದೇವಿ!' ಅಡವೀರಾಯನು ಕೈ ಜೋಡಿಸಿ—'ಹಿಂದೆ ಆದದ್ದು

ಆಗಿ ಹೋಯಿತು. ನಿನ್ನ ಅಂತರಂಗವೂ, ಅಂತಃಪುರ ರಂಗವೂ ಬೇಕಾದ ಹಾಗಿರಲಿ; ಬಹಿರಂಗಕ್ಕಾದರೂ ಗಂಡ-ಹೆಂಡತಿಯಾಗಿರೋಣ. ನಾನೂ ಒಬ್ಬ ಶಿಕ್ಷಕನಿರುವೆನು ನನ್ನ ಈ ಕೊನೆಯ ವಿನಂತಿಯನ್ನು ಮನ್ನಿಸು. ನೀವು ಕೆಟ್ಟಿರುವಿರೆಂದು ನೆಟ್ಟಗಿದ್ದವರನ್ನು ಕೆಡಿಸಬೇಡಿರಿ. ಸಂತೆಯ ಸೂಳೆಯ ರಂತೆ ವ್ಯವಹಾರವಿಡದೆ, ಗ್ರಾಮವೇಶ್ಯೆಯರಂತೆ ವ್ಯವಹಾರವಿಟ್ಟರೆ ಅಷ್ಟೇ ಸಂತೋಷ. ದೇವಿ, ದಯದೋರಿರಿ. ಇನ್ನು ಮೇಲೆ ರಮಾದೇವಿಯ ಗೊಡವೆಗೆ ಹೋಗಬೇಡಿರಿ. ನಿಮಗೆ ಸಾಷ್ಟಾಂಗ ಪ್ರಣಿಪಾತಗೈಯುವೆನು.'

ಅಡವೀರಾಯನು ರಾಧಾದೇವಿಯ ಕಾಲುಗಳನ್ನು ಹಿಡಿದನು. ಪರ ಕ್ಷಣದಲ್ಲಿ ಅವಳು ಅವನನ್ನು ಜಾಡಿಸಿ ಒದ್ದಳು!

'ಪತಿಸೇವಾ ಪರಾಯಣಳೆ! ನಿನ್ನಿಂದ ಪತಿಸೇವೆಯು ಇಂದು ಚನ್ನಾಗಿ ಘಟಿಸಿತು. ರಾಧೆ! ನಿನ್ನ ಕರ್ಮದ ಫಲವು ನಿನ್ನನ್ನು ತಿನ್ನದ ಬಿಡುವದೆ? ಸಾಧ್ವೀಜನರ ಬಿಸಿಯುಸಿರು ನಿನ್ನನ್ನು ಬೇಯಿಸದೆ ಬಿಡುವದೆ? ಸ್ವೈರಾಚಾರಿಣಿ ಯಾದ ರಾಧೆ! ಜಾರಶಿಖಾಮಣಿ ರಾಧೆ! ನಿನ್ನಂತಹ ಪತಿದ್ರೋಹಿಗಳು ಕೊನೆಗೆ ದುರ್ಮರಣ ಹೊಂದಿದ ದೃಷ್ಟಾಂತಗಳಿರುವವು ನೀನೂ ಅದೇ ಸ್ಥಿತಿ ಯನ್ನು ಹೊಂದುವದು ಖಂಡಿತ!'

ಅಡವೀರಾಯನ ಉದ್ಗಾರದಿಂದ ರಾಧಾದೇವಿಯ ಮಾನ ಮಹಾ ಮೇರುವಿಗೆ ಆಘಾತವಾಯಿತು ಅವಳು ಸಿಟ್ಟಿನಿಂದ ಉರಿದೆದ್ದು—'ಅಡವಿ! ನೀನು ನನ್ನಂತಹ ಮಾನವಂತೆಯ ಅಪಮಾನಗೊಳಿಸಿ, ಕಷ್ಟಕ್ಕೆಗುರಿಯಾದೆ! ನನಗೆ ಏಕವಚನದಿಂದ ಮಾತಾಡಲಿಕ್ಕೆ ನಿನಗೆ ಧೈರ್ಯವಾಯಿತೆ? ಇಡೀ ಸಂಸ್ಥಾನದ ವಿದ್ಯಾಸಂಸ್ಥೆಯ ಮುಖ್ಯಾಧಿಕಾರಿಗಳಾದ ಕೃಷ್ಣರಾಯರೊಡನೆ ಕೈಗೆ ಕೈ ಹಿಡಿದು ತಿರುಗಾಡುತ್ತಿರುವವಳಿಗೆ ಅಪಮಾನವೆ? ಅವರ ಸರಿ ಜೋಡಾಗಿ ಮೋಟರಿನಲ್ಲಿ ಕುಳಿತುಕೊಳ್ಳುವವಳಿಗೆ ಅಪಮಾನವೆ! ದೊಡ್ಡ ದೊಡ್ಡ ವಕೀಲರಿಂದಲೂ, ಅದಿಕಾರಿಗಳಿಂದಲೂ ನಮಸ್ಕಾರ ಮಾಡಿಸಿಕೊಳ್ಳು ತ್ತಿರುವ ಈ ರಾಧಾದೇವಿಗೆ ಅಪಮಾನವೆ? ವಿಜಯನಗರದ ಮುಖ್ಯ ವಿದ್ಯಾ ಲಯದ ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳಾದ ನನಗೆ ಅಪಮಾನವೆ! ಅಡವಿ! ಕಟ್ಟ ಡವಿ!! ಕೆಟ್ಟಡವಿ!!! ನಿನಗೆ ನನ್ನ ಸಾಮರ್ಥ್ಯವನ್ನು ತೋರಿಸುತ್ತೇನೆ ಅಡವೀ ರಾಯನಾಗಿ ಕುರ್ಚಿಯ ಮೇಲೆ ಕುಳಿತ ನಿನ್ನನ್ನು ಎಡಗಾಲಿನಿಂದೊದ್ದು, ಕಾಫಿ-ಉಪಹಾರ ಗೃಹದಲ್ಲಿ ಪೇಲೆ-ತಟ್ಟೆಗಳನ್ನು ತೊಳೆಯುವ ಅಡವಿಯನ್ನೇ ಮಾಡದಿದ್ದರೆ, ನಾನು ಸ್ಕೂಲ ಮಿಸ್ಟ್ರೆಸ್ಸಳೇ ಅಲ್ಲ! ನಿನ್ನ ಹೆಸರಿನಿಂದ ಮೆರೆ ಯುವ ಈ ಕುಂಕುಮ-ಮಾಂಗಲ್ಯಗಳನ್ನು ಇಂದೇ ತ್ಯಜಿಸುವೆನು.'

ರಾಧಾದೇವಿಯು ಹೀಗೆ ನುಡಿದವಳೇಎಡಗೈಯಿಂದ ಹಣೆಯ ಕುಂಕುಮವನ್ನು ತೊಡೆದು ಹಾಕಿ, ಬಲಗೈಯಿಂದ ಮಾಂಗಲ್ಯವನ್ನು ಕಿತ್ತು ಅಡವೀರಾಯನ ಮೇಲೆ ಚಲ್ಲಿದಳು ನಂತರದಲ್ಲಿ ಅವಳು—'ನೀನು ಇಂದೇ ಮನೆಯಿಂದ ಹೊರಡು. ಈ ಮನೆಯಲ್ಲಿ ನಿನ್ನ ಬಾಧ್ಯತೆಯ ಒಂದು ಕಾಸಿನ ಒಡವೆ ಸಹ ಇಲ್ಲ. ನಿನ್ನ ಬಾಧ್ಯತೆಯ ಮಾಂಗಲ್ಯವನ್ನು ಕೊಟ್ಟುಬಿಟ್ಟಿರುವೆನು. ಅರೆಕ್ಷಣ ನಿಲ್ಲದೆ ತೆರಳು.'

'ರಾಧಾ!' ಅಡವೀರಾಯನು ಕೋಪಾವೇಶದಿಂದ—'ನೀನು ನಿರ್ಲಜ್ಜಳು! ಕುಲಟೆಯು! ಸ್ವೈರಿಣಿಯು! ನಾನು ನಿನ್ನನ್ನು ಅವಲಂಬಿಸಿ ಬಾಳಿರುವೆನೆಂದು ತಿಳಿದಿರುವೆಯಾ!'

'ಅಪಮಾನ! ಈ ಸ್ಕೂಲ ಮಿಸ್ಟ್ರೆಸ್ಸಳ ಅಪಮಾನ! ಅಡವೀ, ನೀನು ಆಡಿದ ದುರ್ಭಾಷಣಗಳಿಗಾಗಿ ಪ್ರಾಯಶ್ಚಿತ್ತ ಹೊಂದುವೆ. ನಾನು ನಿನ್ನ ಮೇಲೆ ಮಾನ ಹಾನಿಯ ಫಿರ್ಯಾದಿ ಮಾಡಿ ನಿನ್ನನ್ನು ಸೆರೆಮನೆಯಲ್ಲಿ ಕಾಣಿಸುವೆನು. ನಿನ್ನ ಯೋಗ್ಯತೆಯೇನು! ನನ್ನ ಯೋಗ್ಯತೆಯೇನು! ನಾಳೆ ಚಹಾ-ಕಾಫಿ ಹೋಟೆಲಿನಲ್ಲಿ ಕಪ್ಪು-ಬಸಿಗಳನ್ನು ತೊಳೆಯುವವನಾದ ನೀನು, ಈ ಘನವಂತೆ ಸ್ಕೂಲ ಮಿಸ್ಟ್ರೆಸ್ಸಳ ಅಪಮಾನ ಮಾಡಿದೆಯಾ? ಅಡವಿ! ಇದರ ಪಾರಿಪತ್ಯವನ್ನು ಕಾಣುತ್ತೇನೆ. ಸೆರೆಮನೆಯನ್ನು ಅವಲಂಬಿಸುವವನಾದ ನೀನು, ನನ್ನನ್ನು ಹೇಗೆ ಅವಲಂಬಿಸುವೆ?"

ರಾಧಾದೇವಿಯು ಹೀಗೆ ನುಡಿಯುವಷ್ಟರಲ್ಲಿ ಕೃಷ್ಣರಾಯರ ಸವಾರಿಯ ಆಗಮನವಾಯಿತು. ಕೂಡಲೆ ರಾಧಾದೇವಿಯು ಪತಿಯು ಆಡಿದ ಮಾತುಗಳನ್ನೆಲ್ಲ ಹೇಳಿದಳು. ಅಡವೀರಾಯನೂ ಎಲ್ಲ ಸಂಗತಿಗಳನ್ನು ತಿಳಿಸಿದನು. ಅವರ ವ್ಯಾಜ್ಯದ ಸಂಗತಿಗಳ ಬಗ್ಗೆ ಕೃಷ್ಣರಾಯರು ಅರ್ಥಗಳಿಗೆ ವಿಚಾರ ಮಾಡಿದರು. ಇಬ್ಬರ ಬಿಡುಗಡೆಯ ಪತ್ರ ಮಾಡಿಸಿಬಿಡಬೇಕೆಂಬ ಯೋಚನೆಯು ಅವರ ಮನಸ್ಸಿನಲ್ಲಿ ಹುಟ್ಟಿತು; ಆದರೆ ಹಾಗೆ ಮಾಡುವದು ಯೋಗ್ಯವಲ್ಲವೆಂದು ಹಿಂದಿನಿಂದ ಅವರಿಗೆ ತಿಳಿಯಿತು. ಆ ದಂಪತಿಗಳು ಅಂತರಂಗದಿಂದ ಘಟಸ್ಫೋಟ ಹೊಂದಿದವರಂತೆಯೇ ಇದ್ದು ಬಹಿರಂಗದ ಘಟಸ್ಫೋಟ ಮಾಡಿದರೆ, ಸಮಾಜವು ತಮ್ಮ ಕಡೆಗೆ ಸದ್ಯಕ್ಕಿಂತಲೂ ಹೆಚ್ಚಾಗಿ ಕುತ್ಸಿತ ದೃಷ್ಟಿಯಿಂದ ನೋಡತೊಡಗುವದೆಂದು ಅವರ ಕಲ್ಪನೆಯಾಯಿತು. ರಮೆಯಂತಹ ನವಯೌವನಪೂರ್ಣ ರೂಪವತಿಯು ಸ್ವಾಧೀನವಾದಮೇಲೆ, ಸಿವಾಳಿಯಂತಾಗುವ ರಾಧೆಯನ್ನು ಕೊರಳಿಗೆ ಹಾಕಿಕೊಳ್ಳುವದರಲ್ಲಿ ಜಾಣತನವಿಲ್ಲೆಂದು ಆ ಕುಶಾಗ್ರಬುದ್ಧಿಯ ಕೃಷ್ಣರಾಯರು ಧೋರಣ ಕಟ್ಟಿದರು.

ಆಗ ಅವರು ಶಾಂತಸ್ವರದಿಂದ– ರಾಧಾದೇವಿಯವರೆ, ಅಡವೀರಾಯರೆ, ನೀವು ಇದೇನು ಗೊಂದಲವೆಬ್ಬಿಸಿರುವಿರಿ? ದಂಪತಿಗಳ ವ್ಯಾಜ್ಯವು ಇಷ್ಟು ವಿಕೋಪಕ್ಕೆಹೋಗಬಾರದು. ರಾಧಾದೇವಿ, ನೀವು ತಪ್ಪುತ್ತಿರುವಿರಿ. ಅಡವಿ ರಾಯರು ಅಶಿಕ್ಷಿತರೆಂಬದನ್ನು ತಿಳಿದೂ ತಿಳಿದು ಅವರ ಬಾಯಿಗೆ ಹತ್ತುವ ದುಂಟೆ? ಅವರು ಹುಂಬರು. ನಿಮ್ಮ ಪುಣ್ಯದಿಂದ ನೌಕರಿ ಹತ್ತಿ, ಸುಧಾರಿಸಿ ದವರ ಮಾಲಿಕೆಯಲ್ಲಿ ಗಣಿಸಲ್ಪಡುತ್ತಿರುವರೆಂದು ಅವರನ್ನು ನಿಜವಾಗಿಯೇ ಸುಶಿಕ್ಷಿತರೆಂದು ತಿಳಿಯಲಾದೀತೆ? ಅಡವೀರಾಯರೆ, ನೀವುಈಗರಾಧಾದೇವಿ ಯವರ ಅನ್ನ ಉಣ್ಣುತ್ತಿರುವಿರಿ. ಉಂಡ ಮನೆಯ ಜಂತಿಗಳನ್ನೆಣಿಸಬಹುದೆ? ನಿಜವಾಗಿ ಹೇಳಬೇಕಾದರೆ, ಇವರು ಒಮ್ಮೆಬಿಟ್ಟುಹತ್ತುಸಾರೆಒದ್ದರೂ ನೀವು ಸಿಟ್ಟಿಗೇಳುವ ಕಾರಣವಿಲ್ಲ. ಏನು ತಪ್ಪು? ಅನ್ನದಾತರು! ನೀವು ಬಾಯಿಗೆ ಬಂದಂತೆ ಮಾತಾಡಿ ಮಾನಧನರಾದ ಇವರ ಮರ್ಯಾದೆ ತೆಗೆದಿರುವಿರಿ. ರಾಧಾದೇವಿಯವರೆಂದರೆ ಯಾರೆಂದು ತಿಳಿದಿರುವಿರಿ? ದೊಡ್ಡ ಶಾಲೆಯ ದೊಡ್ಡ ಶಿಕ್ಷಕರಿರುವರು. ಮುಂದೆ ಹೆಣ್ಣು ಹುಡುಗೆಯರ ಶಾಲೆಗಳ ಉಪ ಪರೀಕ್ಷಕರ ಅಧಿಕಾರವೂ ದೊರೆಯತಕ್ಕದ್ದಿರುವದು. ನೋಡಿರಿ, ಇಂತಹ ಅಧಿಕಾರ ಗೌರವಾನ್ವಿತರಾದ ರಾಧಾದೇವಿಯವರಿಗೆ ಕುತ್ಸಿತ ಮಾತುಗಳ ನ್ನಾಡಿ ಎಷ್ಟು ತಪ್ಪು ಮಾಡಿರುವಿರಿ? ಇವರ ವ್ಯಭಿಚಾರವನ್ನು ನೀವು ಎಂದು ಕಂಡಿರುವಿರಿ? ಇವರು ಸರಕಾರೀ ನೌಕರರಿರುವರು. ಗಂಡಸರೊಡನೆ ಸ್ನೇಹ ಬೆಳೆಯಿಸುವ ಪ್ರಸಂಗವುಂಟು. ಗಂಡಸರೊಡನೆ ತಿರುಗಾಡಿದರೆ ಅಥವಾ ಪ್ರವಾಸ ಮಾಡಿದರೆ ಇಲ್ಲವೆ ನಾಟಕ–ಚಿತ್ರಪಟಗಳಿಗೆ ಹೋದರೆ, ಅದಕ್ಕೆ ನೀವು ವ್ಯಭಿಚಾರವೆನ್ನುವಿರಾ? ನಾನು ಈ ರಾಧಾದೇವಿಯವರೊಡನೆ ಇವರ ಕೋಣೆಯಲ್ಲಿ ಒಮ್ಮೊಮ್ಮೆ ಮಧ್ಯರಾತ್ರಿಯತನಕ ಮಾತಾಡುತ್ತ ಕುಳಿತು ಕೊಳ್ಳುತ್ತೇನೆ. ಇಂತಹ ಕೃತಿಗಳಿಗೆ ವ್ಯಭಿಚಾರವೆನ್ನುವಿರಾ? ಹೇಳಿರಿ, ಈ ಮಾತಿನ ಉತ್ತರ ಕೊಡಿರಿ."

'ಛೇ! ರಾವಸಾಹೇಬರೆ, ನಿಮ್ಮಂತಹರಿಗಂದರೆ ಬಾಯಲ್ಲಿ ಹುಳಗಳೇ ಬಿದ್ದಾವು ನಿಮ್ಮಂತಹ ಪರನಾರೀ ಸೋದರರನ್ನು ನಾನು ಇದುವರೆಗೂ ಕಂಡಿಲ್ಲ. ಹೊಟ್ಟೆಯ ಪಾಡಿಗಾಗಿ ವಿಜಯನಗರಕ್ಕೆ ಬಂದು, ಕಾಣುವದು ಕಂಡೆನು; ಉಣ್ಣುವದು ಉಂಡೆನು. ನೀವು ಈ ವೇವಿಯವರೊಡನೆ ಮಧ್ಯ ರಾತ್ರಿಯ ವರೆಗೆ ಏಕೆ, ಬೆಳತನಕ ಮಾತು-ಕಥೆಗಳಾಡುತ್ತ ಕುಳಿತರೂ ಹೆಸ ರಿಡುವ ಎದೆ ಯಾವನದು? ನೀವು ನೀತಿವಂತರಿರುವಿರಿ ನಿಮ್ಮನ್ನು ಬಿಟ್ಟು ಇವಳು ಗೋವರ್ಧನರಾಯರಂತಹ ವಕೀಲರ ಬಲೆಗೆ ಬೀಳುತ್ತಿರುವಳು.

ಅದಕ್ಕಾಗಿಯೇ ದುರ್ಭಾಷಣವಾಡಿದೆನು.'

'ರಾಧಾದೇವಿ!' ಕೃಷ್ಣರಾಯರು ಸಿಟ್ಟಿನಿಂದ—'ನೀವು ಇನ್ನೂ ಮೊದಲಿನ ಚಾಳಿಯನ್ನು ಬಿಟ್ಟಿಲ್ಲ.'

'ರಾಯರೆ, ಈ ಹೊಟ್ಟೆಕಿಚ್ಚಿನವನು ಅಗಲಾರದ್ದಕ್ಕಾಗಿ ಏನಾದರೂ ಅನ್ನುತ್ತಾನೆ. ನಮ್ಮ-ನಿಮ್ಮೊಳಗಿನ ಸ್ನೇಹವು ಇವನಿಗೆ ಸಹನವಿಲ್ಲ. ಪರಸ್ಪರರಲ್ಲಿ ನೆಲೆಗೊಂಡ ಪ್ರೇಮವನ್ನು ಕೆಡಿಸಬೇಕೆಂದು ಇವನು ಹಂಚಿಕೆ ತೆಗೆದಿರುವನು.' ಎಂದು ರಾಧಾದೇವಿಯು ನುಡಿದು, ಪತಿಯನ್ನು ಕುರಿತು—'ಅಡವೀ, ನೀನು ಇಲ್ಲದ್ದೊಂದು ಮಾತಾಡಿ ಮುಂದಿನ ಮೋರೆಗೆ ಕಪ್ಪು ಬಳಿಯಬೇಕೆಂದಿರುವೆಯಾ?'

'ರಾಧೇ! ನಾನು ಸುಳ್ಳಾಡು....'

'ನೋಡಿರಿ! ರಾಯರೆ, ಇವನು ಹೇಗೆ ಏಕವಚನದಿಂದ ಮಾತಾಡುವನು! ನೀನು, ತಾನು, ರಾಧೆ, ಕುಲಟೆ ಮೊದಲಾದ ಶಬ್ದಗಳ ಸುರಿಮಳೆಯನ್ನೇ ಸುರಿಸತೊಡಗಿರುವನು.'

'ಅಡವೀರಾಯರೇ, ದೊಡ್ಡವರಿಗೆ ಹಾಗೆ ಮಾತಾಡಬೇಡಿರಿ. ಮಂದಿ ಕೇಳಿದರೆ ಅಶಿಕ್ಷಿತರೆಂದಾರು.' ರಾಯರು ಸೂಚಿಸಿದರು.

'ಛೀ ಹಾಕಿರಿ, ಬುದ್ಧಿ ಒರಲಿ!' ಎಂದು ರಾಧಾದೇವಿಯು ಪತಿಯ ಮೋರೆಯ ಕಡೆಗೆ ಕೈ ತಿವಿದು ಆಕ್ಕಸದಿಂದ ನುಡಿದಳು.

'ರಾಧಾದೇವಿ, ಇನ್ನು ಮಾತು ಬಳೆಯಿಸಬೇಡಿರಿ. ಅಡವೀರಾಯರ ತಪ್ಪು ಕ್ಷಮಿಸಿರಿ. ಅವರು ನಿಮಗೆ ಶರಣಾಗತರಾಗಿರುವರು. ಮೊರೆ ಹೊಕ್ಕವರನ್ನು ರಕ್ಷಿಸಬೇಕೆಂಬ ನೀತಿಯು ಶಿಬಿಚಕ್ರವರ್ತಿಯ ಕಥೆಯಿಂದ ನಿಮಗೆ ಗೊತ್ತಿರಲಿಕ್ಕೆ ಬೇಕು.'

'ಇನ್ನು ಮೇಲೆ ನನಗೂ ಅವನಿಗೂ ಸಂಬಂಧವಿಲ್ಲ. ಅವನು ಕಟ್ಟಿದ ಮಾಂಗಲ್ಯವನ್ನು ಕಿತ್ತು ಅವನ ಮೇಲೆ ಚಲ್ಲಿರುವೆನು. ಕುಂಕುಮ-ತಿಲಕವನ್ನೂ ತೊಡೆದುಹಾಕಿರುವೆನು.'

'ಛೀ! ಹಾಗೆ ಮಾಡಬೇಡಿರಿ.' ಎಂದು ನುಡಿದು, ಅಡವೀರಾಯನನ್ನು ಕುರಿತು—'ಮಾಂಗಲ್ಯವನ್ನು ಇತ್ತ ಕೊಡಿರಿ. ಕುಂಕುಮ ಕರಡಿಗೆಯನ್ನು ತೆಗೆದುಕೊಂಡು ಬರ್ರಿ. ನಾನು ನಿಮ್ಮ-ನಿಮ್ಮೊಳಗಿನ ನ್ಯಾಯವನ್ನು ಬಗೆಹರಿಸುವೆನು.'

ಅಡವೀರಾಯನು ಮಾಂಗಲ್ಯವನ್ನು ಕೃಷ್ಣರಾಯರ ಕೈಯಲ್ಲಿ ಕೊಟ್ಟು, ಕುಂಕುಮ ಕರಡಿಗೆಯನ್ನು ತರಲಿಕ್ಕೆ ಒಳಗೆ ಹೋದನು. ಆಗ ಕೃಷ್ಣ

ರಾಯರು ರಾಧಾದೇವಿಯ ಕಿವಿಯಲ್ಲಿ ಏನೋ ಹೇಳಿದರು. ರಾಜಿಯಾದರೆ ದಿನಚರ್ಯೆಗೆ ಬಾಧೆಯಿಲ್ಲವೆಂದು ಅವರು ಹೇಳಿರಬಹುದು.

ಅಡವೀರಾಯ ಕುಂಕುಮ ಕರಡಿಗೆಯನ್ನು ಕೃಷ್ಣರಾಯರ ಕೈಯಲ್ಲಿ ಕೊಟ್ಟನು. ಆಗ ಸಾಹೇಬರು ಅವನನ್ನು ಕುರಿತು—'ಅಡವೀರಾಯರೇ, ನೀವು ರಾಧಾದೇವಿಯವರಿಗೆ ತಪ್ಪಾಯಿತೆಂದು ಬೇಡಿಕೊಳ್ಳಿರಿ.'

'ಸಾಹೇಬರೆ, ಎಂದು ಲಗ್ನವಾದೆನೋ ಅಂದೇ ತಪ್ಪಾಗಿರುವದು. ಆಗಲಿ. ನಿಮ್ಮ ಮಾತ್ರಿಗಾದರೂ ಏಕೆ ಅಮಾನ್ಯತೆ ಮಾಡಬೇಕು?' ಎಂದು ನುಡಿದು, ಮೊಳಕಾಲೂರಿ ಕೈಜೋಡಿಸಿ—'ರಾಧಾದೇವಿಯವರೆ, ಈ ಅಜ್ಞಾನಿಯ ತಪ್ಪನ್ನು ಕ್ಷಮಿಸಿರಿ!'

'ಪರವಿಲ್ಲ. ಏಳು, ಅಡವಿ, ಹೀಗೆ ನಡೆದರೆ ಯಾರು ಅಲ್ಲವೆಂದಾರು?' ಎಂದು ರಾಧಾದೇವಿಯು ಅನುಗ್ರಹ ಮಾಡಿದಳು.

'ರಾಧಾದೇವಿ!' ಕೃಷ್ಣರಾಯರು ರಾಧಾದೇವಿಯ ಹಣೆಗೆ ಕುಂಕುಮ ಬಟ್ಟಿಟ್ಟು ಕೊರಳಿಗೆ ಮಾಂಗಲ್ಯ ಕಟ್ಟುತ್ತ-'ಅಂದು ಕಟ್ಟಿದ್ದು ಸುಳ್ಳು, ಇಂದಿನ ಕಟ್ಟೇ ನಿಜವು. ನಾನು ಅಡವೀರಾಯನಿಂದಲೇ ಕಟ್ಟಿಸುತ್ತಿದ್ದೆನು ಈಗ ನಿಮ್ಮ-ಅವರೊಳಗೆ ವಿತುಷ್ಟತೆಯುಂಟಾಗಿದೆ. ಅವರು ಕಟ್ಟಲಿಕ್ಕೂ ನೀವು ಕಟ್ಟಿಸಿಕೊಳ್ಳಲಿಕ್ಕೂ ಒಪ್ಪಲಿಕ್ಕಿಲ್ಲೆಂದು ತಿಳಿದು, ಮಧ್ಯಸ್ಥನಾಗಿದ್ದ ನಾನೇ ಕಟ್ಟಿರುವೆನು.'

'ರಾಯರೆ, ಅವನು ಹೇಗೆ ಕಟ್ಟುವನು? ಅವನು ನನ್ನ ಮೈ ಕೈ ಮುಟ್ಟಿ ಬಂದರೆ, ಅವನನ್ನು ಸರಕಾರಕ್ಕೆ ಹಿಡಿಸೇನು.'

'ದೇವಿಯವರೆ, ನಾನೇಕೆ ನಿಮ್ಮ ಮೈ ಕೈ ಮುಟ್ಟಬರಲಿ?' ಎಂದು, ಅಡವೀರಾಯನು ನುಡಿದು—'ನಿನ್ನ ಮೈ-ಕೈಗಳನ್ನು ಹೊಲೆಯರು ಮುಟ್ಟಲಿ!' ಎಂದು ಮನಸ್ಸಿನಲ್ಲೇ ಅಂದುಕೊಂಡನು.

'ಇನ್ನು ರಗಳೆ ಸಾಕುದೂಡಿರಿ. ಅಡವೀರಾಯರೆ, ನೀವು ನಿಮ್ಮ ಕೆಲಸಕ್ಕೆ ಹೋಗಿರಿ' ಎಂದು ಕೃಷ್ಣರಾಯರು ನುಡಿದು, ರಾಧಾದೇವಿಯ ಕೈ ಹಿಡಿದುಕೊಂಡು ವಿಲಾಸ ಮಂದಿರವನ್ನು ಹೊಕ್ಕರು ಅಡವೀರಾಯನು ಅವರನ್ನು ಕಣ್ಣುತಂಬ ನೋಡಿ ಕೃತಾರ್ಥನಾಗಿ, ಕಣ್ಣು ಮರೆಯಾದ ಕೂಡಲೆ ಮೆಲ್ಲಡೆಯಿಂದ ವಿಲಾಸ ಮಂದಿರದ ಬಾಗಿಲಿಗೆ ನಿಂತನು,

ನೌಕರಿಯು ಹಾಗು ಆಭರಣಗಳ ಆಶೆ ಹಚ್ಚಿ ರಮಾದೇವಿಯ ಮನ ಒಲಿಸುವ ಕಾರ್ಯವನ್ನು ಇಂದೇ ಮಾಡಲಿಕ್ಕೆ ಬೇಕೆಂದು ಕೃಷ್ಣರಾಯರು ಹೇಳಿದರು. ರಾಧಾದೇವಿಯು ಅವರಿಗೆ ಆಶ್ವಾಸನೆ ಕೊಟ್ಟಳು. ಈ

ಮಾತುಗಳು ಅಡವೀರಾಯನಿಗೆ ಕೇಳಿದವು. ಮುಂದೆ ಅವರು ಏನೇನು ಮಾತಾಡಿದರೆಂಬದು ಮಾತ್ರ ಅವನಿಗೆ ಕೇಳಿಸಲಿಲ್ಲ. ಅವನು ಅಲ್ಲಿ ಸಿಲ್ಲಿಕ್ಕೆ ಹೇಸಿ, ಮನೆಯಿಂದ ಹೊರಬಿದ್ದನು.

——

## ಸ್ಕೂಲ ಮಿಸ್ಟ್ರೆಸ್ಸಳ ಕೊಲೆ!

ರಮಾದೇವಿಯು ತನ್ನ ಮಗುವಾದ ವಸಂತನನ್ನು ಎತ್ತಿಕೊಂಡು ಕಿಡಕಿಯ ಬಳಿಯಲ್ಲಿ ನಿಂತಿದ್ದಳು. ಉದಯೋನ್ಮುಖ ಸೂರ್ಯನ ಪ್ರಕಾಶಕಿರಣಗಳು ಮಗುವಿನ ಮುಖದ ಮೇಲೆ ಬಿದ್ದಿದ್ದವು. ಆ ಬಾಲಕನು ಸೂರ್ಯಬಿಂಬವನ್ನು ಕುತೂಹಲ ದೃಷ್ಟಿಯಿಂದ ನೋಡುತ್ತಲಿದ್ದನು. ಮುಂದೆ ಸ್ವಲ್ಪ ವೇಳೆಯಲ್ಲಿ ಸೂರ್ಯ ಮಂಡಲವು ಪ್ರಖರವಾಯಿತು. ಬಾಲಕನು ಕಣ್ಣು ಮುಚ್ಚತೊಡಗಿದನು. ಸುರೇಂದ್ರರಾಯನು ಮಂಚದಮೇಲೆ ಮಲಗಿ ಮಗುವಿನ ಮುಖ ನಿರೀಕ್ಷಣೆ ಮಾಡುತ್ತಲಿದ್ದನು ಸೂರ್ಯಕಿರಣಗಳಿಂದ ವಸಂತನು ಕಣ್ಣುಮುಚ್ಚತೊಡಗಿದ್ದನ್ನು ನೋಡಿ—'ವಸಂತನ ಕಣ್ಣುಕುಕ್ಕುತ್ತವೆ, ಇತ್ತ ತೆಗೆದು ಕೊಂಡು ಬಾ.' ಎಂದು ಪತ್ನಿಗೆ ಹೇಳಿದನು.

ರಮಾದೇವಿಯು ವಸಂತನನ್ನು ಪತಿಯ ಹಾಸಿಗೆಯ ಮೇಲೆ ಮಲಗಿಸಿ-'ಯಾಕೆ, ಇನ್ನೂ ಏಳುವದಿಲ್ಲವೇನು? ರವಿವಾರ ಎಂಟುಗಂಟೆಯಾಗುವ ವರೆಗೆ ಹಾಸಿಗೆ ಬಿಡಬಾರದೆಂದು ಸಂಕಲ್ಪ ಮಾಡಿರುವಂತೆ ತೋರುವದು. ದಿನಾಲು ಸೂರ್ಯೋದಯಕ್ಕೆ ಮುಂಚಿತವಾಗಿ ಏಳುವಿರಿ; ಆದರೆ ರವಿವಾರ ಮಾತ್ರ ಎಂಟು ಬಡೆಯುವ ವರೆಗೂ ಹಾಸಿಗೆಯನ್ನೇ ಬಿಡುವದಿಲ್ಲ ನಮ್ಮ ಮುದ್ದು ಕಂದ ವಸಂತನು ಅಗಲೆ ಎದ್ದು ಎಷ್ಟೋ ಕೆಲಸ ಮಾಡಿರುವನು.'

'ವಸಂತನು ಚಟವಟಿಕೆಯವನು.' ಎಂದು ಸುರೇಂದ್ರರಾಯನು ನುಡಿದು ವಸಂತನನ್ನುದ್ದೇಶಿಸಿ—'ಮರೀ, ಅಲ್ಲಿ ಮಾಡಿದಂತೆ ನನ್ನ ಗಾದಿಯ ಮೇಲೂ ಕೆಲಸ ಮಾಡಿ-ಗೀಡೀ ಮತ್ತೆ!' ಎಂದು ನುಡಿದು, ನಗತೊಡಗಿದನು.

'ಗಾದಿಯು ಕೆಟ್ಟು ಹೋಗುವದೇನು?' ಎಂದು ರಮಾದೇವಿಯು ನುಡಿದು, ಮಗನನ್ನು ಬಗಲಲ್ಲಿ ತೆಗೆದುಕೊಂಡು-'ಇಷ್ಟು ದಿನ ಮಾಡಿದಂತೆ ಇನ್ನು ಮೇಲೆಯೂ ಓರಣಮಾಡಹೋದರೆ ನಡೆಯುವದೆ?'

'ನಡೆಯುದೇನು? ಮಾಡಿದರೆ ನಡೆದೇ ನಡೆಯುವದು.' ಎಂದು ಸುರೇಂದ್ರರಾಯನು ನುಡಿಯುವಷ್ಟರಲ್ಲಿ—

'ಕರ್ನಾಟಕ ವೈಭವ—ಸ್ಕೂಲ ಮಿಸ್ಟ್ರೆಸ್ಸಳ ಕೊಲೆ-ಬೆಲೆ ಒಂದು ಆಣೆ'

ವೃತ್ತಪತ್ರಗಳನ್ನು ಮಾರುವ ಹುಡುಗನು ಸುರೇಂದ್ರರಾಯನ ಮನೆಯು ಮುಂದಿನ ಬೀದಿ ಹಿಡಿದು ಮೇಲಿನಂತೆ ಕೂಗುತ್ತ ನಡೆದಿದ್ದನು. ಅವನು ಹೇಳುತ್ತಿರುವ ಸುದ್ದಿಯನ್ನು ಕೇಳಿ ರಮಾದೇವಿಗೆ ವಿಸ್ಮಯವಾಯಿತು. ಆಗ ಅವಳು ಪತಿಯನ್ನು ಕುರಿತು-'ಸ್ಕೂಲ ಮಿಸ್ಟ್ರೆಸ್ಸಳ ಕೊಲೆ! ಯಾರ ಕೊಲೆ?'

'ವಿಜಯನಗರದಲ್ಲಿ 'ಸ್ಕೂಲ ಮಿಸ್ಟ್ರೆಸ್' ಎಂದು ಸಂಬೋಧಿಸಿಕೊಳ್ಳುವವಳು ರತ್ನಪುರದ ರಾಧಾದೇವಿಯೇ. ರಾಧಾದೇವಿಯ ಕೊಲೆಯೆ? ಛೇ! ರಮೆ, ಆ ಹುಡುಗನನ್ನು ಕರೆದು ವೃತ್ತಪತ್ರ ತೆಗೆದುಕೋ' ಎಂದು ನುಡಿದು, ಸುರೇಂದ್ರರಾಯನು ಹಾಸುಗೆಯಿಂದೆದ್ದು ಒಳಗೆ ಹೋಗಿ ಮುಖಮಾರ್ಜನ ಮುಗಿಸಿಕೊಂಡು ಬಂದನು. ರಮಾದೇವಿಯು ಕರ್ಣಾಟಕವೈಭವದ ಅಂಕನ್ನು ತೆಗೆದುಕೊಂಡು ಬಂದು ಪತಿಯ ಕೈಯಲ್ಲಿ ಕೊಟ್ಟಳು.

'ಯಾರ ಕೊಲೆಯಾಗಿದೆ?' ಎಂದು ಕೇಳುತ್ತ ಸುರೇಂದ್ರರಾಯನು ಪತ್ನಿಯು ತಂದ ವೃತ್ತಪತ್ರದಲ್ಲಿ ದೃಷ್ಟಿಯನ್ನಿರಿಸಿದನು.

'ಓದಿರಿ. ಭಯಂಕರವಾದ ಸುದ್ದಿಯು ಒರೆಯಲ್ಪಟ್ಟಿದೆ. ಸ್ಕೂಲ ಮಿಸ್ಟ್ರೆಸ್ ರಾಧಾದೇವಿಯ ಕೊಲೆಯೇ ಆಗಿದೆ!'

'ಆಂ! ಸ್ಕೂಲ ಮಿಸ್ಟ್ರೆಸ್ಸಳ ಕೊಲೆಯೆ?'

'ಹೌದು.'

ಸುರೇಂದ್ರರಾಯನು ಪತ್ರಿಕೆಯನ್ನೋದತೊಡಗಿದನು.

'ಸ್ಕೂಲ ಮಿಸ್ಟ್ರೆಸ್ಸಳ ಭಯಂಕರ ಕೊಲೆ!

ನಿನ್ನೆ ಮಧ್ಯರಾತ್ರಿ ಮೀರಿದ ಮೇಲೆ ಯಾವನೋ ದುಷ್ಟನು ಹುಡುಗೆಯರ ಒಂದನೇ ನಂಬರ ಶಾಲೆಯ ಮುಖ್ಯಶಿಕ್ಷಕಿಯರಾದ ರಾಧಾದೇವಿ ರತ್ನಪುರಿ ಇವರ ಮನೆಯನ್ನು ಹೊಕ್ಕು, ಅವರ ಮುಖದ ಮೇಲೆ ದ್ರಾವಕವನ್ನು ಸುರುವಿ, ವಿದ್ರೂಪಗೊಳಿಸುವ ಪ್ರಯತ್ನ ಮಾಡಿದನು. ಅವರ ಸರ್ವಾಂಗಕ್ಕೂ ಆ ಕೊಲೆಗಡಕನು ಕೈಗತ್ತಿಯಿಂದ ಇರಿದಿರುವನು. ರಾಧಾದೇವಿಯವರ ಆಕ್ರಂದನವನ್ನು ಕೇಳಿ ಸುತ್ತುಮುತ್ತಲಿನ ಮನೆಯ ಜನರು ಕೂಡಿದರು. ಅಷ್ಟರಲ್ಲಿ ಕೊಲೆಗಡಕನು ಓಡಿ ಹೋಗಿಬಿಟ್ಟಿದ್ದನು. ಸ್ಕೂಲ ಮಿಸ್ಟ್ರೆಸ್ಸರು ಅಸಾವಧಾವಸ್ಥೆಯಲ್ಲಿ ಬಿದ್ದಿದ್ದರು. ಅವರು ಆಗಿಂದಾಗ ಸರಕಾರೀ ರುಗ್ಣಾಲಯಕ್ಕೆ ಕಳುಹಿಸಲ್ಪಟ್ಟರು. ಅವರ ಮೈಮೇಲಿನ ಗಾಯಗಳು ಪ್ರಾಣಘಾತಕವಿರುವದರಿಂದ ಅವರ ಸ್ಥಿತಿಯು ಚಿಂತಾಜನಕವಿದೆ.

ಸ್ಕೂಲ ಮಿಸ್ಟ್ರೆಸ್ಸರ ಪರಿಚಯವು ಬಹು ಜನರಿಗೆ ಇರಬಹುದಾಗಿದೆ.

ಅವರ ವರ್ಚಸ್ಸು ವಿದ್ಯಾಸಂಸ್ಥೆಯಲ್ಲಿ ಚನ್ನಾಗಿದೆ. ಅವರ ವಯುಸ್ಸು ಮೂವತ್ತು-ಮೂವತ್ತೈದು ವರ್ಷದ್ದಿರಬಹುದು. ಕೊಲೆಯ ಪ್ರಯತ್ನವನ್ನು ಯಾರು ಮಾಡಿದರೆಂಬದು ಇನ್ನೂ ತಿಳಿದಿಲ್ಲ. ಯಾವನೊಬ್ಬ ನೀಚನು ಅವರ ಸೌಂದರ್ಯಕ್ಕೆ ಲುಬ್ಧನಾಗಿ. ಪಾಪವಾಸನೆಯಿಂದ ಇಂಥ ರಾಕ್ಷಸೀ ಕೃತ್ಯವನ್ನು ಮಾಡಿರಬಹುದೆಂದು ಅನುಮಾನಿಸಲಿಕ್ಕೆ ಮಾರ್ಗವಿದೆ.'

ಭಯಾನಕವಾದ ಈ ಸಂಗತಿಯನ್ನೋದಿ ಸುರೇಂದ್ರರಾಯನೂ ರಮಾದೇವಿಯೂ ದಿಙ್ಮೂಢರಾದರು. 'ಸ್ಕೂಲ ಮಿಸ್ಟ್ರೆಸ್ಸಳು ಕೊಲೆಗೆ ಈಡಾದ ಕಾರಣವೇನಿರಬಹುದು? ಯಾರು ಕೊಲೆ ಮಾಡಿರಬಹುದೆ'ಂಬ ಬಗ್ಗೆ ಅವರು ಆಲೋಚಿಸತೊಡಗಿದರು; ಆದರೆ ಈ ವಿಷಯದಲ್ಲಿ ಅವರಿಗೆ ಏನೂ ತೋಚಲಿಲ್ಲ. ಕೊಲೆಯ ದಿವಸ ಸಾಯಂಕಾಲಕ್ಕೆ ರಾಧಾದೇವಿಯು ರಮಾದೇವಿಯ ಭೆಟ್ಟಿಗೆ ಬಂದಿದ್ದಳು ಅವಳು ಕೃಷ್ಣರಾಯರ ಆದೇಶಾನುಸಾರವಾಗಿ ರಮಾದೇವಿಯ ಶೀಲ-ಸುವ್ರತಗಳ ಉದ್ಯಾಪನೆ ಮಾಡಿಸಬೇಕೆಂಬ ದೃಢ ನಿಶ್ಚಯವನ್ನು ಹೊಂದಿಯೆ ಬಂದಿದ್ದಳು. ಕೃಷ್ಣರಾಯರನ್ನು ಸಂತುಷ್ಟ ಪಡಿಸಿದರೆ, ಇಂದ್ರನ ಇಂದ್ರಾಣಿಯಂತೆಯೂ ಮೃಡನ ಮೃಡಾಣಿಯಂತೆಯೂ ಸುಖವಾಗುವದೆಂದು ಅವಳು ರಮಾದೇವಿಗೆ ದುರೂಪದೇಶ ಮಾಡಿದ್ದಳು ಸತೀಧರ್ಮಪರಾಯಣಳಾದ ರಮಾದೇವಿಯು ಈ ಪಾಪಮಯ ಉಪದೇಶವನ್ನು ಕೇಳಿ ಸಿಟ್ಟಾಗಿ, ಅವಳ ಸಮಾಚಾರವನ್ನು ಒಳಿತಾಗಿ ತೆಗೆದುಕೊಂಡಿದ್ದಳು. ಈ ಪ್ರಸಂಗವು ಘಟಿಸಿದ ದಿನವೇ ಅವಳ ಕೊಲೆಯಾದ ಯೋಗಾಯೋಗವನ್ನು ನೋಡಿ ಸುರೇಂದ್ರರಾಯನು ಬೆರಗಾದನು. ಅವನು ಪತ್ನಿಯನ್ನು ಕುರಿತು:—'ರಮೆ, ಪತಿವ್ರತೆಯ ಶಾಪನೇ ರಾಧಾದೇವಿಯನ್ನು ಮೃತ್ಯುಮುಖಕ್ಕೀಡು ಮಾಡಿತು. ಸಾಧ್ವಿಯರ ಶಾಪವಾಣಿಯಲ್ಲಿ ವಿದ್ಯುದ್ಗೋಲದ ಸಾಮರ್ಥ್ಯವಿರುವದು. ನಿನ್ನ ಶಾಪವೇ ಅವಳನ್ನು ಬಾಧಿಸಿರುವದು'

'ಬಾಧಿಸಲಿಕ್ಕೇ ಬೇಕು, ಪತಿವ್ರತೆಯರು ಉಚ್ಚರಿಸಿದ ಶಾಪವಾಣಿಯನ್ನು ಸತ್ಯಮಾಡಲಿಕ್ಕೆ ಪರಮಾತ್ಮನೇ ಬದ್ಧಕಂಕಣನಾಗಿರುವನು.'

ರಮಾದೇವಿಯ ಅಬಿಮಾನಯುಕ್ತವಾದ ಮಾತುಗಳನ್ನು ಕೇಳಿ, ಸುರೇಂದ್ರರಾಯನಿಗೆ ಅತ್ಯಾನಂದವಾಯಿತು. ಸಾಧ್ವೀಮಣಿಯಾದ ಪತ್ನಿಯೇ ದೊರೆತದ್ದರಿಂದ, ಅವನು ತನ್ನ ಸುದೈವವನ್ನು ಮನಸಾ ಕೊಂಡಾಡಿದನು. ರಮಾದೇವಿಯು ಗುಣ-ರೂಪಗಳಿಂದ ಅದ್ವಿತೀಯಳಾಗಿದ್ದಳು. ಅವಳು ಬಡ ಶಿಕ್ಷಕನ ಪತ್ನಿಯಾಗಿದ್ದರೂ, ಅವಳಲ್ಲಿಯ ಗುಣಗಳೇನೂ ಬಡವವಿದ್ದಿಲ್ಲ. ಅವಳು ಸೀತಾ-ಸಾವಿತ್ರಿಯರಂತೆ ಪ್ರಾತಃಸ್ಮರಣೀಯಳೂ, ಪೂಜ್ಯಳೂ ಆಗಿದ್ದಳು

"ಭಾಗ್ಯಶಾಲಿನಿಯೂ, ಅಧಿಕಾರ ಸಂಪನ್ನೆಯೂ ಆದ ರಾಧಾದೇವಿಯ ಪ್ರತೀಕಾರಕ್ಕಾಗಿ ಅನಧಿಕಾರಿಯಾದ ನಿನ್ನಿಂದ ಸಾಹಸ ಮಾಡುವದಾಗ ದಿದ್ದರೂ, ನಿನ್ನ ವಾಣಿಯು ಪಾತಿವ್ರತ್ಯ ಪ್ರವಾಹದಿಂದ ಅತ್ಯುಗ್ರವಾಗಿ, ಕೊಲೆ ಗಡಕನ ಕೈಯಲ್ಲಿ ಶಸ್ತ್ರರೂಪವನ್ನು ಹೊಂದಿ, ರಾಧಾದೇವಿಯ ಕಾಯವನ್ನು ಪ್ರವೇಶಿಸಿತು. ಪ್ರತಿವ್ರತೆಯರ ವಾಣಿಯು ಖಡ್ಗಧಾರೆಗಿಂತಲೂ ತೀಕ್ಷ್ಣವಿರುವದು" ಎಂದು ಸುರೇಂದ್ರರಾಯರು ಪತ್ನಿಯ ಗುಣಗಾನ ಮಾಡಿದನು.

"ಕೃಷ್ಣರಾಯರ ಆಸುರೀ ವಿಷಯಲಾಲಸೆಯನ್ನು ತೃಪ್ತಿಗೊಳಿಸಿ, ಅವರ ಅನುಗ್ರಹವನ್ನು ದೊರೆಕಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯಿಂದ ಪಾಪದ ಪುತ್ಥಳಿಯಾದ ರಾಧಾದೇವಿಯು ತನ್ನ ಪಾತಿವ್ರತ್ಯವನ್ನು ಸೂರೆಗೊಂಡದ್ದಲ್ಲದೆ, ಎಷ್ಟೋ ಜನ ಕುಲವಧುಗಳನ್ನು ವೇಶ್ಯೆಯರ ಮಾಲಿಕೆಯಲ್ಲಿ ಸೇರಿಸಿದಳು, ಅವಳ ಈ ವ್ಯಕ್ತಿತ್ವವನ್ನು ನೋಡಿ, ಯಾವಳೊಬ್ಬ ಶಿಕ್ಷಕಿಯ ಪತಿಯು ಸಂತಪ್ತನಾಗಿ ಅವಳ ಕೊಲೆ ಮಾಡಿರಬಹುದು" ಎಂದು ರಮಾದೇವಿಯು ತನ್ನ ಅಭಿಪ್ರಾಯವನ್ನು ಪತಿಗೆ ಸೂಚಿಸಿದಳು.

"ರಾಧಾದೇವಿಯ ನೀಚವ್ಯಕ್ತಿಯೇ ಅವಳಿಗೆ ಮೃತ್ಯುವಾಯಿತೆಂಬದರಲ್ಲಿ ಸಂದೇಹವಿಲ್ಲ. ರಮೆ, ಒಮ್ಮೆಯೇಕೆ, ನೂರು ಸಾರೆ ಕೊಲೆಮಾಡುವಂ-ತಹ ಪಾತಕಗಳು ಅವಳಿಂದ ಘಟಿಸಿರುವವು. ಮೊದಲೇ ನಗ್ನತಾಂಡವ ನಡೆಯಿಸಿದ್ದ ಕೃಷ್ಣರಾಯರು, ಆ ಕುಟಿಲಳ ಸಹಾಯದಿಂದ ಪವಿತ್ರವಾದ ಶಿಕ್ಷಣಸಂಸ್ಥೆಯನ್ನು ಕೃಷ್ಣನ ಗೋಕುಲವನ್ನು ಮಾಡಿಬಿಟ್ಟರು!"

ಸುರೇಂದ್ರರಾಯನು ಹೀಗೆ ಮಾತಾಡುವಷ್ಟರಲ್ಲಿ—"ಸುರೇಂದ್ರರಾಯ ಮಾಸ್ತರ!' ಎಂದು ಕೂಗುತ್ತ ನಗರದ ಶಾಂತಿರಕ್ಷಕನು ಇಬ್ಬರು ಸಶಸ್ತ್ರದೂತರೊಡನೆ ಅಲ್ಲಿಗೆ ಬಂದು—'ನಿಮ್ಮ ಮನೆಯ ಶೋಧನೆ ಮಾಡಬೇಕಾಗಿದೆ'

"ಅದೇಕೆ" ಸುರೇಂದ್ರರಾಯನು ವಿಸ್ಮಯಗೊಂಡು ಕೇಳಿದನು.

'ಶ್ರೀಮತಿ ಸೌ. ರಾಧಾದೇವಿ ರತ್ನಪುರ, ಸ್ಕೂಲ ಮಿಸ್ಟ್ರೆಸ್ಸ, ಹುಡುಗೆಯರ ಒಂದನೇ ನಂಬರ ಸಾಲೆ, ಸಂಸ್ಥಾನ ವಿಜಯನಗರ ಇವರ ಕೊಲೆಯ ಶೋಧನೆಯ ಕೆಲಸದಲ್ಲಿ ನಿಮ್ಮ ಮನೆಯನ್ನು ನಿರೀಕ್ಷಿಸುವ ಸಂದರ್ಭವುಂಟು." ಎಂದು ಶಾಂತಿರಕ್ಷಕನು ಉಸುರಿದನು.

"ರಾಧಾದೇವಿಯ ಕೊಲೆಯ ಕೆಲಸದಲ್ಲಿ ನನ್ನ ಮನೆಯ ಶೋಧನೆಯ ಆವಶ್ಯಕತೆಯೇನು?" ಎಂದು ಸುರೇಂದ್ರರಾಯನು ಭಯ-ಕುತೂಹಲಯುಕ್ತ ವಾಣಿಯಿಂದ ಕೇಳಿದನು.

ನಿಮ್ಮ ಮೇಲೆ ಸರಕಾರದ ಸಂಶಯ ವಿದೆ."

"ನನ್ನ ಮೇಲೆ ಸಂಶಯುವೆ? ನಾನು ರಾಧಾದೇವಿಯ ಕೊಲೆ ಮಾಡಿರುವೆನೋ,- ಮಾಡಿಸಿರುವೆನೋ?"

"ನಿಮ್ಮ ಪ್ರಶ್ನೆಗಳಿಗೆ ಸರಕಾರವು ಉತ್ತರ ಕೊಡುವದು ಆ ವಿಷಯುವು ನನಗೆ ಗೊತ್ತಿಲ್ಲ. ವರಿಷ್ಠ ಆಜ್ಞೆಯು ಮೇರೆಗೆ ನಡೆಯುುವದಷ್ಟು ನನಗೆ ಗೊತ್ತಿದೆ."

"ಹಾಗ ದರೆ ನಾನು ಏನು ಮಾಡಬೇಕೆಂದು ನಿಮ್ಮ ಇಚ್ಛೆಯುಂಟು?" ಎಂದು ಸುರೇಂದ್ರರಾಯನು ಗಾಬರಿಗೊಂಡ ಕೇಳಿದನು.

"ಸುಮ್ಮನೆ ಮನೆ ಬಿಟ್ಟು ಹೊರಬೀಳಿರಿ."

ಶಾಂತಿರಕ್ಷಕನು ಗರ್ಜಿಸಿದ ಕೂಡಲೆ, ಸುರೇಂದ್ರರಾಯನು ಹೊರಗೆ ಬಂದು ನಿಂತನು. ತನ್ನ ಮೇಲೆ ನಿಷ್ಕಾರಣವಾಗಿ ಗಂಡಾಂತರವೊದಗಿದ್ದನ್ನು ನೋಡಿ ಅವನು ಗಾಬರಿಯಾದನು. ರಮಾದೇವಿಯಾದರೂ ಪ್ರಾಪ್ತಪ್ರಸಂಗದಿಂದ ಕೈಕಾಲುಗೆಟ್ಟಿದ್ದಳು; ಶಾಂತಿರಕ್ಷಕನಾದ ಬದ್ರುದ್ದೀನಖಾನನು ಆವಳಿಗೂ ಹೊರಬೀಳಲಿಕ್ಕೆ ಹೇಳಿದನು. ಭಯವಿಹ್ವಲಳಾದ ಅವಳು ದಿಙ್ಮೂಢಳಾಗಿ ಅಲ್ಲಿಯೇ ನಿಂತಳು. ಅವಳು ಹೊರಗೆ ಬಾರದ್ದನ್ನು ನೋಡಿ, ಶಾಂತಿರಕ್ಷಕನು—"ಅಮ್ಮಾ, ನೀವು ಬೆದರಬೇಡಿರಿ. ನಾನು ನಿಮ್ಮ ಮನೆಯನ್ನು ಸುಲಿಯಲಿಕ್ಕೆ ಬಂದಿಲ್ಲ; ಶೋಧನೆಗಾಗಿ ಬಂದಿರುವೆನು."

ಸುರೇಂದ್ರರಾಯನು ತನ್ನ ಪತ್ನಿಯನ್ನು ಹೊರಗೆ ಕರೆದನು. ಅನಂತರದಲ್ಲಿ ಅವನು—"ಶಾಂತಿರಕ್ಷಕರೆ, ನಡೆಯಲಿ, ನಿಮ್ಮ ಶೋಧನೆಯ ಕೆಲಸವು" ಎಂದು ಹೇಳಿದನು.

ಬದ್ರುದ್ದೀನಖಾನನೂ ಅವನ ಇಬ್ಬರು ದೂತರೂ ಮನೆಯನ್ನು ಹೊಕ್ಕು, ಸುವ್ಯವಸ್ಥೆಯಿಂದ ಇರಿಸಿದ ಒಡವೆಗಳನ್ನು ಕಿತ್ತು ಕಿತ್ತು ಹರವತೊಡಗಿದರು. ಜವಾನರು ಅತ್ತಿತ್ತ ಶೋಧಿಸುತ್ತ ದೇವರ ಮಾಡದ ಬಳಿಗೆ ಹೋದರು. ಮುಸಲ್ಮಾನ ಶಿಪಾಯಿಗಳು ಮನೆಯನ್ನು ಮೈಲಿಗೆ ಮಾಡಿದ್ದಲ್ಲದೆ, ದೇವರನ್ನೆಲ್ಲಿ ಮುಟ್ಟಿ ಅಪವಿತ್ರಗೊಳಿಸುವರೋ ಏನೋ ಎಂದು ಸುರೇಂದ್ರರಾಯನೂ, ರಮಾದೇವಿಯೂ ಬೆದರಿದರು. ಅವರು ಶೂನ್ಯ ಮನಸ್ಕರಾಗಿ ರಾಜದೂತರ ಕೃತ್ಯಗಳನ್ನು ನೋಡುತ್ತ ನಿಂತಿದ್ದರು. ಬಹಳ ಮಾಡಿ ದೇವರಿಗೆ ಕೈಹಾಕಲಿಕ್ಕಿಲ್ಲೆಂದು ಅವರ ತಿಳುವಳಿಕೆಯಿತ್ತು- ಅಧಿಕಾರಾರೂಢರಾದವರಿಗೆ, ಅದರಲ್ಲೂ ಅಸಹಿಷ್ಣುಗಳಾದ ವಿಧರ್ಮಿಯರಿಗೆ ಅನ್ಯಧರ್ಮದವರ ದೇವರು-ದಿಂಡರ ಪರಿವೆಯೆಲ್ಲಿ? ಒಬ್ಬ ಶಿಪಾಯಿಯು ದೇವರ ಮಾಡದ ಬಳಿಯಲ್ಲಿಯೇ ಹಲಗೆಯ ಮೇಲಿಟ್ಟಿದ್ದ ಪಾರಾಯಣ ಪುಸ್ತಕಕ್ಕೆ ಕೈ ಹಾಕಿ

ದನು. ಆಗ ಮಾತ್ರ ರಮಾದೇವಿಯಿಂದ ತಡೆಯುವದಾಗಲಿಲ್ಲ. ಅವಳು ಪತಿಯನ್ನುದ್ದೇಶಿಸಿ— "ಮುಸಲ್ಮಾನರ ಮನೆಯನ್ನು ಮೈಲಿಗೆ ಮಾಡಿದರು; ಇನ್ನು ದೇವರನ್ನು ಸಹ ಭ್ರಷ್ಟಗೊಳಿಸುತ್ತಾರೆ! ನೋಡಿರಿ, ಅವನು ಪಾರಾಯಣ ಪುಸ್ತಕವನ್ನು ಮುಟ್ಟಿಬಿಟ್ಟನು!"

"ನೀನು ಸುಮ್ಮನಿರು. ಆಗುವದೆಲ್ಲವೂ ಆಗಿ ಹೋಗಲಿ" ಎಂದು ಸುರೇಂದ್ರರಾಯನು ಪತ್ನಿಗೆ ಸುಮ್ಮನಿರಹೇಳಿದನು. ರಮಾದೇವಿಯ ಮಾತುಗಳು ಮುಸಲಮಾನ ಸಿಪಾಯಿಗೆ ಕೇಳಿಸಿದವು. ಅವನು ಕೆಣಕಿಸಿಕೊಂಡ ಸರ್ಪದಂತೆ ಅವಳನ್ನು ಬಿರಿಗಣ್ಣಿನಿಂದ ನೋಡಹತ್ತಿದನು. ಅವನ ದೃಷ್ಟಿಯಲ್ಲಿ ಅಧಿಕಾರದ ವರ್ಚಸ್ಸವು ಪೂರ್ಣವಾಗಿ ಪ್ರತಿಬಿಂಬಿತವಾಗಿತ್ತು. ಶಿಪಾಯಿಗಳ ಅಧಿಕಾರವಾದರೂ ಎಂಥದು? ವರಿಷ್ಠ ಅಧಿಕಾರಿಗಳು ಭೂಮಿಯಿಂದ ಮೇಲೆ ಗೌಗುಡುತ್ತ ಜನರ ಮೈಮೇಲೆ ಹೋಗುವದೇ ಅವರ ಅಧಿಕಾರವು. ಇಂತಹ ತುಣುಕು-ಮಿಣುಕು ಅಧಿಕಾರದಿಂದ ಮಂತ್ರಿಸಿದ ಕರಿ ಡಗಲೆಯು ಟೊಪ್ಪಿಗೆಗಳು ಅವರ ದೇಹದ ಮೇಲೆ ಇದ್ದವು. ಈಗಲ್ಲಿ ಇಂದು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಗೊಂದಲ ಮಾಡುವದಕ್ಕೆ ಅವಕಾಶ ದೊರೆತಿತ್ತು. ಮೇಲಾಗಿ ವರಿಷ್ಠ ಅಧಿಕಾರಿಯಾದ ಶಾಂತಿರಕ್ಷಕನೂ ಮುಸಲ್ಮಾನನಿದ್ದುದರಿಂದ ಆ ಸಿಪಾಯಿಗಳಿಗೆ ಬೇಕಾದಂಥ ಇಲ್ಲದ ಸಲ್ಲದ ವ್ಯವಹಾರ ಮಾಡಲಿಕ್ಕೆ ಮುಕ್ತದ್ವಾರವಾದಂತಾಗಿತ್ತು. ಹಿಂದುಗಳ ಮನೆಯಲ್ಲಿ ಪ್ರವೇಶಿಸಿ, ಸ್ಪರ್ಶಾಸ್ಪರ್ಶ ಒಡವೆಗಳನ್ನು ಮುಟ್ಟುವದರಿಂದ ಆ ಶಿಪಾಯಿಗಳಿಗೆ ಆನಂದವಾಗುತ್ತಿತ್ತು. ಯಾಕಂದರೆ, ಅವರ ಜನ್ಮಭೂಮಿಯೊಳಗಿನ ಅನುಭವವು ಕಟುತರವಾದದ್ದಿತು. ಯಾವ ಹಿಂದುಗಳೂ ಅವರನ್ನು ಮುಟ್ಟುತ್ತಿದ್ದಿಲ್ಲ; ಮನೆಯಲ್ಲಿ ಬರಗೊಡುತ್ತಿದ್ದಿಲ್ಲ. ಯಾವ ಬಾವಿಯ ಮೇಲೆ ಹಿಂದೂ ಸ್ತ್ರೀಯರು ನೀರು ತೆಗೆದುಕೊಳ್ಳುತ್ತಿರುವರೋ, ಆ ಬಾವಿಯಲ್ಲಿ ಮುಸಲಮಾನ ಸ್ತ್ರೀಯರು ನೀರು ತೆಗೆದುಕೊಳ್ಳಲಿಕ್ಕೆ ಅಡ್ಡಿಯಿತ್ತು; ಯಾಕಂದರೆ ಮುಸಲ್ಮಾನರು ಬಾವಿಯನ್ನು ಮುಟ್ಟಿದರೆ, ಅದು ಮೈಲಿಗೆಯಾಗುವದೆಂದು ಅಲ್ಲಿಯ ಹಿಂದುಗಳ ಗ್ರಹಿಕೆಯಿತ್ತು. ಈ ಮಡಿ-ಮೈಲಿಗೆಗಳ ಬಗ್ಗೆ ಅವರು ಹಿಂದುಗಳನ್ನು ವಕ್ರದೃಷ್ಟಿಯಿಂದ ನೋಡುತ್ತಿದ್ದರು. ಹಿಂದೂ ದ್ವೇಷವು ಬಹಳ ದಿನಗಳಿಂದ ಅವರ ಅಸ್ಥಿ-ಮಾಂಸಗಳಲ್ಲಿ ಇಮುರಿತ್ತು. ಅಂಥದರಲ್ಲಿ ಹಿಂದುಸಂಘಟನೆಯ ಬಗ್ಗೆ ಇತ್ತೀಚೆಗೆ ನಡೆದ ಚಲನವಲನದ ವಿರುದ್ಧವಾಗಿ ನಡೆಯಲಿಕ್ಕೆ ಮುಸಲಮಾನರ ಮನಸ್ಸನ್ನು ಕಲುಷಿತಗೊಳಿಸಿ, ಅವರನ್ನು ಹಿಂದುದ್ವೇಷಿಗಳನ್ನು ಮಾಡಿ, ಹಿಂದುತ್ವದ ಹಗೆತನವು ಬೆಳೆಯಲಿಕ್ಕೆ ಅನುಕೂಲವಾದ ಕಪಿಮಂತ್ರ

ಗಳ ಮಾದಕಪೇಯವನ್ನು ಸೇವಿಸಲಿಕ್ಕೆ ಹಚ್ಚಿದ ಹಿಂದುದ್ವೇಷ್ಟಿಗಳಲ್ಲಿ ಕೆಲವರು ಆ ಮುಸಲ್ಮಾನ ಸಿಪಾಯಿಗಳ ಸ್ನೇಹಿತರೂ ಪರಿಚಯುದವರೂ ಆಗಿದ್ದರು. ಅವರ ಕಿವಿ ಮಂತ್ರಗಳು ಈ ಸಿಪಾಯಿಗಳ ಕಿವಿಯನ್ನು ಪ್ರವೇಶಿಸಿ, ಮಸ್ತಕದಲ್ಲಿ ಸೇರಿದ್ದವು. ಆ ಸಿಪಾಯಿಗಳೆಂದರೆ, ಹೇಳಿ ಕೇಳಿ ಅಪ್ರಬುದ್ಧರೂ ಹುಂಬರೂ ಆಗಿದ್ದರು. ಅವರಿಗೆ ಧರ್ಮದ ನಿಜವಾದ ವ್ಯಾಖ್ಯೆಯೂ ಹಿಂದುಗಳ ಹಾಗು ಮುಸಲ್ಮಾನರ ಧಾರ್ಮಿಕ ಚಲನವಲನದ ನಿಜವಾದ ಸ್ವರೂಪವೂ ಹೇಗೆ ತಿಳಿಯಬೇಕು? ತಮ್ಮ ಮುಂದಿನವರು ಏನು ಹೇಳಿದರೂ ಅದು ನಿಜವೆಂದು ಭಾವಿಸುವಷ್ಟು ಬುದ್ಧಿಶಕ್ತಿಯು ಮಾತ್ರ ಅವರಲ್ಲಿ ಇರುತ್ತಿತ್ತು.

ಹಿಂದುಗಳ ಛಲನ ಮಾಡಬೇಕೆಂಬ ಅಭಿರುಚಿ, ಹುಚ್ಚುತನದ ಕರ್ತವ್ಯಜ್ಞಾನ, ಆ ಹುಚ್ಚುತನಕ್ಕೆ ಮೂರ್ತಸ್ವರೂಪ ಕೊಡುವಂತಹ ತುಣುಕು ಮಿಣುಕು ಅಧಿಕಾರಸಂಪನ್ನತೆ! ಇಂತಹ ಸ್ಥಿತಿಯಲ್ಲಿದ್ದ ಆ ಸಿಪಾಯಿಗಳಿಗೆ ರಮಾದೇವಿಯು ಶಿರಸ್ಕ್ರೋಣದಿಂದ ಹೆಟ್ಟೆಯಲ್ಲಿ ಕಾರ ಕಲಿಸಿದಂತಾದುದರಲ್ಲಿ ಸೋಜಿಗವಿಲ್ಲ. ಕೂಡಲೆ ಅವರೊಳಗಿನವನೊಬ್ಬನು ಗುರುಚರಿತ್ರದ ಗಂಟನ್ನು ಕಿತ್ತು ದೂರ ಚಲ್ಲಬೇಕೆಂದು ಕೈಹಾಕಿದನು. ಕೂಡಲೆ ಗಂಟಿನ ಹಿಂದೆ ಜಪ್ಪಿಸಿ ಕುಳಿತಿದ್ದ ವೃಶ್ಚಿಕರಾಜನು ತನ್ನ ಅಸ್ತ್ರದಿಂದ ಆ ಸಿಪಾಯಿಯ ಬೆರಳಿಗೆ ಗುರಿಕಟ್ಟಿ ಹೊಡೆದನು! ಅದರಿಂದ ಅವನು ಚಿಟ್ಟನೆ ಚೀರಿದನು. ಚೇಳು ಆ ಸಂದಿಯಿಂದ ಹೊರಬಿದ್ದು ರಭಸದಿಂದ ಅಲ್ಲಿಯೇ ಇದ್ದ ಒಂದು ಬಿಲವನ್ನು ಹೊಕ್ಕಿತು. 'ಪುರಾಣ ಪುಸ್ತಕವನ್ನು ಮುಟ್ಟಿದ್ದಕ್ಕೆ ದೇವರು ಪ್ರಾಯಶ್ಚಿತ್ತ ವಿಧಿಸಿದನೆಂದು ರಮಾದೇವಿಗೆ ಆನಂದವಾಯಿತು. ಸುರೇಂದ್ರರಾಯನಲ್ಲಿ ಚೇಳಿನ ವಿಷಹೀರುವ ಔಷಧವಿತ್ತು. ಅವನು ಅದನ್ನು ಆ ಸಿಪಾಯಿಗೆ ಕೊಟ್ಟಿದ್ದರಿಂದ ಸ್ವಲ್ಪ ವೇಳೆಯಲ್ಲಿ ವಿಷವಿಳಿಯಿತು.

ಸಿಪಾಯಿಗಳೂ ಕೊತವಾಲರೂ ಮನೆಯನ್ನೆಲ್ಲ ಶೋಧಿಸಿದರು. ಅಲ್ಲಿ ಸಂಶಯ ಬರುವಂತಹ ಯಾವ ಒಡವೆಯೂ ದೊರೆಯಲಿಲ್ಲ. ತಮ್ಮ ಮೇಲಿನ ಗಂಡಾಂತರವು ತೊಲಗಿತೆಂದು ಸುರೇಂದ್ರರಾಯನೂ ರಮಾದೇವಿಯೂ ಸಂಭ್ರಮಗೊಂಡರು. ಆದರೆ ಆ ಆನಂದವು ಬಹಳ ವೇಳೆ ಉಳಿಯುವಂತಿದ್ದಿಲ್ಲ. 'ಯಾಕೆಂದರೆ ಅವರ ದೈವಲೀಲೆಯು ಭಯಾನಕವಿತ್ತು. ಅದು ಆ ದಂಪತಿಗಳ ಸತ್ವ ಪರೀಕ್ಷೆ ಮಾಡಬೇಕೆಂದು ಸಿದ್ಧವಾಗಿತ್ತು.

ಮನೆ ಎಲ್ಲಿ ಸಂಶಯ ಬರುವಂತಹ ಒಡವೆಗಳು ದೊರೆಯದ್ದರಿಂದ ಶಾಂತಿರಕ್ಷಕ ಬದ್ರುದ್ದೀನಖಾನನಿಗೆ ಪುತ್ರಶೋಕಕ್ಕಿಂತ ಹೆಚ್ಚಿನ ವಿಷಾದವಾಯಿತು. ಆಗ ಅವನು—"ಸುರೇಂದ್ರರಾಯರೇ, ನೀವು ಬಹಳೇ ಚಾಣಾಕ್ಷ

ರಿರುವಿರಿ. ನಿಮ್ಮಲ್ಲಿ ಕೊಲೆಯ ಪ್ರಕರಣಕ್ಕೆ ಸಂಬಂಧಿಸಿದ ಒಂದೂ ಒಡವೆಗಳು ದೊರೆಯದಿದ್ದದ್ದೇ ನಿಮ್ಮ ಬುದ್ಧಿ-ಕೌಶಲ್ಯದ ಚಿಹ್ನವು. ಈಗೇನಾಗಿದೆ? ಮುಂದೆ ಎಲ್ಲವೂ ಬೈಲಿಗೆ ಬೀಳುವವು,''

''ತಪ್ಪಿದರೆ ಮುಚ್ಚುವದೇ ಇಲ್ಲ" ಸುರೇಂದ್ರರಾಯನು ಗಾಂಭೀರ್ಯದಿಂದ ನುಡಿದನು.

''ಸುರೇಂದ್ರರಾಯರೆ!'' ಬದ್ರುದ್ದೀನಖಾನನು—''ಸರಕಾರದ ಆಜ್ಞೆಯ ಮೇರೆಗೆ ನೀವು ನನ್ನ ಸೆರೆಯಾಳಾದಿರಿ''

''ಯಾವ ಅಪರಾಧಕ್ಕಾಗಿ ನನ್ನನ್ನು ಸೆರೆ ಹಿಡಿದಿರಿ?" ಎಂದು ಸುರೇಂದ್ರರಾಯನು ಭಯಕಂಪಿತ ಸ್ವರದಿಂದ ಕೇಳಿದನು. ರಮಾದೇವಿಯ ಅವಸ್ಥೆಯಂತು ಬಣ್ಣಿಸಲಾರದಂತಿತ್ತು. ಪೋಲೀಸ ಖಾತೆಯ ದವಡೆಯಲ್ಲಿ ಸುರೇಂದ್ರರಾಯನು ಇಂದೇ ಮೊದಲನೇ ಸಾರೆ ಸಿಲುಕಿದ್ದನು. ಅಪರಾಧದ ಸಂಶಯದಿಂದ ಹಿಡಿಯಲ್ಪಟ್ಟ ಜನರು ಎಷ್ಟು ಬಗೆಯ ಸಂಕಟಗಳಿಗೀಡಾಗುತ್ತಾರೆ. ಅಪರಾಧ ಮಾಡದವರು ಸಹ ಒಮ್ಮೊಮ್ಮೆ ಅಪರಾಧಿಗಳೆಂದು ನಿರ್ಣಯಿಸಲ್ಪಟ್ಟು, ಸೆರೆಮನೆಯ ಸಂಗಡಿಗರಾಗಿ ಹೇಗೆ ಕಷ್ಟಬಡುತ್ತಾರೆ? ಮೊದಲಾದ ಸಂಗತಿಗಳನ್ನು ಅವನು ಕೇಳಿ, ಕಂಡು. ಮನವರಿಕೆ ಮಾಡಿಕೊಂಡಿದ್ದನು, ಆದರೆ ಆ ಪ್ರಸಂಗವು ಇಂದು ಅವನ ಮೇಲೆ ಬಂದಿತ್ತು; ಹಾದೀ ಹಿಡಿದು ಹೋಗುವಾಗ ಎದುರಿಗೆ ಸಿಪಾಯಿ ಸಾಹೇಬರು ಬಂದರೆ, ಅವನು ಓರೆಗಾಗುತ್ತಿದ್ದನು. ಇಂತಹ ಭೀರುವಿಗೆ ಅವರ ಪಾಶದಲ್ಲಿ ಬಂಧನ ಹೊಂದುವ ಪ್ರಸಂಗವೊದಗಿತ್ತು! ಪ್ರಾಪ್ತಪರಿಸ್ಥಿತಿಯಿಂದ ಅವನ ಅಂತಃಕರಣಕ್ಕೆ ಬರೆ ಕೊಟ್ಟಷ್ಟು ವೇದನೆಯಾಗತೊಡಗಿದ್ದರಲ್ಲಿ ವಿಸ್ಮಯವೇನು?

''ಮಾಸ್ತರರೆ" ಬದ್ರುದ್ದೀನಖಾನನು ಸುರೇಂದ್ರರಾಯನಿಗೆ—''ಸ್ಕೂಲ ಮಿಸ್ಟ್ರೆಸ್ಸರ ಕೊಲೆಯ ಪ್ರಕರಣದಲ್ಲಿ ನಿಮ್ಮ ಅಂಗವಿರುವದೆಂದು ಸರಕಾರಕ್ಕೆ ಸಂಶಯ ಬಂದಿರುವದರಿಂದ ನಿಮ್ಮನ್ನು ಸೆರೆ ಹಿಡಿದಿರುವೆನು.''

ಸುರೇಂದ್ರರಾಯನು ಹತಾಶನಾಗಿ ಭೂಮಿಗೆ ಕುಸಿಬಿದ್ದನು. ಈ ನೋಟವನ್ನು ಕಂಡು ರಮೆಯ ಅಂತಃಕರಣವು ತಳಮಳಿಸತೊಡಗಿತು. ತನ್ನ ಸೌಭಾಗ್ಯದೇವತೆಯ ಮೇಲೆ ಅನಿಷ್ಟವೊದಗಿದ್ದರಿಂದ ಆ ಕೋಮಲ ಹೃದಯದ ಸಾಧ್ವಿಯ ಸ್ಥಿತಿಯು ಹೇಗಾಗಿರಬಹುದು? ಅವಳು ತನ್ನ ಮಗುವನ್ನು ಎದೆಗೆ ಅವಚಿಕೊಂಡು, ಎರಡೂ ಕೈಜೋಡಿಸಿ ಶಾಂತಿರಕ್ಷಕರನ್ನು ಕುರಿತು--''ರಾವಸಾಹೇಬರೆ, ಸ್ಕೂಲ ಮಿಸ್ಟ್ರೆಸ್ಸಳ ಕೊಲೆಯ ಪ್ರಕರಣದಲ್ಲಿ ನಮ್ಮ ಸಂಬಂಧವು ತಿಲಾಂಶವಾದರೂ ಇಲ್ಲ. ತಗಣಿ-ಚೀಳುಗಳನ್ನು ಕೊಲ್ಲದ ನಮ್ಮವರು,

ಕೊಲೆ ಮಾಡುವರೆ? ನೀವೇ ವಿಚಾರಿಸಿರಿ.!''

''ನಮಗೆ ಅದು ಯಾವದೂ ಗೊತ್ತಿಲ್ಲ'' ಎಂದು ಶಾಂತಿರಕ್ಷಕನು ದರ್ಪದಿಂದ ನುಡಿದು—'ನಿಮಗೂ ವಾರಂಟಿರುವದು! ನಾನು ನಿಮ್ಮನ್ನಾದರೂ ಸೆರೆ ಹಿಡಿವಿರುವೆನು!'

ಈ ಕಟುತರ ವಾಣಿಯಿಂದ ರಮಾದೇವಿಯ ಮೇಲೆ ವಿದ್ಯುತ್ಪಾತವಾದಂತಾಯಿತು. ಕೂಡಲೆ ಅವಳು ಭೂಮಿಗೆ ಬಿದ್ದು ನಿಶ್ಚೇಷ್ಟಿತಳಾದಳು! ಪುಣ್ಯಕ್ಕೆ ಬಗಲಲ್ಲಿದ್ದ ವಸಂತನಿಗೆ ವಿಶೇಷ ದಕ್ಕೆ ಹತ್ತಲಿಲ್ಲ; ಯಾಕಂದರೆ, ರಮೆಯು ನೆಲಕ್ಕೆ ಬೀಳುವದಕ್ಕಿಂತ ಮುಂಚಿತವಾಗಿ ಸುರೇಂದ್ರರಾಯನು ಅವಳನ್ನು ಸಾವರಿಸಿ ಹಿಡಿದು, ಮಗುವನ್ನು ಕೈಯಲ್ಲಿ ತೆಗೆದುಕೊಂಡನು.

ಈ ಎಲ್ಲ ಪರಿಸ್ಥಿತಿಯಿಂದ ಸುರೇಂದ್ರರಾಯನ ಅವಸ್ಥೆಯು ಪ್ರವಾಹೆ ಪತಿತನಂತಾಯಿತು ಪ್ರಾಪ್ತಗಂಡಾಂತರದಿಂದ ಹೇಗೆ ಪಾರಾದೇನೆಂದು ಅವನು ಮಿಡುಕಹತ್ತಿದನು.

---

## ಸೆರೆಮನೆಯ ಸೋಬತಿ

ರಾಧಾದೇವಿಯ ಜೀವಕ್ಕೆ ಅಪಾಯ ತಟ್ಟಿದ್ದಕ್ಕಾಗಿ ತಳಮಳಿಸುವ ಜೀವಗಳು ಇಡೀ ವಿಜಯನಗರದಲ್ಲಿ ಬೆರಳಿನಿಂದ ಎಣಿಸುವಷ್ಟೇ ಇದ್ದವು. ಶಿಕ್ಷಣಸಂಸ್ಥೆಯ ಮುಖ್ಯಾಧಿಕಾರಿಯಾದ ಕೃಷ್ಣರಾಯನಿಗೆ ಈ ಸಂಗತಿಯು ಪತ್ನಿ ಮರಣದಂತೆ ಕ್ಲೇಶಪ್ರದವಾಗಿತ್ತು. ಇವನಲ್ಲದೆ ಆನಂದ-ಗೋವಿಂದರೂ ವಕೀಲ ಗೋವರ್ಧನರಾಯನೂ ರಾಧಾದೇವಿಗೊದಗಿದ ಅನಿಷ್ಟದಿಂದ ಕಣ್ಣೀರಿಡುತ್ತಲಿದ್ದರು. ಶಿಕ್ಷಕಿಯರಲ್ಲಿ ಸೌಭಾಗ್ಯವತಿ ವನಿತೆಯೊಬ್ಬಳು ಶೋಕಸಾಗರದಲ್ಲಿ ಮುಳುಗಿದ್ದಳು: ತನ್ನ ಭಾಗ್ಯದ ತಂತುವೇ ಹರಿಯಿತೆಂದು ಅವಳು ಬೋರಿಡಹತ್ತಿದಳು; ವನಿತೆಯು ಅನನುಭವಿಕ ಚಂಚಲ ತರಳೆ; ಅವಳ ಆಗು-ಹೋಗುಗಳೆಲ್ಲವೂ ರಾಧಾದೇವಿಯ ಪ್ರಭಾವವನ್ನೇ ಅವಲಂಬಿಸಿದ್ದವು. ಒಟ್ಟಿನ ಮೇಲೆ ರಾಧಾ-ಕೃಷ್ಣ ಆಶ್ರಯಿಂಡ ಕೋದ ಜನರೆಲ್ಲರೂ ಈ ಪ್ರಸಂಗದಿಂದ ಬಹುತರವಾಗಿ ದುಃಖಿ-ಕಷ್ಟಿಗಳಾಗಿದ್ದರೆನ್ನಬಹುದು. ಅವರಲ್ಲಿ ಸಕೇಶಾ ವಿಧವೆಯಾದ ಚಂಪಾವತಿಯು ಮಾತ್ರ ರಾಧಾದೇವಿಗೊದಗಿದ ಅನಿಷ್ಟದ ಬಗ್ಗೆ ಕೊರಗಲಿಲ್ಲ; ಯಾಕಂದರೆ, ಸಚ್ಛೀಲಳಾದ ಆ ಬಾಲ ವಿಧವೆಯನ್ನು ವಾರಾಂಗನೆಯರ ಮಾಲಿಕೆಯಲ್ಲಿ ಸೇರಿಸದ ಶ್ರೇಯವು ಬಹುದುಷ್ಟಿಗೆ ರಾಧಾದೇವಿಯು ಪಾಲಿನದಾಗಿತ್ತು. ಹೊಟ್ಟೆಯ ಪಾಡಿಗಾಗಿ ನೌಕರಿಗೆ ತೊಡಗಿದ

ತಾನು ಎಂತಹ ಪಾತಕಿಯಾದೆನಲ್ಲ! ಎಂದು ಅವಳು ಒಮ್ಮೊಮ್ಮೆ ಪಶ್ಚಾತ್ತಾಪ ಪಡುತ್ತಿದ್ದಳು. ಕೃಷ್ಣರಾಯ-ರಾಧಾದೇವಿಯರಂತಹ ಜನರು ಶಿಕ್ಷಣ ಸಂಸ್ಥೆಯಲ್ಲಿರುವವರೆಗೆ ಅವಳು ನೀತಿ-ರೀತಿಗಳ ಕ್ಷೇತ್ರದಲ್ಲಿ ಹೆಜ್ಜೆಯಿಡುವದು ಅಸಂಭಾವ್ಯವಾಗಿತ್ತು; ಆದರೂ ಅವಳು ಇತ್ತೀಚೆಗೆ ತನ್ನ ವರ್ತನವನ್ನು ಸುಧಾರಿಸುತ್ತ ನಡೆದಿದ್ದಳು. ಅವಳ ಈ ಸ್ವಭಾವ ಪರಿವರ್ತನವು ಗರುಡವಾಹನ ಗೋವಿಂದರಾಯ ಮಾಸ್ತರನಿಗೆ ದುಃಖಪ್ರದವಾಗಿತ್ತು; ಆದರೆ ಚಂಪಾವತಿಯು ಅವನ ಕ್ಲೇಶಹೃದಯವನ್ನು ದುರ್ಲಕ್ಷಿಸತೊಡಗಿದ್ದಳು. ಒಮ್ಮೆ 'ಗರತಿ ಗಂಗವ್ವ'ನೆಂದು ಎಂದು ಅನಿಸಿಕೊಂಡೇನೋ, ಎಂದು ಅವಳು ಚಿಂತಿಸತೊಡಗಿದ್ದಳು; ಆದರೆ ಕೃಷ್ಣರಾಯ ರಾಧಾದೇವಿಯರಂಥ ಅಧಿಕಾರ ಸಂಪನ್ನರ ವಶೀಲೆಯಿಂದ ಪರಾಕ್ರಮಿಯಾದ ಗೋವಿಂದರಾಯ ನನ್ನು ಪೂರಾ ಧಿಃಕರಿಸುವಷ್ಟು ಸಾಮರ್ಥ್ಯವು ಇನ್ನೂ ಅವಳಲ್ಲಿ ಉಂಟಾಗಿದ್ದಿಲ್ಲ. ಅಧಿಕಾರಾರೂಢರಲ್ಲೊಬ್ಬಳಾದ ರಾಧಾದೇವಿಯು ಅನಿಷ್ಟಕ್ಕೀಡಾದ್ದರಿಂದ, ಒಂದು ಕಂಟಕವು ಪರಿಹಾರವಾಯಿತೆಂದು ಚಂಪಾವತಿಯ ಮನಸ್ಸು ಸಮಾಧಾನಗೊಂಡಿತು

ಚಂಪಾವತಿಯು ತನ್ನ ವರ್ತನ-ಪರಿವರ್ತನ ಮಾಡತೊಡಗಿದಾಗಿನಿಂದ ರಮಾದೇವಿಯ ಸ್ನೇಹವಿಟ್ಟಿದ್ದಳು. ಅವಳ ಮನೆಯು ರಮಾದೇವಿಯ ಮನೆಗೆ ಸಮೀಪದಲ್ಲಿತ್ತು; ಆದ್ದರಿಂದ ಅವಳಿಗೆ ಪೋಲೀಸರ ಗದ್ದಲವು ಕೇಳಿಸಿತು. ಕೂಡಲೆ ಅವಳು ಧಾವಿಸಿ ಬಂದು ನೋಡುವಷ್ಟರಲ್ಲಿ, ರಮಾದೇವಿಯೂ ಸುರೇಂದ್ರರಾಯನೂ ಆರೋಪಿತರಾದದ್ದು ತಿಳಿಯಿತು. ನಿರಪರಾಧಿಗಳೂ ಸದ್ಗುಣಿಗಳೂ ಆದ ಆ ದಂಪತಿಗಳು ಕೊಲೆಯಂತಹ ದೊಡ್ಡ ಪ್ರಕರಣದಲ್ಲಿ ಸೇರಿದ್ದಕ್ಕಾಗಿ ಅವಳಿಗೆ ದುಃಖವೆನಿಸಿತು. ನಿಗ್ರಹಶಕ್ತಿಸಂಪನ್ನರಾದ ಪೋಲೀಸರ ಮುಂದೆ ಅಳುವದರ ಹೊರತು ಅವಳ ಆಟವೇನು ನಡೆಯಬೇಕು?

ಸುರೇಂದ್ರರಾಯನನ್ನೂ ರಮಾದೇವಿಯನ್ನೂ ಪೋಲೀಸರು ಸೆರೆ ಹಿಡಿದಿರುವರೆಂಬ ಸುದ್ದಿಯು ಹಾ ಹಾ ಅನ್ನುವಷ್ಟರಲ್ಲಿ ಓಣಿಯ ತುಂಬ ಹಬ್ಬಿತು. ಗೋವಿಂದರಾಯಮಾಸ್ತರನೂ, ಸೌಭಾಗ್ಯವತಿ ವನಿತೆಯೂ, ವಕೀಲ ಗೋವರ್ಧನರಾಯನೂ, ದಿವಾಣ ಮಾಧವರಾಯನೂ ಅಲ್ಲಿಗೆ ಬಂದು ನಡೆದ ಸಂಗತಿಯ ಬಗ್ಗೆ ತಮ್ಮ ತಮ್ಮೊಳಗೆ ಚರ್ಚೆ ಮಾಡಹತ್ತಿದರು. ಆಗ ಗೋವಿಂದರಾಯ ಮಾಸ್ತರನು ಧೈರ್ಯದಿಂದ ಮುಂದೆ ಹೋಗಿ, ಶಾಂತಿರಕ್ಷಕರನ್ನು ಕುರಿತು--"ಕೊತವಾಲ ಸಾಹೇಬರೇ, ನಿನ್ನೆ ರಾತ್ರಿ ಈ ಸ್ಥಳದಲ್ಲಿಯೇ ರಮಾದೇವಿ-ರಾಧಾದೇವಿಯರಲ್ಲಿ ನಿಕರದ ವಾದವಿವಾದ ನಡೆದದ್ದು ನಿಜವು. ಆ ಮನಸ್ತಾಪದ ಪರ್ಯವಸಾನವು ರಾಧಾದೇವಿಯರ ಕೊಲೆಯಂತಹ

ಭೀಷಣವಾದ ಕೃತ್ಯದಲ್ಲಾಗುವದೆಂದು ನಾನು ಭಾವಿಸಿದ್ದಿಲ್ಲ. ಪ್ರಸಂಗವು ಇಲ್ಲಿಯ ವರೆಗೆ ಮುಟ್ಟಬಾರದಾಗಿತ್ತು. ಸಿಟ್ಟಿನ ಭರದಲ್ಲಿ ಘಟಿಸಿದ ಪ್ರಸಂಗ ಗಳು ಒಮ್ಮೊಮ್ಮೆ ಪ್ರಾಣಕ್ಕೆ ಮುಳುವು ಆಗುವವೆಂಬದು ಸುಳ್ಳಲ್ಲ. ಸಿಟ್ಟಿನ ಕೈಯಲ್ಲಿ ಬುದ್ಧೀ ಕೊಟ್ಟರೆ ಎಲ್ಲಪ್ಪನಂತೆ ಹಳಹಳಿಗೆ ಗುರಿಯಾಗಬೇಕಾ ಗುವದು.''

ಮಾಸ್ತರನು ತನ್ನ ಭಾಷಣವನ್ನು ಪಾಠಿನೊಳಗಿನ ವಾಕ್ಯಗಳಿಂದಲೇ ಪೂರೈಸಿದನು. ಶಾಂತಿರಕ್ಷಕನು ಗೋವಿಂದರಾಯನು ಹೇಳಿದ ಸಂಗತಿ ಯನ್ನು ತನ್ನ ಸ್ಮರಣೆಯ ಪುಸ್ತಕದಲ್ಲಿ ಬರೆದುಕೊಂಡನು. ಗೋವಿಂದ ರಾಯನು ಇನ್ನೂ ಕೆಲವು ಸಂಗತಿಗಳನ್ನು ಹೇಳಬೇಕೆಂದು ಯೋಚಿಸಿದ್ದನು. ಅಷ್ಟರಲ್ಲಿ ದಿವಾಣ ಮಾಧವರಾಯನು ಅವನ ಕೈ ಹಿಡಿದು ಹಿಂದೆ ಜಗ್ಗಿ— "ಗೋವಿಂದರಾಯರೆ, ಇಂದಿನ ವರೆಗೆ ನಿಮ್ಮ ನೀಚ ವರ್ತನವನ್ನು ನಾನು ಸಹನ ಮಾಡಿರುವೆನು. ನಿಮ್ಮ ದುಷ್ಟತನದ ಬಗ್ಗೆ ಈ ಓಣಿಯೊಳಗಿನ ಜನರು ಕ್ಷುಬ್ಧರಾಗಿರುವರು. ನೀವು ರಮಾದೇವಿಯವರ ಹಾಗು ಸುರೇಂದ್ರ ರಾಯರ ಅನಿಷ್ಟ ಚಿಂತನೆಗಾಗಿ ಏಕೆ ಯತ್ನಿಸತೊಡಗಿರುವಿರೆಂಬದನ್ನ ನಾನು ತಿಳಿದಿರುವೆನು. ನೀವು ಕೃಷ್ಣರಾಯರ ಹಾಗು ರಾಧಾದೇವಿಯ ಶಿಷ್ಯರಿರು ರದರಿಂದ ಹೀಗೆ ವರ್ತಿಸತೊಡಗಿರುವಿರಿ; ಆದರೆ ಎಚ್ಚರದಿಂದ ಕೆಲಸ ಮಾಡಿರಿ. ನೀವು ನಿಮ್ಮ ಈ ಮನೆಮುರುಕತನದ ಖೋಡಿ ವರ್ತನವನ್ನಿಟ್ಟದ್ದಕ್ಕೆ ಈಗಿಂದೀಗ ಗಡಿಗೆ-ಮಡಿಕೆಗಳನ್ನು ತಲೆಯ ಮೇಲೇರಿಸಿಕೊಂಡು ಓಡಿಹೋಗ ಬೇಕಾದೀತು!''

ಮಾಧವರಾಯನ ಮಾತುಗಳು ಶಾಂತಿರಕ್ಷಕನಿಗೆ ಕೇಳಿದವು; ಆದರೆ ಅದರ ಇಂಗಿತವು ಮಾತ್ರ ಅವನಿಗೆ ಹೊಳೆಯಲಿಲ್ಲ. ಆಗ ಅವನು ಗೋವಿಂದ ರಾಯನ ವರ್ತನದ ವಿಷಯವಾಗಿ ಗೊತ್ತುವಳಿ ಮಾಡಿಕೊಳ್ಳಬೇಕೆಂಬ ಕುತೂಹಲದಿಂದ ನೆರೆದ ಜನರನ್ನು ವಿಚಾರಿಸತೊಡಗಿದನು; ಆದರೆ ನೆರೆ ಹೊರೆಯವರು ಧರ್ಮಸಂಕಟಕ್ಕೆ ಕಟ್ಟುಬಿದ್ದು, ಯಾರೂ ಗೋವಿಂದರಾಯನ ವಿಷಯ ವಾಗಿ ಗೊತ್ತುವಳಿ ಮಾಡಿಕೊಡುವ ಮನಸ್ಸು ಮಾಡಲಿಲ್ಲ; ಆಗ ಗೋವಿಂದ ರಾಯನನ್ನು ಕುರಿತು ಶಾಂತಿರಕ್ಷಕನು ಅಧಿಕಾರಯುಕ್ತ ವಾಣಿಯಿಂದ— ರಾಧಾದೇವಿಯವರ ಕೊಲೆಯ ಪ್ರಕರಣದಲ್ಲಿ ನೀವು ಸಾಕ್ಷಿಗಳಾಗಬೇಕಾ ಗುವದು''

ಸುರೇಂದ್ರರಾಯನ ಮನೆಯ ಶೋಧನೆಯಲ್ಲಿ ಕೊಲೆಗೆ ಸಂಬಂಧಿಸು ವಂತಹ ಯಾವ ವಸ್ತುಗಳೂ ದೊರೆಯದಿದ್ದರೂ, ರಮಾದೇವಿ-ರಾಧಾದೇವಿ

ಯವರು ಒಂದೇ ಸ್ಥಳದಲ್ಲಿ ಕುಳಿತು ತೆಗೆಯಿಸಿದ ಭಾವಸಟ, ರಾಧಾದೇವಿಯ ಹೆಸರು ಹಾಕಲ್ಪಟ್ಟ ಹೆಣಿಕೆಯ ಕರವಸ್ತ್ರ, ಎರಡು ಪುಸ್ತಕಗಳು ಇಷ್ಟೇ ಒಡವೆಗಳನ್ನು ಸಂಶಯದ ಹೆಸರಿನಿಂದ ಪೋಲೀಸರು ಸ್ವಾಧೀನಕ್ಕೆ ತೆಗೆದುಕೊಂಡರು. ಅನಂತರದಲ್ಲಿ ಆರೋಪಿಗಳನ್ನು ಪೋಲೀಸ ಚಾವಡಿಗೆ ಒಯ್ಯುವ ಸಿದ್ಧತೆಯು ನಡೆಯಿತು. ಅವರನ್ನು ಹೊಣೆಯ ಮೇಲೆ ಬಂಧವಿಮೋಚನೆ ಮಾಡಬೇಕೆಂದು ನೆರೆಯ ಜನರು ಪೋಲೀಸರಿಗೆ ವಿನಂತಿಮಾಡಿಕೊಳ್ಳತೊಡಗಿದರು. ಮಾಧವರಾಯನಂತು ಈ ವಿಷಯದಲ್ಲಿ ಬಹಳೇ ಪ್ರಯತ್ನ ಮಾಡಿದನು. ಆದರೆ ಎಲ್ಲರ ಪ್ರಯತ್ನಗಳು ವ್ಯರ್ಥವಾದವು. ನಿರಪರಾಧಿಗಳೂ, ಸೌಜನ್ಯದವರೂ ಆದ ಆ ದಂಪತಿಗಳ ದುರವಸ್ಥೆಯನ್ನು ನೋಡಿ, ಎಲ್ಲರ ಅಂತಃಕರಣಗಳೂ ತಳಮಳಿಸಹತ್ತಿದವು; ಇಂಥದರಲ್ಲಿ ಪೋಲೀಸರು ಹೊಣೆಗಾರಿಕೆಯ ಮೇಲಿಂದ ಸಹ ಬಿಡುಗಡೆ ಮಾಡದ್ದರಿಂದ ಅವರ ಸಂತಾಪವು ಪ್ರಜ್ವಲಿತವಾಯಿತು. ಅಧಿಕಾರೋನ್ಮತ್ತರಾದ ಪೋಲೀಸರ ಮೈ ಮುತ್ತಗೆ ಮಾಡಿ ಆ ಸುಶೀಲ ದಂಪತಿಗಳನ್ನು ಬಿಡಿಸಿಕೊಳ್ಳಬೇಕೆಂದು ಕೆಲವು ಜನರು ಯೋಚಿಸಿದರು; ಮಾಧವರಾಯನಂತು ಈ ಕೆಲಸ ಮಾಡಲಿಕ್ಕೆ ಒಂದೇ ಕಾಲಿನ ಮೇಲೆ ಸಿದ್ಧನಿದ್ದನು. ಅಷ್ಟರಲ್ಲಿ ಅಲ್ಲಿ ನಡೆದ ಗದ್ದಲವನ್ನು ಕೇಳಿ, ಗೋವರ್ಧನರಾಯ ವಕೀಲನು ರಭದಿಂದ ಬಂದನು. ವಕೀಲರಾಗಮನದಿಂದ ಎಲ್ಲ ಜನರಿಗೆ ಆನಂದವಾಯಿತು. ಪೋಲೀಸ ಅಧಿಕಾರಿಗಳೊಡನೆ ಕಗ್ಗಭಾಷೆಯಲ್ಲಿ ಮಾತಾಡುವದಕ್ಕಿಂತ ಕಾನೂನಿಗನುಸಾರವಾಗಿ ಮಾತಾಡುವದು ಹೆಚ್ಚು ಪರಿಣಾಮಕಾರಕವೂ ಸುರಕ್ಷಿತವೂ ಎಂದು ತಿಳಿದು, ಆ ಜನರು ಗೋವರ್ಧನರಾಯರ ಬಳಿಗೆ ಹೋಗಿ, ಸುರೇಂದ್ರರಾಯ-ರಮಾದೇವಿಯವರನ್ನು ಹೊಣೆಗಾರಿಕೆಯ ಮೇಲೆ ಬಿಡುಗಡೆ ಮಾಡಿಸಬೇಕೆಂದು ಅವನನ್ನು ಬೇಡಿಕೊಳ್ಳತೊಡಗಿದರು.

ಗೋವರ್ಧನರಾಯ-ಗೋವಿಂದರಾಯರಂತಹ ದೊಡ್ಡ ಮನುಷ್ಯರು ತಮ್ಮ ಮೇಲಿನ ಪ್ರಸಂಗದ ವಿಷಯವಾಗಿ ಮಧ್ಯಸ್ಥಿಕೆ ಮಾಡಲಿಕ್ಕೆ ಬಂದದ್ದನ್ನು ನೋಡಿ, ಸುರೇಂದ್ರರಾಯನಿಗೂ ರಮಾದೇವಿಗೂ ತಿರಸ್ಕಾರವಾಯಿತು. ಪೋಲೀಸ ಅಧಿಕಾರಿಯು ಮಾತ್ರ ಗೋವರ್ಧನರಾಯನನ್ನು ತಿರಸ್ಕಾರದೃಷ್ಟಿಯಿಂದ ನೋಡಲಿಲ್ಲ; ಯಾಕಂದರೆ, ಅವನಲ್ಲಿಯ ಯಾವ ಗುಣಗಳೂ ಪೋಲೀಸರನ್ನು ಬಾಧಿಸುವಂತಿದ್ದಿಲ್ಲ. ಅದರಲ್ಲಿಯೂ ಗೋವರ್ಧನರಾಯನು ನಿರುಪದ್ರವೀ ವಕೀಲನೆಂದು ಪ್ರಸಿದ್ಧಿ ಹೊಂದಿದ್ದನು. ಯಾಕಂದರೆ, ಅವನು ವಕಾಲತಿಯನ್ನು ಕೈಕೊಂಡಂದಿನಿಂದ ಒಂದು ಪ್ರಕರಣವನ್ನೂ ಸ್ವತಂತ್ರ

ನಡೆಯಿಸದ್ದರಿಂದ ಪೋಲೀಸರೊಡನೆ ನ್ಯಾಯಮಂದಿರದಲ್ಲಿ ಒಮ್ಮೆಯೂ ಯಾವರೂ ವಾದ-ವಿವಾದ ಮಾಡುವ ಪ್ರಸಂಗವು ಆತನಿಗೆ ಒದಗಿದ್ದಿಲ್ಲ. ಓಣಿಯೊಳಗಿನ ಬೈದಾಟದ ಹಾಗು ಕೊಳಾಯಿಗಳ ಮೇಲಿನ ಹೊಡೆದಾಟದ ವಕೀಲನೇ ಅವನಾಗಿದ್ದನು ಅವನು ಮೇಲಿಂದ ಮೇಲೆ ಪ್ರಸಿದ್ಧಿ ಪತ್ರಿಕೆ, ನೋಟೀಸುಗಳನ್ನು ಬರೆಯುತ್ತಿದ್ದದರಿಂದ ವರ್ತಮಾನಪತ್ರಗಳಲ್ಲಿ ಆತನ ಹೆಸರು ಆಗಿಂದಾಗ ಕಾಣುತ್ತಿತ್ತು. ಆ ಪ್ರಸಿದ್ಧ ಪತ್ರಿಕೆ ಹಾಗೂ ನೋಟೀಸುಗಳೆಂದರೆ, ಹೆಂಡತಿಯು ಗಂಡನಿಗೆ ಬಿಡುಗಡೆಯ ಪತ್ರಕೊಡುವ ವಿಷಯದ ಹಾಗು ಹೆಂಡತಿಯನ್ನು ತನ್ನ ವಶದಲ್ಲಿ ಕೊಡಬೇಕೆಂದು ಗಂಡನು ತನ್ನ ಅತ್ತೆ-ಮಾವಂದಿರಿಗೆ ಸೂಚನೆ ಮಾಡುವ ವಿಷಯದ ಸಂಬಂಧವುಳ್ಳವುಗಳೇ ಆಗಿರುತ್ತಿದ್ದವು. ಇಂತಹ ಕೆಲಸಗಳು ಯಾವ ದಲಾಲರ ಮುಖಾಂತರವಾಗಿ ಗೋವರ್ಧನರಾಯನಿಗೆ ದೊರೆಯುತ್ತಿದ್ದವೋ, ಆ ದಲಾಲರಲ್ಲಿ ಒದ್ರುದ್ದೀನಖಾನ ಕೊತವಾಲನೂ ಒಬ್ಬನಾಗಿದ್ದನು. ಆದ್ದರಿಂದ ಈ ವಕೀಲರ ಆಗಮನದಿಂದ ಕೊತವಾಲನಿಗೆ ಆನಂದವಾಯಿತಲ್ಲದೆ; ಅವನು ತಿಲಾಂಶವಾದರೂ ತಿರಸ್ಕಾರಗೊಳ್ಳಲಿಲ್ಲ. ಆದರೆ ಸಕೇಶಾ-ವಿಕೇಶಾ ವಿಧವೆಯರನ್ನೂ, ರಾಧಾದೇವಿಯಂತಹ ಸ್ಕೂಲ ಮಿಸ್ಟ್ರೆಸ್ಸಳ ಮಾಲಿಕೆಯೊಳಗಿನ ಮಣಿಗಳನ್ನೂ ಒಳಿತು-ಕೆಡಕು ಮಾರ್ಗಗಳಿಂದ ಕೈಯಲ್ಲಿ ತೆಗೆದುಕೊಳ್ಳುವ ನೀಚವೃತ್ತಿಯ ಗೋವರ್ಧನರಾಯನನ್ನು ನೋಡಿದೊಡನೆಯೇ ಸುರೇಂದ್ರರಾಯ-ರಮಾದೇವಿಯರು ತಿರಸ್ಕಾರಗೊಂಡರು.

ಗೋವರ್ಧನರಾಯನು ಎಷ್ಟಾದರೂ ವಕೀಲನಿದ್ದನು. ಅವನು ಬಂದ ಕೂಡಲೆ ಪೋಲೀಸ ಅಧಿಕಾರಿಯೂ ಸಿಪಾಯಿಗಳೂ ಅವನಿಗೆ ನಮಸ್ಕಾರ ಮಾಡಿದರು. ಅನಂತರದಲ್ಲಿ ಶೋಧನೆಯ ಕಾಲಕ್ಕೆ ದೊರೆತ ಒಡವೆಗಳ ಪಂಚನಾಮೆಗೆ ಪ್ರಾರಂಭವಾಯಿತು. ಗೋವರ್ಧನರಾಯನೂ, ಗೋವಿಂದರಾಯನೂ ಪಂಚರಾದರು. ಇವರ ಹೊರತು ಅಲ್ಲಿ ನೆರೆದ ಜನರಲ್ಲಿ ಯಾರೂ ಪಂಚರಾಗಲಿಕ್ಕೆ ಒಪ್ಪಿದ್ದಿಲ್ಲ. ಆದ್ದರಿಂದ ವಕೀಲರ ಆಗಮನವು ಪೋಲೀಸ ಅಧಿಕಾರಿಗೆ ಲಾಭದಾಯಕವೇ ಆಯಿತು- ಒಟ್ಟಿನಲ್ಲೆಲ್ಲ ವಿಮ್ಮ ಪಂಚನಾಮೆಯು ಪೂರ್ಣವಾಯಿತು;

ಇತ್ತೀಚೆಗೆ ರಮಾದೇವಿಯಲ್ಲಿ ಸ್ನೇಹವಿಟ್ಟ ಶಿಕ್ಷಕಿಯಾದ ಚಂಪಾವತಿಯು ಈ ಎಲ್ಲ ಪ್ರಸಂಗಗಳನ್ನು ನೋಡಿ ಕ್ಲೇಶಬಟ್ಟಳು. ಗೋವರ್ಧನರಾಯ ವಕೀಲನು ವಕಿಲ್ಪತ್ರವನ್ನು ಸ್ವತಃ ಮೇಲೆ ತೆಗೆದುಕೊಂಡರೆ, ಆ ದಂಪತಿಗಳು ಹೊಣೆಯ ಮೇಲೆ ಬಿಡುಗಡೆಯಾಗಬಹುದೆಂದು ತಿಳಿದಳು; ಆಗ ಅವಳು ಕೈ

ಜೋಡಿಸಿ—'ವಕೀಲಸಾಹೇಬರೆ, ಈ ನಿರಪರಾಧಿಗಳಾದ ದಂಪತಿಗಳ ಮೇಲೆ ಕರುಣೆಯಿಟ್ಟು, ಇವರು ಹೊಣೆಗಾರಿಕೆಯ ಮೇಲೆ ಬಿಡುಗಡೆಯಾಗುವಂತೆ ಮಾಡಿ ಪುಣ್ಯ ಕಟ್ಟಿಕೊಳ್ಳಿರಿ' ಎಂದು ಹೇಳಿದಳು.

'ಚಂಪಾವತಿದೇವಿ!' ಗೋವರ್ಧನರಾಯನು ತನ್ನ ವಕೀಲೀ ಭಾಷೆಯಲ್ಲಿ—"ನೀವು ವಶೀಲೆಯಿಂದ ಶಿಕ್ಷಕಿಯರಾಗಿರುವಿರೆಂದು ಕಾನೂನುಗಳಲ್ಲಿ ಜ್ಞಾನವಿದ್ದವರಂತೆ ಮಾತಾಡಬೇಡಿರಿ."

ಚಂಪಾವತಿಯು ಮುಖಭಂಗಿತಳಾದಂತಾದಳು; ಆದರೂ ಅವಳು ರಮಾದೇವಿ-ಸುರೇಂದ್ರರಾಯರ ಕಡೆಗೆ ಲಕ್ಷ್ಯವಿಟ್ಟು—'ಗೋವರ್ಧನರಾಯರೆ, ನಾನು ವಶೀಲೆಯಿಂದ ನೌಕರಿ ಗಳಿಸಿಲ್ಲ. ನೌಕರಿಯನ್ನು ಗಳಿಸಿಕೊಂಡ ಮೇಲೆ ಅನಿವಾರ್ಯಹಕ್ಕಾಗಿ ಅದನ್ನು ವಶೀಲೆಯಿಂದ ಸ್ಥಿರಪಡಿಸಿಕೊಂಡಿರುವೆನು. ಹೊಟ್ಟೆಯು ಕೆಟ್ಟದು. ಅದರ ಸಲುವಾಗಿ ನಾನು ನನ್ನ ಶೀಲದ ವಶೀಲಿ ಹಚ್ಚಿದ್ದು ನಿಜವು; ಆದರೆ ಅದರ ಸಂಬಂಧವು ಈ ವಿಷಯಕ್ಕಿಲ್ಲ. ಈ ಪ್ರಸಂಗವೇ ಬೇರೆಯಾಗಿದೆ. ಹೊಣೆಯ ಮೇಲೆ ಆರೋಪಿತರನ್ನು ಬಿಡುವ ಪರಿಪಾಠವುಂಟು ಅದರಲ್ಲಿ ಈ ಆರೋಪಿತರು ನಿರಪರಾಧಿಗಳಿದ್ದಬಗ್ಗೆ ಓಣಿಗೆ ಓಣಿಯೇ ಸಾಕ್ಷಿಭೂತವಾಗಿದೆ. ಇಂತಹ ಸಂದರ್ಭದಲ್ಲಿ ನಿಮ್ಮ ಕಾನೂನುಗಳನ್ನೇನು ಸುಡಬೇಕು? ಸದ್ಗುಣಿಗಳಾದ ಈ ನಿರಪರಾಧಿ ದಂಪತಿಗಳನ್ನು ವನವಾಸಕ್ಕೀಡು ಮಾಡುವದ ಎಲ್ಲಿಯ ನ್ಯಾಯ ನೀತಿಯು?"

ಚಂಪಾವತಿಯು ಮಾತನಾಡುವಾಗ ಬದ್ರುದ್ದಿನಖಾನನು ಅವಳನ್ನು ಅನಿಮಿಷ ನೇತ್ರದಿಂದ ನೋಡುತ್ತಲಿದ್ದನು. ಅವನ ನೇತ್ರಗಳು ಫೌಜದಾರೀ ತೇಜದಿಂದ ಚಮಕಿಸುತ್ತಿದ್ದವು. ಅವನು ಗೋವರ್ಧನರಾಯನನ್ನು ಕುರಿತು—"ವಕೀಲಸಾಹೇಬರೆ, ಈ ಸ್ತ್ರೀಯು ಇದೇ ಗೋವಿಂದರಾಯರ ಮೇಲೆ ಮಾನಹಾನಿಯ ಫಿರ್ಯಾದಿ ಮಾಡಿದ್ದಿಲ್ಲವೆ? ಮೊದಲು ಅನೀತಿಯ ಚಾಳಿಗಳನ್ನು ಮಾಡಿ, ಹಿಂದಿನಿಂದ ಮನಬಂದಂತೆ ವಿಶ್ವಾಸಘಾತ ಮಾಡುವದು ಇವಳ ಸ್ವಭಾವವೇ ಇದ್ದಂತೆ ತೋರುವದು. ಗೋವಿಂದರಾಯರು ಒಡಂಬಡಿಕೆ ಮಾಡಿಕೊಳ್ಳದಿದ್ದರೆ ಇವಳು ಸೆರೆಮನೆಯನ್ನೇ ಕಾಣುತ್ತಿದ್ದಳು; ಆದರೆ ಸ್ತ್ರೀ ದಾಕ್ಷಿಣ್ಯಕ್ಕೆ ಹೊರತಾಗಿದ್ದ ಗೋವಿಂದರಾಯರ ಮನಸ್ಸಿಗೆ ಬರಲಿಲ್ಲ. ಆ ಪ್ರಕರಣದಲ್ಲಿ ಇವಳು ನಿಮ್ಮ ಬಾಯಿಗೂ ಚನ್ನಾಗಿ ಹತ್ತಿದ್ದಳು"

"ಚಂಪಾವತಿ ದೇವಿಯವರು ಆ ಪ್ರಸಂಗದಲ್ಲಿ ಒಡಂಬಡಿಕೆ ಮಾಡಿಕೊಳ್ಳುತ್ತಿದ್ದಿಲ್ಲ; ಆದರೆ ಅವರ ಅಧಿಕಾರಗಳ ಭೀತಿಯಿಂದ ಆ ಒಡಂಬಡಿಕೆಯಾಯಿತು" ಎಂದು ಗೋವರ್ಧನರಾಯನು ಹೇಳಿದನು.

"ಸೂಳೆ ಮುಪ್ಪಾಗಿ ಜೋಗತಿಯಾದಳಂತೆ. ಈಗ ಇವಳು 'ಗರತಿ ಗಂಗವ್ವ'ನಂತೆಅಭಿನಯ ಮಾಡುತ್ತಿರುವಳು" ಎಂದಂದು ಅಲ್ಲಿಯೇ ನಿಂತ ಗೋವಿಂದರಾಯನು ಸೇಡು ತೀರಿಸಿಕೊಂಡನು.

"ಆ ಸಂಗತಿಯು ಏನೇ ಇರಲಿ. ಇವಳು ಅಪರಾಧಿಗಳ ಪಕ್ಷದಿಂದ ಮಾತಾಡುತ್ತಿರುವಳು. ಇದರ ಮೇಲಿಂದ ನೋಡಲಾಗಿ ಸ್ಕೂಲ ಮಿಸ್ಟ್ರೆಸ್ಸಿನ ಕೊಲೆಯ ಪ್ರಕರಣದಲ್ಲಿ ಇವಳ ಸಂಬಂಧವು ಇರಲಿಕ್ಕೇ ಬೇಕು" ಎಂದು ಶಾಂತಿರಕ್ಷಕನು ನುಡಿದನು.

"ಹಾಗೇನೂ ಇರಲಿಕ್ಕಿಲ್ಲ" ಗೋವರ್ಧನರಾಯನು ನುಡಿದು, ಚಂಪಾವತಿಯ ಮುಖವನ್ನು ಎರಡೂ ಕಣ್ಣು ತುಂಬ ನೋಡಹತ್ತಿದನು.

"ಛೇ! ಸಂಬಂಧವಿರದಿದ್ದರೆ, ಎಲ್ಲರೂ ಸಮ್ಮನಿದ್ದಾಗ ಇವಳೇ ಮುಂದೆ ಬಂದ ಕಾರಣವೇನು? ಅಪರಾಧಿಗಳ ವಿಚಾರಣೆ ನಡೆದಾಗ ಓಘದಿಂದ ತಾನೂ ಬೈಲಿಗೆ ಬರಬಹುದೆಂದು ತಿಳಿದು ಇವಳು ಅಪರಾಧಿಗಳ ಬಿಡುಗಡೆಯ ಪ್ರಯತ್ನ ನಡೆಯಿಸಿರುವಳು" ಎಂದು ಬದ್ರುದ್ದೀನಖಾನನು ನುಡಿದು, ಚಂಪಾವತಿಯನ್ನು ಕುರಿತು—"ನಿಮ್ಮ ಪೂರ್ಣ ಹೆಸರೇನು?"

"ನೀವು ನನ್ನ ಹೆಸರನ್ನು ತೆಗೆದುಕೊಂಡು ಮಾಡುವದೇನು?"

"ಹಾಂ! ಜೋಕೆ! ನಾನು ಯಾರು ಎಂಬದನ್ನು ಲಕ್ಷ್ಯದಲ್ಲಿಡಿರಿ; ಹಾಗು ಪ್ರಕರಣವು ಎಂಥದಿರುವದೆಂಬದನ್ನೂ ಮರೆಯಬೇಡಿರಿ; ವಿಚಾರಣೆ ಮಾಡುವದು ಪೋಲೀಸ ಅಧಿಕಾರಿಗಳಾದ ನಮ್ಮ ಕರ್ತವ್ಯವು ನಾನು ಕೇಳಿದಷ್ಟು ಉತ್ತರ ಕೊಡಿರಿ ಹಾಗೆ ಮಾಡದಿದ್ದರೆ ಪರಿಣಾಮವು ಒಳಿತಾಗಲಿಕ್ಕಿಲ್ಲ" ಎಂದು ಶಾಂತಿರಕ್ಷಕನು ಗರ್ಜಿಸಿದನು.

"ಅಂದರೆ? ನೀವು ನನ್ನ ಮೇಲೆಯೂ ಇಂಥದೇ ಪ್ರಸಂಗವನ್ನು ತರುವಿರೆಂದು ತಾಯಿತು." ಚಂಪಾವತಿಯು ಗಾಬರಿಯಿಂದ ನುಡಿದಳು.

"ನಿಮ್ಮ ವರ್ತನವನ್ನು ನೋಡಲಾಗಿ ನನಗೆ ಸಂಶಯ ಬಂದಿರುವದು. ಅದಕ್ಕಾಗಿ ನಿಮ್ಮನ್ನೂ ಸೆರೆಹಿಡಿಯುವದು ನನ್ನ ಕರ್ತವ್ಯವಾಗಿದೆ. ನೀವು ಕೈಮುಟ್ಟಿ ಕೊಲೆ ಮಾಡದಿದ್ದರೂ, ಕೊಲೆಗಡಕರಾದ ಈ ಅಪರಾಧಿಗಳ ಸಂಗಡಿಗರಿರಲಿಕ್ಕೇ ಬೇಕು!"

"ಅಯ್ಯೋ! ಈ ಅಪರಾಧಿಗಳ ಅತ್ಯಾಚಾರಕ್ಕೆ ಪ್ರತಿಬಂಧವನ್ನುಂಟು ಮಾಡಲು ಯಾರೂ ಸಮರ್ಥರಿಲ್ಲವೆ!" ಚಂಪಾವತಿಯು ದೈನ್ಯೋದ್ಗಾರ ತೆಗೆದು ರೋದಿಸತೊಡಗಿದಳು.

"ಶಾಂತಿರಕ್ಷಕರೆ," ಸುರೇಂದ್ರರಾಯನು ದುಃಖಿತಹೃದಯಿಯಾಗಿ—

"ನಮ್ಮ ಮೇಲೊದಗಿದ ಗಂಡಾಂತರವನ್ನು ನೋಡಿ ವ್ಯಥೆಗೊಂಡು ಏನಾದರೊಂದು ಆಡಿದ್ದಕ್ಕೆ ಚಂಪಾವತಿದೇವಿಯವರ ಮೇಲೆ ಸಂಶಯಗೊಳ್ಳಬೇಡಿರಿ.'

"ಈ ವಿಷಯದಲ್ಲಿ ಮತಪ್ರದರ್ಶನ ಮಾಡಲಿಕ್ಕೆ ನಿಮಗೆ ಅಧಿಕಾರವಿಲ್ಲ. ನೀವು ಅಪರಾಧಿಗಳಿರುವಿರಿ." ಶಾಂತಿರಕ್ಷಕನು ನಿಷ್ಠುರವಾಗಿ ಹೇಳಿದನು.

ನರೇಂದ್ರರಾಯನು ನಿರುಪಾಯನಾದನು. ಅನಂತರದಲ್ಲಿ ಅವನು ಗದ್ಗದ ಕಂಠದಿಂದ—"ಗೋವರ್ಧನರಾಯರೆ, ಹೊಣೆಯಿಂದ ನಮ್ಮ ಬಿಡುಗಡೆಯಾಗುವಂತಿಲ್ಲವೆ?"

"ಈ ಪ್ರಕರಣಕ್ಕೆ ಹೊಣೆಯು ಹುಟ್ಟುತ್ತಿದ್ದರೆ, ನಾನೇ ನಿಮಗೆ ಹೊಣೆಯಾಗಿ ಬಿಡುಗಡೆ ಮಾಡುತ್ತಿದ್ದೆನು. ಅಪರಾಧವು ಘನವಾದದ್ದಿರುವದರಿಂದ, ಹೊಣೆ ಹುಟ್ಟುವದಿಲ್ಲ. ಆದಕ್ಕಾಗಿ ನಿರುಪಾಯವಿದೆ" ಎಂದು ವಕೀಲ ಗೋವರ್ಧನರಾಯನು ತನ್ನ ಕಾನೂನಿನ ಜ್ಞಾನವನ್ನು ಪ್ರದರ್ಶಿಸಿದನು.

ಮೂರ್ಛಿತಳಾದ ರಮಾದೇವಿಯು ಜನರ ಉಪಚಾರದಿಂದ ಸಾವಧಗೊಂಡಳು. ಅನಂತರದಲ್ಲಿ ಅವಳು ಬಂದ ಗಂಡಾಂತರವನ್ನು ನೆನೆದು ದುಃಖಿಪತೊಡಗಿದಳು, ಚಂಪಾವತಿಯು ಅವಳನ್ನು ಸಮಾಧಾನಗೊಳಿಸಹತ್ತಿದ್ದಳು. ಆಗ ಪೋಲೀಸ ಅಧಿಕಾರಿಯು ಗೋವರ್ಧನರಾಯನನ್ನೂ ಗೋವಿಂದರಾಯನನ್ನೂ ಪಂಚರನ್ನಾಗಿ ಮಾಡಿಕೊಂಡು ಚಂಪಾವತಿಯ ಮನೆಯನ್ನು ಶೋಧಿಸಿದನು. ಅಲ್ಲಿ ರಾಧಾದೇವಿಯು ವಿಳಾಸವಿದ್ದ 'ಶೃಂಗಾರ ಶುಕಸಪ್ತತಿ' ಹಾಗು 'ವಾರಾಂಗನೆ' ಎಂಬ ಎರಡು ಪುಸ್ತಕಗಳು ದೊರೆತವು. ಶಿಕ್ಷಣಸಂಸ್ಥೆಯ ಮುಖ್ಯಾಧಿಕಾರಿಗಳಾದ ಕೃಷ್ಣರಾಯರೂ ಹಾಗು ಸ್ಕೂಲ ಮಿಸ್ಟ್ರೆಸ್ ರಾಧಾದೇವಿಯೂ ಮಂಚದಮೇಲೆ ಕುಳಿತು ತೆಗೆಯಿಸಿದ ಭಾವಚಿತ್ರವೂ, ರಾಧಾದೇವಿಯು ಹೆಣೆದ ಕೊರಳಪಟ್ಟಿಯೂ ದೊರೆತವು. ಕೊರಳಪಟ್ಟಿಯ ಒಂದು ಭಾಗದಲ್ಲಿ ರಾಧಾದೇವಿಯ ಹೆಸರಿದ್ದು, ಮತ್ತೊಂದು ಭಾಗದಲ್ಲಿ ಕೃಷ್ಣರಾಯರ ಹೆಸರಿತ್ತು. ರಾಧಾ-ಕೃಷ್ಣ ಆ್ಯಂಡ ಕೋದವರು ಒಮ್ಮೆ ನಸ್ಸಿನಿಂದಿದ್ದಾಗ ಎಲ್ಲರೂ ಕೂಡಿ ತೆಗೆಯಿಸಿದ ಮತ್ತೊಂದು ಭಾವಚಿತ್ರವು ಶೋಧನೆ ಮಾಡುವಾಗ ದೊರೆಯಿತು. ಆ ಚಿತ್ರದಲ್ಲಿ ರಾಧಾದೇವಿ-ವನಿತೆಯರು ಕೃಷ್ಣರಾಯರ ಎಡಬಲಗಳಲ್ಲಿ ಕುಳಿತಿದ್ದರು. ಶೋಧನೆಯಲ್ಲಿ ದೊರೆತ ಇನ್ನೊಂದು ಒಡವೆಯೆಂದರೆ, ಕೃಷ್ಣರಾಯರು ರಾಧಾದೇವಿಗೆ ಬರೆದ ಪ್ರೇಮಮಯಪತ್ರವು. ಆ ಪತ್ರವೊಂದೇ ರಾಧಾ-ಕೃಷ್ಣರ ಬಂಧುರತರ ಸ್ನೇಹದ ಪ್ರದರ್ಶನವಾಗಿತ್ತು. ಪೋಲೀಸ ಅಧಿಕಾರಿಯು ಇವೆಲ್ಲ ವಸ್ತುಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡಕೂಡಲೆ, ಗೋವಿಂದರಾಯನ ಮನಸ್ಸು ಅಲ್ಲೋಲ-ಕಲ್ಲೋಲವಾಗತೊಡ

ಗಿತು. ಇವೆಲ್ಲ ಪದಾರ್ಥಗಳು ಸರಕಾರದ ವಿಚಾರಣೆಯಲ್ಲಿ ಬಿದ್ದವೆ ದರೆ, ಕೃಷ್ಣರಾಯರು ರಾಧಾದೇವಿಯಲ್ಲಿ ಪ್ರಣಯವುಳ್ಳವರಾಗಿರುವರೆಂಬದು ಸ್ಪಷ್ಟ ವಾಗಿ ತಿಳಿದು, ತಮ್ಮ ಅಧಿಕಾರಿಗಳ, ಅದರಲ್ಲಿಯೂ ಹಿತಚಿಂತಕರ ಮುಂದೆ ಗೇಡಾಗುವವೆಂದು ಅವನು ವ್ಯಥೆಪಟ್ಟನು ಗೋವಿಂದರಾಯನು ಕೃಷ್ಣ ರಾಯರಿಂದ ಅನೇಕ ವಿಧದ ಸೌಕರ್ಯಗಳನ್ನು ಹೊಂದಿದವನಾಗಿದ್ದನು; ಮುಂದೆಯೂ ಹೆಚ್ಚಾಗಿ ಹೊಂದತಕ್ಕವನಿದ್ದನು. ಇಂಥವನು ಸಹಾಯಕರ್ತರ ವಿಷಯವಾಗಿ ಸಹಾನುಭೂತಿಯುಳ್ಳವನಾಗಿರದೇನು? ಅವನು ಗೋವರ್ಧನ ರಾಯನನ್ನು ಬೇರೆ ಕಡೆಗೆ ಒಯ್ದು, ಶೋಧನೆಯಲ್ಲಿ ದೊರೆತ ವಸ್ತುಗಳನ್ನು ಸರಕಾರದ ದೃಷ್ಟಿಗೆ ಹಾಕಬಾರದೆಂಬ ಬಗ್ಗೆ ಶಾಂತಿರಕ್ಷಕರಿಗೆ ತಿಳಿಸಬೇಕೆಂದು ಹೇಳಿದನು. ಗೋವರ್ಧನರಾಯನು ಕೃಷ್ಣರಾಯನ ಮೇಲೆ ವಕ್ರದೃಷ್ಟಿ ಯುಳ್ಳವನಾಗಿದ್ದರೂ, ರಾಧಾದೇವಿಯ ವಿಷಯವಾಗಿ ಆತ್ಮೀಯ ಭಾವನೆ ಯುಳ್ಳವನಾಗಿದ್ದನು ತನ್ನ ಪ್ರಣಯದೇವಿಯ ಕುಲಟಿತನವನ್ನು ಬೈಲಿಗೆಳಿ ಯುವ ವಸ್ತುಗಳು ಬೈಲಿಗೆ ಬೀಳಬಾರದೆಂದು ಅವನಾದರೂ ಇಚ್ಛಿಸಿದ್ದನು. ಆಗ ಅವನು ಬದ್ರುದ್ದೀನಖಾನನನ್ನು ಕುರಿತು-'ಕೊತವಾಲ ಸಾಹೇಬರೆ, ರಾಧಾದೇವಿಯವರು ಸತ್ತರೇನು?'

'ಸತ್ತಿಲ್ಲ; ಸಾಯಲಿಕ್ಕೆ ಹತ್ತಿರುವರು. ಇಷ್ಟರಲ್ಲಿ ಅವರು ತಮ್ಮ ಇಹ ಲೋಕ ಯಾತ್ರೆಯನ್ನು ಪೂರೈಸಿರಬಹುದಾಗಿದೆ'

'ಅವರು ಉಳಿಯುವ ಸಂಭವವೇ ಇಲ್ಲವೇನು?' ಗೋವರ್ಧನರಾಯನು ವ್ಯಥಿತಾಂತಃಕರಣಿಯಾಗಿ ಕೇಳಿದನು.

'ಅವರು ಉಳಿಯುವಂತಿಲ್ಲವೆಂಬ ಲಕ್ಷಣವಿದೆ. ಅವರ ಲೀಲೆಗಳು ಇನ್ನೂ ಸೃಷ್ಟಿಯಲ್ಲಿ ನಡೆಯಬೇಕೆಂದು ದೇವರ ಇಚ್ಛೆಯಿದ್ದರೆ, ಒಂದು ವೇಳೆ ಉಳಿದರೂ ಉಳಿಯ ಬಹುದು.'

ಕೊತವಾಲನ ಮಾರ್ಮಿಕ ಮಾತುಗಳು ಗೋವರ್ಧನರಾಯನ ಮನ ಸ್ಸಿಗೆ ನಟ್ಟವು ಅವನು ತನ್ನ ಮನಸ್ಸಿನೊಳಗಿನ ಯಾವ ಭಾವಗಳನ್ನೂ ವ್ಯಕ್ತಿಪಡಿಸದೆ—'ಕೊತವಾಲಸಾಹೇಬರೆ, ಚಂಪಾವತಿ ದೇವಿಯವರ ಮನೆ ಯನ್ನು ಹುಡುಕಿ ಹೊರಗೆ ತೆಗೆದ ಈ ಒಡವೆಗಳಿಂದ ಪ್ರಸ್ತುತದ ಕೊಲೆಯ ಪ್ರಕರಣದಲ್ಲಿ ಯಾವ ಉಪಯೋಗವಾಗುವದು?'

'ಸದ್ಯದ ಪ್ರಕರಣದಲ್ಲಿ ಈ ಒಡವೆಗಳು ಉಪಯೋಗವಾಗುವದೆಂದೇ ನಾನು ಇವುಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡಿರುವೆನು.'

'ಇವು ಕೊಲೆಗೆ ಸಂಬಂಧಿಸಿದ ಒಡವೆಗಳೇ ಇರುವದಿಲ್ಲ. ರಾಧಾ

ದೇವಿಯವರು ಈ ಚಂಪಾವತಿದೇವಿಯವರ ಗೆಳತಿಯರು; ಆದ್ದರಿಂದ ಅವರ ಕೆಲವು ಒಡವೆಗಳು ಇವರಲ್ಲಿರುವವು.'

'ಗೋವರ್ಧನರಾಯರೆ!' ಕೊತವಾಲನು ಸಿಟ್ಟಿನಿಂದ-'ನೀವು ವಕೀಲರಿದ್ದು ಹೀಗ್ಗರಂತೆ ಹೀಗೇಕೆ ಅಭಿಪ್ರಾಯ ಕೊಡುವಿರಿ? ಈ ಒಡವೆಗಳು ನಿಮಗೆ ಮಹತ್ವದವಲ್ಲೆಂದು ತೋರುತ್ತಿರುವದೇನು? ಶೋಧನೆಯ ಕಾರ್ಯ ನಡೆಯಿಸಿದಾಗ ಇವುಗಳ ಉಪಯೋಗವು ಹೇಗೆ ಆಗುವದೆಂಬದು ನಿಮಗೆ ತಿಳಿಯುವದು.'

'ಒಂದು ವೇಳೆ ಉಪಯೋಗವಾಗಬಹುದು; ಆದರೆ ಇವುಗಳಲ್ಲಿ ಎಜ್ಯುಕೇಶನಲ್ ಇನಸ್ಪೆಕ್ಟರರಂತಹ ದೊಡ್ಡ ಅಧಿಕಾರಿಗಳ ಗೌರವಕ್ಕೆ ಕುಂದು ತರುವ ಕೆಲವು ಒಡವೆಗಳು ಹೊರಟಿರುವದರಿಂದ, ಇವುಗಳನ್ನು ಸರಕಾರದ ದೃಷ್ಟಿಗೆ ಹಾಕಬಾರದೆಂದು ಹೇಳುವೆನು.'

'ನನ್ನ ಇಚ್ಛೆಯು ಹಾಗಿಲ್ಲ. ಕೃಷ್ಣರಾಯರ ಮಾನಗೇಡು ಮಾಡುವಂತಹ ಒಡವೆಗಳು ದೊರೆತರೆ. ಅವುಗಳನ್ನು ಮನಃಪೂರ್ವಕವಾಗಿ ಸರಕಾರದ ದೃಷ್ಟಿಗೆ ಹಾಕಬೇಕೆಂಬದೇ ನನ್ನ ನಿಶ್ಚಯ.'

ಗೋವರ್ಧನರಾಯನು ಜಪ್ತಿಯ ಒಡವೆಗಳನ್ನು ಸರಕಾರದ ಸ್ವಾಧೀನಕ್ಕೆ ಕೊಡಬಾರದೆಂದು ಯತ್ನಿಸವದಕ್ಕೆ ಇನ್ನೊಂದು ಬಲವಾದ ಕಾರಣವಿತ್ತು. ರಾಧಾದೇವಿಯು ಉಳಿದರಂತೂ ತನ್ನ ಉಪಕೃತಿಯಿಂದ ಅವಳು ಸಂತೋಷಪವುಳ್ಳವಳಾಗುವಳು; ಮರಣ ಹೊಂದಿದರೆ ಚಂಪಾವತಿಯಾದರೂ ಮಾಡಿದ ಉಪಕಾರವನ್ನು ನೆನೆದು ತನ್ನ ಪ್ರೇಮಪಾಶದಲ್ಲಿ ಸಿಲುಕುವಳೆಂದು ಅವನು ತಿಳಿದನು ಒಟ್ಟಿನ ಮೇಲೆ ಚಂಪಾವತಿಯ ಮನೆಯಲ್ಲಿಯ ಒಡವೆಗಳನ್ನು ಸರಕಾರದ ದೃಷ್ಟಿಗೆ ಹಾಕಿಸದಿದ್ದರೆ, ಒಂದಿಲ್ಲೊಂದು ಬಗೆಯಿಂದ ತನಗೆ ಲಾಭವೇ ಆಗುವದೆಂದು ತಿಳಿದು, ಅವನು ಸಾಹಸ ಮಾಡತೊಡಗಿದ್ದನು; ಆದರೆ ಕೊತವಾಲನ ನಿಶ್ಚಯದ ಮುಂದೆ ಅವನ ಆಟವು ನಡೆಯದಾಯಿತು. ಕೊತವಾಲನು ಕೃಷ್ಣರಾಯರ ವಿಷಯವಾಗಿ ವಕ್ರದೃಷ್ಟಿಯುಳ್ಳವನಾಗಿದ್ದನು; ಯಾಕಂದರೆ, ಅವನ ತಂಗಿಯಾದ ಸೋಫಿಯಾ ಬೇಗಮಳು ಸ್ಕೂಲಮಿಸ್ಟ್ರೆಸ್ಸಳಿದ್ದಾಗ ಅವಳ ಮೇಲೆ ಕೃಷ್ಣರಾಯರು ತಮ್ಮ ಪಾತಕೀ ದೃಷ್ಟಿಕ್ಷೇಪ ಮಾಡಿದ್ದರು. ಸೋಫಿಯಾಳು ಕುಲೀನ ಯುವತಿಯಿದ್ದುದರಿಂದ ಅವರ ಪ್ರೇಮಪಾಶಕ್ಕೊಳಗಾಗಲಿಲ್ಲ. ಅವಳು ಆಗಿಂದಾಗ ಶಿಕ್ಷಣ ವ್ಯವಸಾಯವನ್ನು ಬಿಟ್ಟು ಕೊಟ್ಟಿದ್ದಳು. ತನ್ನ ತಂಗಿಯ ಮೇಲೆ ಅತ್ಯಾಚಾರ ಮಾಡಲಿಕ್ಕೆ ಪ್ರವೃತ್ತರಾಗಿದ್ದ ಕೃಷ್ಣರಾಯರ ಮಾನಹಾನಿಯಾಗಬೇಕೆಂಬದೇ ಬದ್ರುದ್ದೀನಖಾನನ

ಬಲವಾದ ಇಚ್ಛೆಯಿತ್ತು. ಇಂತಹ ಪರಿಸ್ಥಿತಿಯಲ್ಲಿ ಗೋವರ್ಧನರಾಯನ ಪ್ರಯತ್ನವು ಹೇಗೆ ಸಫಲವಾಗಬೇಕು?

“ಕೊತವಾಲಸಾಹೇಬರೆ, ನೀವು ಕೃಷ್ಣರಾಯರಲ್ಲಿ ಈ ಬಗೆಯ ವಕ್ರ ದೃಷ್ಟಿಯವರಾದ ಕಾರಣವೇನು?”

“ವಕೀಲರೆ, ನನ್ನ ಭಗಿನಿಯಾದ ಸೋಫಿಯಾ ಬೇಗಮಳು ಅವರ ದುರ್ಗುಣಗಳ ಮೂಲಕವಾಗಿಯೆ ಶಿಕ್ಷಣ ವ್ಯವಸಾಯವನ್ನು ಬಿಟ್ಟಳು. ಸರಕಾರೀ ಕೆಲಸದ ನಿಮಿತ್ತವನ್ನು ಮುಂದೆ ಮಾಡಿ ಅವಳನ್ನು ಶಾಲೆಯೊಳಗಿನ ಒಂದು ತೆರವಿದ್ದ ಕೋಣೆಯಲ್ಲಿ ಕರೆದು, ಕೃಷ್ಣರಾಯರು ತಮ್ಮ ನೀಚ ಮನೋದಯವನ್ನು ವ್ಯಕ್ತಪಡಿಸಿದರು. ಅವರ ಮಾತಿಗೆ ಸಾಧ್ವಿಯಾದ ಸೋಫಿಯಾಳು ರುಷ್ಟಳಾದಳು. ಕೃಷ್ಣರಾಯರು ರೋಷದ ಕಡೆಗೆ ಲಕ್ಷಿಸದೆ, ಅವಳ ಕೈ ಹಿಡಿಯುವ ಸಾಹಸ ಮಾಡಿದರು; ಆದರೆ ಸೋಫಿಯಾಳು ಕುಶಲತೆಯಿಂದ ಜಾರಿ ಮನೆಗೆ ಬಂದಳು. ಮುಂದೆ ಸ್ವಲ್ಪ ದಿನಗಳಲ್ಲಿ ನೌಕರಿಯಿಂದ ಕಡಿಮೆ ಮಾಡಿದ ಆಜ್ಞಾಪತ್ರವು ಅವಳಿಗೆ ದೊರೆಯಿತು. ಇಂತಹ ನೀಚ ಮನೋವೃತ್ತಿಯವರಾದ ಕೃಷ್ಣರಾಯರ ಮೇಲಿನ ಸೇಡು ತೀರಿಸಿಕೊಳ್ಳದೆ ನಾನು ಹೇಗೆ ಇರಲಿ?”

ಗೋವರ್ಧನರಾಯನು ನಿರುಪಾಯನಾದನು. ಪೋಲೀಸ ಅಧಿಕಾರಿಯ ಆಜ್ಞೆಯ ಮೇರೆಗೆ ಸುರೇಂದ್ರರಾಯನ ಕೈಗಳು ಶೃಂಖಲಾಬದ್ಧವಾದವು. ಅಷ್ಟರಲ್ಲಿ ಎರಡು ಬಂಡಿಗಳು ಸಿದ್ಧವಾಗಿದ್ದವು. ಒಂದು ಬಂಡಿಯಲ್ಲಿ ಸುರೇಂದ್ರರಾಯನೂ ಪೋಲೀಸ ಅಧಿಕಾರಿಯೂ ಕುಳಿತರು; ಮತ್ತೊಂದು ಬಂಡಿಯಲ್ಲಿ ಚಂಪಾವತಿ-ರಮಾದೇವಿಯರು ಕುಳಿತರು. ಆಗ ರಮಾದೇವಿಯು ತನ್ನ ಬಗಲಲ್ಲಿದ್ದ ವಸಂತನನ್ನು ಕುರಿತು—“ಬಾಲಕಾ, ನೀನು ಹುಟ್ಟಿದ ಒಂದು ವರ್ಷದೊಳಗಾಗಿ ಸೆರೆಮನೆಯನ್ನು ಕಾಣುವ ಪ್ರಸಂಗವೊದಗಿತಲ್ಲ!” ಎಂದು ಗದ್ಗದ ಸ್ವರದಿಂದ ನುಡಿದಳು. ಬಂಡಿಗಳು ಪೋಲೀಸ ಚಾವಡಿಯ ದಾರೀ ಹಿಡಿದವು. ಸದ್ಗುಣಿಗಳಾದ ದಂಪತಿಗಳಿಗೊದಗಿದ ದುರವಸ್ಥೆಯನ್ನು ನೋಡಿ, ಓಣಿಯೊಳಗಿನ ಜನರೆಲ್ಲರು ಮರಮರನೆ ಮರಗುತ್ತ ಕಣ್ಣೀರಿಟ್ಟರು!

## ಸಾಹೇಬರ ಅನುಗ್ರಹ.

ರಾಧಾದೇವಿಯ ಕೊಲೆಯ ಪ್ರಯತ್ನ ನಡೆದ ಸಂಗತಿಯು ಕೃಷ್ಣರಾಯರಿಗೆ ಆಗಿಂದಾಗ ತಿಳಿಯಿತು. ಕೂಡಲೆ ಅವರು ರಾಧಾದೇವಿಯ ಮನೆಗೆ ಹೋದರು. ಅವಳು ಇನ್ನೂ ಎಚ್ಚರದಲ್ಲಿದ್ದಳು. ಸಾಹೇಬರು ಹೋದ ಕೂಡಲೆ ಕೂಡಿದ ಜನರು ದೂರ ಸರಿದರು. ಆಗ ಅವರು ಬಳಿಯಲ್ಲಿದ್ದ ತಮ್ಮ ಸಿಪಾಯಿಗೆ ಪೋಲೀಸರನ್ನು ಕರೆದುಕೊಂಡು ಬರಲಿಕ್ಕೆ ಆಜ್ಞಾಪಿಸಿದರು. ಅನಂತರದಲ್ಲಿ ಅವರು ಮೆಲ್ಲನೆ ರಾಧಾದೇವಿಗೆ ಏನೇನೋ ಹೇಳಿದರು. ಸ್ವಲ್ಪ ವೇಳೆಯಲ್ಲಿ ಪೋಲೀಸ ಅಧಿಕಾರಿಗಳು ಅಲ್ಲಿಗೆ ಬಂದರು. ರಾಧಾದೇವಿಯು ಕೊಲೆ ಮಾಡಬಂದವನು ಸುರೇಂದ್ರರಾಯನಿರಬಹುದೆಂದು ಜಬಾನಿ ಕೊಟ್ಟಳು. 'ಅಂದೇ ಹಗಲು ಅವನ ಪತ್ನಿಯು ನನ್ನ ಸಂಗಡ ನಿಷ್ಕಾರಣವಾಗಿ ಜಗಳಾಡಿದಳು. ಅದೇ ಸಿಟ್ಟಿನಿಂದ ಸುರೇಂದ್ರನು ತನ್ನ ಕೊಲೆ ಮಾಡಲಿಕ್ಕೆ ಬಂದಿರಬಹುದು. ಅವನು ನನ್ನ ಮೇಲೆ ಬಹು ದಿನಗಳಿಂದ ಪಾಪದೃಷ್ಟಿಯನ್ನಿಟ್ಟಿದ್ದನು. ತನ್ನ ಪಾತಕೀ ಲಾಲಸೆಯು ಈಡೇರದ್ದರಿಂದ ಅವನು ಹಲ್ಲು ತಿನ್ನುತ್ತಿದ್ದನು. ಇಂದು ಅವನು ತನ್ನ ಸಿಟ್ಟು ತೀರಿಸಿಕೊಂ-ಡನು' ಈ ಆಶಯದ ಜಬಾನಿಯು ರಾಧಾದೇವಿಯಿಂದ ಕೊಡಲ್ಪಟ್ಟಿತು. ಈ ಜಬಾನಿಗೆ ಕೃಷ್ಣರಾಯರೇ ಪ್ರೇರಕರಾಗಿದ್ದರು. ಇಷ್ಟು ಜಬಾನಿಯಾದೊಡನೆಯೆ ರಾಧಾದೇವಿಯು ಮೂರ್ಛಿತಳಾದಳು. ಪೋಲೀಸರು ಪಂಚನಾಮೆ ಮಾಡಿ ಅವಳನ್ನು ರುಗ್ಣಾಲಯಕ್ಕೆ ಕಳಿಸಿದರು. ಮಾರನೆಯ ದಿನವೇ ಪೋಲೀಸರು ಯಥಾವಿಧಿಯಾಗಿ ಸುರೇಂದ್ರರಾಯನನ್ನೂ, ಅವನ ಹೆಂಡತಿಯಾದ ರಮಾದೇವಿಯನ್ನೂ, ಅವರೊಡನೆ ಚಂಪಾವತಿಯನ್ನೂ ಸೆರೆಹಿಡಿದೊಯ್ದರು.

ರಾಧಾದೇವಿಯು ಉಳಿಯುವದಿಲ್ಲವೆಂದೇ ಎಲ್ಲರ ಅಭಿಪ್ರಾಯವಿತ್ತು. ಈ ಸಂಗತಿಯನ್ನು ಕೇಳಿ ಕೃಷ್ಣರಾಯರು ಗಾಬರಿಯಾದರು. ತನ್ನ ಬಲಗೈಯಂತಿದ್ದ ರಾಧಾದೇವಿಯ ವಿಯೋಗವೆಲ್ಲಾಗುವದೋ ಎಂದು ಅವರು ಬಹುಪರಿಯಾಗಿ ಚಿಂತಿಸಿದರು. ಆಗ ಅವರು ರುಗ್ಣಾಲಯಕ್ಕೆ ಹೋಗಿ ಡಾಕ್ಟರರ ಅಭಿಪ್ರಾಯವನ್ನು ಕೇಳಿದರು. 'ಈಗ ಯಾವ ವಿಧದ ಅಭಿಪ್ರಾಯ ಕೊಡಲಿಕ್ಕೆ ಬರುವಂತಿಲ್ಲ; ಆದರೂ ಬಹುಮಟ್ಟಿಗೆ ಜೀವಕ್ಕೆ ಅಪಾಯ ತಟ್ಟಲಾರದು.' ಈ ಮೇರೆಗೆ ಡಾಕ್ಟರರು ಕೃಷ್ಣರಾಯನಿಗೆ ತಮ್ಮ ಅಭಿಪ್ರಾಯ ತಿಳಿಸಿದ್ದರಿಂದ, ಅವರು ಇದ್ದದ್ದರಲ್ಲಿಯೇ ಸಂಭ್ರಮಗೊಂಡು ಮನೆಗೆ ಬಂದರು.

ರಾಧಾದೇವಿಯು ಸಾಯದೆ ಉಳಿಯುವಳೆ
ರಿಗೆ ಬಲವಾದ ನಂಬಿಗೆಯಿದ್ದಿಲ್ಲ ಒಂದುವೇಳೆ ಅ
ಪ್ರಕೃತಿಯು ಗುಣಹೊಂದುವಂತೆಯೂ ಇದ್ದಿಲ್ಲ.
ಯೋಚನೆಗೊಳಗಾದರು. ತಮ್ಮ ವಿಲಾಸದೇವ
ವಿಯೋಗದಿಂದ ಅವರಿಗೆ ಹೇಳಕೂಡದಷ್ಟು ವ್ಯಸನವಾಗಿತ್ತು. ಅಂತಹ ಸ್ವರ್ಗೀಯ ಸುಂದರಿಯರು ಶಿಕ್ಷಣಸಂಸ್ಥೆಯಲ್ಲಿ ಯಾರೂ ಇದ್ದಿಲ್ಲ ಯಾರಾದರೂ ಇದ್ದರೆ ಅವರಿಗೆ ಇಂದಿನಂತೆ ದುಃಖವಾಗುತ್ತಿರಲಿಲ್ಲ. ಇತ್ತೀಚೆಗೆ ಅವರ ಅನುಗ್ರಹಕ್ಕೆ ಪಾತ್ರಳಾದವಳೆಂದರೆ, ಸೌಭಾಗ್ಯವತಿ ವನಿತೆಯು. ವನಿತೆಯು ಅಷ್ಟೊಂದು ಚಲುವೆಯಿರದ್ದರಿಂದ ಅವಳು ರಾಧಾದೇವಿಯನ್ನು ಮರೆಯಿಸುವ ಸಂಭವವಿದ್ದಿಲ್ಲ. ಆದ್ದರಿಂದ ಮುಂದೆ ಹೇಗೆ ಮಾಡಲಿ ದೇವರೆ! ಎಂದು ಅವರು ಚಿಂತಿಸುತ್ತಿದ್ದರು. ರೂಪವತಿ ಸ್ತ್ರೀಯರ ಸಲುವಾಗಿ ಶಿಕ್ಷಣಸಂಸ್ಥೆಯ ಪ್ರವೇಶದ್ವಾರವು ಯಾವಾಗಲೂ ತೆರೆದಿಟ್ಟಿದ್ದರೂ, ಇಷ್ಟು ದಿನಗಳ ಪ್ರಯತ್ನದಲ್ಲಿ ಯಾವ ಸುರೂಪೆಯಾದ ತರುಣಿಯರೂ ಅಲ್ಲಿ ಪ್ರವೇಶವಾಗದ್ದನ್ನು ನೋಡಿ, ಅವರು ಜನರ ಅರಸಿಕತೆಯ ಬಗ್ಗೆ ತಿರಸ್ಕಾರಗೊಂಡರು.

ಕೃಷ್ಣರಾಯರು ತಮ್ಮ ದಿವಾಣಖಾನೆಯಲ್ಲಿ ಯೋಚನೆಗೊಳಗಾಗಿ ಕುಳಿತಿದ್ದರು. ಆಗ ಅವರ ಸೇವಕನು ಅಲ್ಲಿಗೆ ಬಂದು, ಜವುಳಕೇದಗಿಹಳ್ಳಿಯ ಶಿಕ್ಷಕರು ತಮ್ಮ ಭೆಟ್ಟಿಗಾಗಿ ಬಂದಿರುವರೆಂದು ಹೇಳಿದನು.

ಕೃಷ್ಣರಾಯರಿಗೆ ಯಾರ ಭೆಟ್ಟಿಯೂ ಬೇಕಾಗಿದ್ದಿಲ್ಲ. ಅದರಲ್ಲಿ ಪುರುಷರ ಭೆಟ್ಟಿಯು ತೀರ ಅನವಶ್ಯಕವೆನಿಸಿತ್ತು. ಜವುಳಕೇದಗೀಹಳ್ಳಿಯ ಶಿಕ್ಷಕನಾದ ದಿವಾಕರರಾಯನು ಅವರ ವಕ್ರದೃಷ್ಟಿಗೆ ಗುರಿಯಾದವನಿದ್ದುದರಿಂದ, ಅವನಿಗೆ ಭೆಟ್ಟಿಯನ್ನು ಕೊಡಲಿಕ್ಕೆ ಕೃಷ್ಣರಾಯರ ಮನಸ್ಸಾಗಲಿಲ್ಲ. ಆಗ ಅವರು ಸೇವಕನನ್ನು ಕುರಿತು—'ಸಾಹೇಬರು ನಿಮ್ಮನ್ನು ಭೆಟ್ಟಿಯಾಗಲಿಚ್ಛಿಸುವದಿಲ್ಲವೆಂದು ದಿವಾಕರನಿಗೆ ತಿಳಿಸು' ಎಂದು ಹೇಳಿದರು.

ಸೇವಕನು ಹೊರಗೆ ಹೋಗಿ, ಮತ್ತೆ ಒಳಗೆ ಬಂದು—'ಸಾಹೇಬರೇ, ತಮ್ಮ ಭೆಟ್ಟಿಯಾಗದೆ ಹೋಗುವಂತಿಲ್ಲವೆಂದು ಅವರು ಅನ್ನುತ್ತಾರೆ. ಅವರು ತಮ್ಮ ಕಡೆಗೆ ಕೊಡುವದಕ್ಕಾಗಿ ಅರ್ಜಿಯನ್ನು ತಂದಿರುವರಂತೆ. ಅವರು ಒಳ್ಳೇ ವಿಪತ್ತಿಗೆ ಈಡಾಗಿರುವಂತೆ ಕಾಣುವರು.'

'ಒಳ್ಳೇದು. ಅವರನ್ನು ಕಳಿಸು' ಎಂದು ಕೃಷ್ಣರಾಯರು ಘನವಂತಿಕೆಯನ್ನು ವ್ಯಕ್ತಪಡಿಸಿದರು.

ದಿವಾಕರರಾಯನು ಒಳಗೆ ಬಂದು ಸಾಹೇಬರಿಗೆ ನಮಸ್ಕಾರ ಮಾಡಿ, ಒಂದು ಅರ್ಜಿಯನ್ನು ಕೊಟ್ಟನು. ಆ ಅರ್ಜಿಯನ್ನು ಓದಿದ ಕೂಡಲೆ ಸಾಹೇಬರು ಸಂತಾಪಗೊಂಡರು. ಆಗ ಅವರು ಕರ್ಕಶ ವಾಣಿಯಿಂದ— ನಿಮ್ಮಂತಹರ ಹಿತಚಿಂತನೆಗಾಗಿಯೆ ಸರಕಾರದ ಅಸ್ತಿತ್ವವಿಲ್ಲ. ಈಗ ನಿಮಗೆ ಯಾವ ರಜೆಯೂ ದೊರೆಯುವದಿಲ್ಲ; ನಿಮ್ಮ ವರ್ಗವೂ ಆಗುವದಿಲ್ಲ; ನನಗೆ ಮಾತಾಡುತ್ತ ಕುಳಿತುಕೊಳ್ಳಲಿಕ್ಕೆ ವೇಳೆಯೂ ಇಲ್ಲ. ಬೇಗನೆ ಹೊರಡಿರಿ!'

'ಸಾಹೇಬರೆ!' ಕೃಷ್ಣರಾಯರ ಮಾತುಗಳನ್ನು ಕೇಳಿ ಕಡುಕಷ್ಟಿಯಾದ ದಿವಾಕರರಾಯನು ಕೈಜೋಡಿಸಿ—'ಜವುಳಕೇದಗೀಹಳ್ಳಿಯ ನೀರೂ, ಹವೆಯೂ ನನಗೆ ತಡೆಯಲೊಲ್ಲವು. ಅಲ್ಲಿಯ ಹವೆ-ನೀರುಗಳು ತೀರ ರೋಗಕಾರಕವುಂಟು. ಅಲ್ಲಿಗೆ ಹೋದ ಎರಡು ತಿಂಗಳಲ್ಲಿಯೇ ನನ್ನ ಪತ್ನಿಯು ದುರ್ಜಲಜನಿತ ಜ್ವರದಿಂದ ಮೃತಪಟ್ಟಳು. ನಾನಾದರೂ ಅದೇ ಪಥದಲ್ಲಿರುವೆನು. ಮೊದಲು ಕಗ್ಗಾರ ಹೊನ್ನೀಹಳ್ಳಿಗೆ ವರ್ಗಮಾಡಿದ್ದಿರಿ. ಅಲ್ಲಿ ನೀರಿರದಿದ್ದರೂ ಜೀವಕ್ಕೆ ಭಯವಿದ್ದಿಲ್ಲ. ಎರಡು ಹರದಾರಿಯ ಮೇಲಿಂದ ನೀರು ತಂದಾದರೂ ಬದುಕುತ್ತಿದ್ದೆವು; ಆದರೆ ಜವುಳಕೇದಗಿಹಳ್ಳಿಯಲ್ಲಿಯೆ ಬಲಿಕೊಡುವ ಯೋಗವಿದ್ದುದರಿಂದ, ನನಗೆ ಹೊನ್ನೀಹಳ್ಳಿಯು ಎರವಾಯಿತು. ನಾನು ಸಾವಿಗೆ ಅಂಜುವದಿಲ್ಲ. ಇರುವವರೆಗೆ ಜೀವನಯಾತ್ರೆಯಾದರೂ ನಡೆಯಬೇಕಷ್ಟೆ? ಜಲೋದರ ಬೆಳೆದು ನಾನು ಕೆಲಸ ಮಾಡಲಿಕ್ಕೆ ಅಸಮರ್ಥನಾಗಿರುವೆನು. ನನ್ನ ಮೂರು ತಿಂಗಳ ಪೂರ್ಣ ವೇತನದ ರಜೆಯಿದೆ. ಅದು ನನಗೆ ದೊರೆತರೆ ಔಷದೋಪಚಾರ ಹೊಂದುವೆನು ಪ್ರಕೃತಿಯು ಸುಧಾರಿಸಿದಮೇಲೆ ನಾನು ನನ್ನ ಸ್ಥಳದಲ್ಲಿ ಹೋಗಿ ಕೆಲಸಮಾಡಹತ್ತುವೆನು. ದಯಮಾಡಿ ನನಗೆ ಪೂರ್ಣವೇತನದ ರಜೆಯನ್ನು ದಯಪಾಲಿಸಿರಿ.'

'ನಿಮಗೆ ಈಗ ಯಾವ ವಿಧದ ರಜೆಯೂ ದೊರೆಯಲಾರದು. ಪೂರ್ಣ ಪಗಾರದ ರಜೆಯೆಂದರೆ, ಅದು ನಿಮ್ಮ ಸ್ವತ್ತೆಂದು ತಿಳಿದಿರುವಿರೇನು?'

'ಹಾಗೇನೂ ತಿಳಿದಿಲ್ಲ. ರಜೆಯು ಇರುವದೆಂದು ಕೇಳಿದೆನು.'

'ಕೇಳಲಿಕ್ಕೆ ನಿಮ್ಮದೇನು ಗಂಟು ಹೋಗುವದು?'

'ಹಾಗಾದರೆ ಬೇನೆಯ ರಜೆಯನ್ನು ಕೊಡಿರಿ.'

'ನೀವು ಕೆಲಸ ಮಾಡದಂತಹ ಅವಸ್ಥೆಗೀಡಾಗಿಲ್ಲ. ಹೀಗಿದ್ದ ಮೇಲೆ ಬೇನೆಯ ರಜೆಯು ಹೇಗೆ ದೊರೆಯಬೇಕು? ಜವುಳಕೇದಗಿಹಳ್ಳಿಯಲ್ಲಿ ವಾಸಿಸುವವರಾದ ನಿಮಗೆ ಹನ್ನೆರಡು ತಿಂಗಳೂ ಬೇನೆ ಬಿಡುವದಿಲ್ಲ. ಅಂದ ಮೇಲೆ ನಿಮಗೆ ಬೇನೆಯ ರಜೆಯನ್ನು ಕೊಡುವ ಬಗೆ ಹೇಗೆ?"

'ಸಾಹೇಬರೆ!' ದಿವಾಕರರಾಯನು ದೀನವಾಣಿಯಿಂದ—'ಸಾಧಾರಣ ಬೇನೆಯಿದ್ದರೆ ನಾನು ರಜೆಯನ್ನೇಕೆ ಬೇಡಲಿ? ಅವಶ್ಯವೆನಿಸಿದರೆ ಡಾಕ್ಟರರ ಅಭಿಪ್ರಾಯ ಪತ್ರಿಕೆಯನ್ನು ತಂದು ಕೊಡುವೆನು.'

'ಸಮಕ್ಷ ನೋಡಿರಲು ಡಾಕ್ಟರರ ಅಭಿಪ್ರಾಯದ ಅವಶ್ಯಕತೆಯಿಲ್ಲ.'

'ಸಾಹೇಬರೇ, ನನ್ನ ಅವಸ್ಥೆಯನ್ನು ನೋಡಿ ದಯೆದೋರಿರಿ. ಜವುಳ ಕೇದಗಿಹಳ್ಳಿಯಿಂದ ನನ್ನನ್ನು ವರ್ಗಮಾಡದಿದ್ದರೆ ನನ್ನ ಆಯುಷ್ಯವು ಕೆಲವು ದಿನಗಳಲ್ಲಿ ಮುಗಿದು ಹೋಗುವದು. ನನ್ನ ಪೂರ್ಣ ಪಗಾರದ ಮೂರು ತಿಂಗಳ ರಜೆಯುಂಟು. ಅದನ್ನು ಕೊಡಲಿಕ್ಕೆ ಅನುಕೂಲವಿಲ್ಲದಿದ್ದರೆ, ಅರ್ಧ ವೇತನದ ಬೇನೆಯ ರಜೆಯನ್ನು ಕೊಡಿರಿ; ಅಂದರೆ ನಾನು ಉಳಿಯುವೆನು.'

'ಮಾಸ್ತರರೆ, ಈ ವೇಳೆಯಲ್ಲಿ ನನಗೆ ತೊಂದರೆ ಕೊಡಬೇಡಿರಿ. ತಿಂಗಳೊಪ್ಪತ್ತು ಬಿಟ್ಟು ನಿಮ್ಮ ರಜೆಯ ವಿಚಾರ ಮಾಡುವೆನು. ಬೇನೆಯ ಅಥವಾ ಪೂರ್ಣ ವೇತನದ ರಜೆಯಂತೂ ನಿಮಗೆ ದೊರೆಯಲಾರದು. ಬಿನ್ ಪಗಾರಿ ರಜೆಯ ಬಗ್ಗೆ ವಿಚಾರ ಮಾಡುವೆನು.'

ದಿವಾಕರರಾಯನ ಎದೆಗೆ ಕಲ್ಲು ಬಡೆದಂತಾಯಿತು. ಬೇನೆ ಬಿದ್ದು ಸಾಯಲಿಕ್ಕೆ ಹತ್ತಿದಾಗ ಪೂರ್ಣ ವೇತನದ ಹಾಗು ಬೇನೆಯ ರಜೆಯು ದೊರೆಯುವದೊತ್ತಟ್ಟಿಗುಳಿದು, ವೇತನವಿಲ್ಲದ ರಜೆಯು ದೊರೆಯುವದಕ್ಕಾದರೂ ತಿಂಗಳೊಪ್ಪತ್ತು ಅವಧಿಬೇಕಾದದ್ದು ನೋಡಿ ಅವನಿಗೆ ಮರಣಪ್ರಾಯ ದುಃಖವಾಯಿತು. ವರಿಷ್ಠರೆದುರಿಗೆ ಹೆಚ್ಚಿಗೆ ಮಾತಾಡುತ್ತಾನೇನು? ಅಧಿಕಾರಿಗಳು; ಅದರಲ್ಲಿ ಕೃಷ್ಣರಾಯರಂತಹ ಅಧಿಕಾರಿಗಳ ಮೆಚ್ಚುಗೆ ಪಡೆಯುವಂತಹ ಒಂದಾದರೂ ಕೃತಿಗಳು ಅವನಿಂದ ಘಟಿಸಿದ್ದಿಲ್ಲವೆಂದ ಮೇಲೆ ಅವನಿಗೆ ಸುಖವಾಗುವದೆಂತು? ಅಂದ ಚಂದ ಪತ್ನಿಯರನ್ನು ಸಾಹೇಬರ ಉಡಿಯಲ್ಲಿ ಹಾಕುವ ಇಲ್ಲವೆ ಅವ ಈ ಕಾಮದೇವನ ಕಾರಭಾರದಲ್ಲಿ ಹೂವಿನಂತಲ್ಲದಿದ್ದರೂ ಹೂವಿನ ಪಕಳೆಯಂತೆ ನೆರವು ಮಾಡುವ ಕೃತಿಗಳು ಇಷ್ಟು ವರ್ಷಗಳ ನೌಕರಿಯ ಅವಧಿಯಲ್ಲಿ ಒಂದಾದರೂ ಘಟಿಸದಿದ್ದದ್ದು ಕೃಷ್ಣರಾಯರ ದೃಷ್ಟಿಯಿಂದ ಅಕ್ಷಮ್ಯವಾದ ಅಪರಾಧವೆನಿಸದಿರುವದೆ? ಅದರಲ್ಲಿ ದಿವಾಕರರಾಯನು ಒಂದು ದೊಡ್ಡ ಅಪರಾಧ ಮಾಡಿದ್ದರಿಂದ ಅಗ್ಗಾರ ಹೊನ್ನೀಹಳ್ಳಿಗೂ ಅಲ್ಲಿಂದ ಜವುಳ ಕೇದಗೀ ಹಳ್ಳಿಗೂ ಕಳಿಸಲ್ಪಟ್ಟಿದ್ದನು. ಅವನ ಅಪರಾಧವೆಂದರೆ, ಅದು ಘನತರವಾದದ್ದಿತ್ತು. ಅವನು ವರಿಷ್ಠರ ಪರಿವೆಯಿಲ್ಲದೆ, ಅವರ ದುರ್ಗುಣಗಳನ್ನು ಟೀಕಿಸುವ ಗೋವರ್ಧನರಾಯ–ಮಾಧವರಾಯರಂತಹ ಜನರ ಸ್ನೇಹ ಬಳೆಯಿಸಿ, ಅವರ ಅನುಕರಣ

ಮಾಡಿದ್ದನು. ತಮ್ಮ ಕೈ ಕೆಳಗಿನ ಕೆಲಸಗಾರನು ತಮ್ಮನ್ನು ಟೀಕಿಸುವದು ಯಾವ ಅಧಿಕಾರಿಗಳಿಗೆ ಸಹನವಾಗುವದು? ಅದರಲ್ಲಿ ಕೃಷ್ಣರಾಯರಂತಹ ಸರ್ವತಂತ್ರ ಸ್ವತಂತ್ರರೂ ನಿಗ್ರಹಾನುಗ್ರಹ ಶಕ್ತಿಸಂಪನ್ನರೂ ಶಿಕ್ಷಣಸಂಸ್ಥೆಯ ವಿಧಾತರೂ ಆದವರು ಅವನ ಅಪರಾಧವನ್ನು ಕ್ಷಮಿಸುವರೆ? ವರಿಷ್ಠರ ಕ್ಷೋಭೆಗೆ ಪಾತ್ರನಾಗಿದ್ದ ದಿವಾಕರರಾಯನು ನೌಕರಿಯಿಂದ ಉಳಿದದ್ದೇ ಸುಕೃತವು!

ಕೃಷ್ಣರಾಯರು ಹೀಗೆ ನೈರ್ಘೃಣ್ಯ ತೋರಿಸುತ್ತಿರುವದರ ಮರ್ಮವು ದಿವಾಕರರಾಯನಿಗೆ ತಿಳಿಯದಿರಲಿಲ್ಲ. ಅವನು ಅವರ ಮನಸ್ಸನ್ನು ಹೇಗೆ ಸಂತುಷ್ಟಗೊಳಿಸಬೇಕೆಂದು ವಿಚಾರಿಸಿದನು. ಅತ್ತು-ಕರೆದು ಸಹ ಕೇಳಿಕೊಂಡನು. ಹೆಚ್ಚು ಕಾಡಿದರೆ ನೌಕರಿಯಿಂದ ಕಡಿಮೆ ಮಾಡುವೆನೆಂದು ಕೃಷ್ಣರಾಯರು ಅವನಿಗೆ ಸ್ಪಷ್ಟವಾಗಿ ಹೇಳಿಬಿಟ್ಟರು. ನೌಕರಿಯನ್ನು ಮಾಡುವಂತೆಯೂ ಇದ್ದಿಲ್ಲ; ಬಿಡುವಂತೆಯೂ ಇದ್ದಿಲ್ಲ. ಅವನು ಇಂದು ನಾಳೆ ಚನ್ನಾಗಿ ಹಾಸಿಗೆ ಹಿಡಿಯತಕ್ಕವನಿದ್ದನು. ಬೇಕಾದಂತೆ ಆಗಲೆಂದು ಮನೆಯಲ್ಲಿ ಕುಳಿತರೆ ಅಂದೇ ಏಕಾದಶಿಯು ಪ್ರಾರಂಭವಾಗುವಂತಿತ್ತು. ಪಥ್ಯ ಔಷಧೋಪಚಾರಗಳ ವಿಷಯವಂತು ದೂರವೇ ಉಳಿಯಿತು. ಬಡಶಿಕ್ಷಕರಿಗೆ ಅಡವಿಯಲ್ಲಿ ಹೇರಳವಾಗಿ ದೊರೆಯುವ ಪರ್ಪಟಕ-ಕಟುರೋಹಿಣಿಗಳಂತಹ ವನೌಷಧಿಗಳ ಹೊರತು ಪುರೌಷಧಿಗಳ ಸೌಕರ್ಯವೆಲ್ಲಿ? ಪಥ್ಯವೆಂದರೆ, ನಿತ್ಯಾಹಾರದೊಳಗಿನವೇ ಕೆಲವು ಜಿನಸುಗಳನ್ನು ತಿನ್ನದಿರುವದು! ದಿವಾಕರರಾಯನಿಗೆ ಔಷಧ-ಪಥ್ಯಗಳ ಯೋಚನೆಯು ಅಷ್ಟೊಂದಿದ್ದಿಲ್ಲ. ಮನೆ ಹಿಡಿದು ಕುಳಿತ ದಿನವೇ ಮನೆಯಲ್ಲಿ ಹೊಗೆ ಹಾಯದಂತಹ ಸಾಂಪತ್ತಿಕ ಸ್ಥಿತಿಯು ಅವನದಾಗಿತ್ತು. ಅದಕ್ಕಾಗಿ ಅವನು ಸಾಹೇಬರಿಗೆ ಸೆರಗೊಡ್ಡಿ ಬೇಡಿಕೊಳ್ಳತೊಡಗಿದ್ದನು.

'ದೇವರೆ! ನೀವು ಹೀಗೆ ದಯಾಹೀನರಾದರೆ ನಾನು ಅನ್ನವಿಲ್ಲದೆ ಸಾಯುವದು ಖಂಡಿತವು. ನನ್ನ ಸಲುವಾಗಿ ನಾನು ಚಿಂತಿಸುವದಿಲ್ಲ. ನಾನು ಮುಪ್ಪಿನವನಾಗಿರುವೆನು; ಹಾಗು ಅಸಾಧ್ಯವಾದ ಬೇನೆಯು ನನ್ನನ್ನು ಮೃತ್ಯುಮುಖದಲ್ಲೆಳೆಯಲಿಕ್ಕೆ ಹೊಂಚು ಹಾಕಿದೆ. ನನ್ನ ಉಪವರಳಾದ ಕನ್ಯೆಯ ಸಲುವಾಗಿ ವ್ಯಸನಾಧೀನನಾಗಿದ್ದೇನೆ. ಅವಳ ವಿವಾಹವನ್ನು ನೆರವೇರಿಸಿ ಅವಳನ್ನು ಪತಿ ಮಂದಿರಕ್ಕೆಕಳಿಸಿದೆನೆಂದರೆ, ನನ್ನ ಇಹಲೋಕದ ಕರ್ತವ್ಯಗಳೆಲ್ಲವೂ ಮುಗಿದಂತಾಗುವವು. ಅದಕ್ಕಾಗಿ ಇನ್ನು ಒಂದು ವರ್ಷವಾದರೂ ಬಾಳಬೇಕೆನ್ನುತ್ತೇನೆ. ಬಾಳಿರುವವರೆಗೆ ನೌಕರಿಯನ್ನು ಬಿಟ್ಟರೆ

ಸಾಗುವಂತಿಲ್ಲ ನನ್ನ ಬೇನೆಯು ನೆಟ್ಟಗಾಗುವವರೆಗೆ ಎರಡು ಮೂರು ತಿಂಗಳ ಮಟ್ಟಿಗಾದರೂ ಪೂರ್ಣ ವೇತನದ ಇಲ್ಲವೆ ಅರ್ಧವೇತನದ ರಜೆಯನ್ನು ಕೊಡಿರಿ; ಹಾಗು ಜವುಳಕೇದಗಿಹಳ್ಳಿಯನ್ನು ಒಂದು ವರ್ಷದ ಮಟ್ಟಿಗಾದರೂ ಬಿಡಿಸಿರಿ. ಆ ಹಳ್ಳಿಯಲ್ಲಿ ನಾನು ನನ್ನ ಹೆಂಡತಿಯನ್ನೂ ಇಬ್ಬರು ಗಂಡುಮಕ್ಕಳನ್ನೂ ಕಳೆದುಕೊಂಡೆನು ಇದ್ದ ಒಬ್ಬ ಮಗಳು ನನ್ನ ವಂಶದ ಅವಶೇಷವು ಸುಖರೂಪವಾಗಿ ಉಳಿದು ಪತಿ ಮಂದಿರವನ್ನು ಸೇರಬೇಕೆಂದು ನನ್ನ ಉತ್ಕಟೇಚ್ಛೆಯುಂಟು.' ಎಂದು ದಿವಾಕರನು ಕಣ್ಣೀರು ದುರಿಸುತ್ತ ಭೋರಿಟ್ಟನು.

ಬಡಶಿಕ್ಷಕನ ಕಣ್ಣೀರಿನಿಂದಲೋ ಮತ್ತೇತರಿಂದಲೋ ಸಾಹೇಬರಹೃದಯವು ವಸರಿತು! ಆಗ ಅವರಿಗೆ ದಿವಾಕರರಾಯನೊಡನೆ ಎರಡು ಮಾತಾಡಲಿಕ್ಕೆ ಮನಸ್ಸಾಯಿತು. ಅವರ ಕಂಠದಲ್ಲಿಯೂ ಮಾರ್ದ್ರವತೆಯು ನೆಲೆಗೊಂಡಿತು. ಆಗ ಅವರು —'ಮಾಸ್ತರರೆ, ಶಿಕ್ಷಕರು ಏನಾದರೊಂದು ನಿಮಿತ್ತವನ್ನು ಮುಂದು ಮಾಡಿ ನಮ್ಮನ್ನು ಮೋಸಗೊಳಿಸುತ್ತಿರುತ್ತಾರೆ. ಅಂತೆಯೇ ಅವರ ಮಾತಿನಲ್ಲಿ ನಮಗೆ ನಂಬಿಗೆಯಾಗುವಂತಿಲ್ಲ. ಬೇನೆ ಇಲ್ಲದೆ ಬೇನೆಯವರಂತೆ ಸೋಗು ಹಾಕುವ ಮಹಾಶಯರೂ ಶಿಕ್ಷಕರಲ್ಲಿ ಎಷ್ಟೋ ಜನರುಂಟು. ಜವುಳಕೇದಗೀಹಳ್ಳಿಯು ಪ್ರಪಂಚಕ್ಕೆ ಅನುಕೂಲ. ನೀರು-ನಿಡಗಳ ಕೊಂತೆಯಿಲ್ಲ. ಕೈಯಿಟ್ಟಲ್ಲಿ ನೀರು. ಕೆಟ್ಟ ಹವೆ-ನೀರುಗಳಮೂಲಕ ಅಲ್ಲಿಯಜನಸಂಖ್ಯೆಯು ಇತ್ತೀಚೆಗೆ ಬಹಳೇ ಕಡಿಮೆಯಾಗಿರುವದರಿಂದ ತೆರವಾದ ಮನೆಗಳು ಬಹಳವಿರುವವು ಆದ್ದರಿಂದ ಅಲ್ಲಿ ಶಿಕ್ಷಕರಿಗೆ ಮನೆಗಾಗಿ ಬಾಡಿಗೆ ಕೊಡುವ ಅವಶ್ಯಕತೆ ಬೀಳುವದಿಲ್ಲ. ಅಂತೆಯೇ ನಿಮ್ಮನ್ನು ಅಲ್ಲಿಗೆ ಕಳಿಸಿದೆನು. ನಿಮ್ಮ ಪತ್ನಿಯೂ ಹಾಗು ಇಬ್ಬರು ಗಂಡುಮಕ್ಕಳೂ ಅಲ್ಲಿಯ ಕೆಟ್ಟ ಹವೆ-ನೀರುಗಳ ಸಲುವಾಗಿ ಬೇನೆ ಬಿದ್ದು ಸತ್ತರೆಂದು ಹೇಳುವಿರಿ. ಸತ್ತದ್ದು ಸುಳ್ಳೆಂದು ನಾನು ಅನ್ನಲಾರೆನು; ಆದರೆ ಕೆಟ್ಟ ಹವೆ-ನೀರುಗಳ ಮೂಲಕ ಅವರು ಸತ್ತರೆಂದು ತಿಳಿಯದೆ, ಆಯುಷ್ಯತುಂಬಿ ಸತ್ತರೆಂದು ತಿಳಿಯುವದೇ ವಾಸ್ತವವು. ಅದಿರಲಿ. ನಿಮ್ಮ ಒಬ್ಬ ಉಪವರಳಾದ ಕನ್ಯೆಯಿರುವಳೆಂದು ಹೇಳುವಿರಿ. ಆವಳು ಎಷ್ಟು ವಯಸ್ಸಿನವಳಿರುವಳು? ಎಲ್ಲಿರುವಳು? ಸುಶಿಕ್ಷಿತಳಿರುವಳೇ ಹೇಗೆ? ಅವಳ ಹೆಸರೇನು?

ಕೃಷ್ಣರಾಯರು ಹೀಗೆ ಸ್ವಕೀಯರಂತೆ ಮಾತಾಡಹತ್ತಿದೊಡನೆಯೇ ದಿವಾಕರರಾಯರ ನಿರಾಶಾಪೂರ್ಣ ಹೃದಯದಲ್ಲಿ ಆಶಾಂಕುರವು ಹುಟ್ಟಿತು. ಇಷ್ಟು ವೇಳೆಯವರೆಗೆ ಬಿಗಿದು ಕುಳಿತಿದ್ದ ಸಾಹೇಬರ ವೃತ್ತಿಯು ಸಡಿಲಾ

ದದ್ದು ನೋಡಿ ತನ್ನ ಭಾಗ್ಯೋದಯ ಕಾಲವಿರುವದೆಂದು ಅವನ ಭಾವನೆಯಾಯಿತು. ಅವನು ವಿನಮ್ರಭಾವದಿಂದ ಕೈಜೋಡಿಸಿ-'ಸಾಹೇಬರೆ, ದೈವದಲ್ಲಿದ್ದಂತೆ ದುಃಖವಾಗಿದೆ. ಅದಕ್ಕೆ ಯಾರ ಯತ್ನವೂ ಇಲ್ಲ. ನಾನುಸುದೈವಿಯಾಗಿದ್ದರೆ ಇಬ್ಬರಲ್ಲಿ ಒಬ್ಬ ಮಗನಾದರೂ ಉಳಿಯುತ್ತಿದ್ದನು. ಈಗ ನನ್ನ ಪುತ್ರಿಯೇ ನನ್ನ ಜೀವನಸರ್ವಸ್ವವು ಅವಳು ಹದಿನಾರು ವರ್ಷದವಳಿರುವಳು. ಕನ್ನಡ ಆರನೆಯ ಇಯತ್ತೆಯವರೆಗೆ ಅವಳಿಗೆ ಅಭ್ಯಾಸ ಮಾಡಿಸಿರುವೆನು. ಅವಳ ಹೆಸರು ಉಷೆ. ಅವಳು ನನ್ನೊಡನೆ ಇಲ್ಲಿಗೇ ಬಂದಿರುವಳು.'

'ನಿಮ್ಮೊಡನೆ ಬಂದಿರುವಳೆ? ಈಗ ಎಲ್ಲಿ ಇರುವಳು?' ಸಾಹೇಬರು ಉತ್ಕಂಠೆಯಿಂದ ಕೇಳಿದರು.

'ಹೊರಗೆ ಕುಳಿತುಕೊಂಡಿರುವಳು.'

'ಅವಳನ್ನೇಕೆ ಹೊರಗೆ ಕುಳ್ಳಿರಿಸಿರುವಿರಿ?'

'ಒಳಗೆ ಬರಲಿಕ್ಕೆ ಅಂಜಿ ಅವಳೇ ಹೊರಗೆ ಕುಳಿತಿರುವಳು.'

'ಛೆ! ಅಂಜಲಿಕ್ಕೇನು? ಒಳಗೆ ಕರೆದುಕೊಂಡು ಬರ್ರಿ.'

ದಿವಾಕರರಾಯನು ಮೆಲ್ಲಗೆ ಎದ್ದನು. ಅವನು ಕೋಲು ಊರುತ್ತ ಸಾವಕಾಶವಾಗಿ ಹೆಜ್ಜೆಯಿಡತೊಡಗಿದನು. ಅವನನ್ನು ನೋಡಿ ಕೃಷ್ಣರಾಯರು-'ಮಾಸ್ತರರೆ, ನೀವು ಬೇನೆಯಿಂದ ಬಹಳೇ ಹೈರಾಣಾಗಿರುವಿರಿ.'

'ಸಾಹೇಬರೆ, ಇನ್ನೂ ಪರೀಕ್ಷಿಸಿರಿ. ನಾನು ಹೇಳಿದ ಮಾತುಗಳು ಇಷ್ಟೊತ್ತಿನವರೆಗೆ ನಿಮಗೆ ಸುಳ್ಳಾಗಿದ್ದವು. ನನಗೆ ಪ್ರಾಪ್ತವಾದ ದುರ್ಘಟ ಬೇನೆಯಿಂದ ಉಳಿದರೆ, ಪುನರ್ಜನ್ಮವಾದಂತಾಗುವದು.'

'ನಿಜ ನಾನು ಇಷ್ಟು ಹೊತ್ತು ನಿಮ್ಮನ್ನು ಚನ್ನಾಗಿ ನೋಡಿದ್ದಿಲ್ಲ.'

ದಿವಾಕರ ರಾಯನು ಹೊರಗೆ ಹೋಗಿ, ಒತ್ತಾಯದಿಂದ ಮಗಳನ್ನು ಸಾಹೇಬರ ಹತ್ತರ ಕರೆತಂದನು. ಹಳ್ಳಿಗಳಾದ ಅವಳು ಸಾಹೇಬರಂತಹ ದೊಡ್ಡ ಜನರೆದುರಿಗೆ ಬರಲಿಕ್ಕೆ ಒಪ್ಪದ್ದರಿಂದ, ದಿವಾಕರರಾಯನು ಅವಳಿಗೆ ಒತ್ತಾಯ ಮಾಡಬೇಕಾಯಿತು. ಅವನು ಮಗಳನ್ನು ಸಾಹೇಬರ ಸಮ್ಮುಖದಲ್ಲಿ ನಿಲ್ಲಿಸಿ 'ಖಾವಿಂದರೆ, ಇವಳೇ ನನ್ನ ಮಗಳಾದ ಉಷೆಯು. ಹಡೆದವಳನ್ನು ಕಳೆಕೊಂಡ ಮೇಲೆ ಇವಳು ತನ್ನ ಸೋದರ ಮಾವನ ಮನೆಯಲ್ಲಿದ್ದಳು ನನಗೆ ಬೇನೆ ಹತ್ತಿ ಏಳಲಿಕ್ಕೆ ಸಹ ಬಾರದಂತಾದ್ದರಿಂದ, ಆರೈಕೆಯ ಸಲುವಾಗಿ ಕರೆಯಿಸಿಕೊಂಡೆನು. ಜವುಳಕೇದಗೀಹಳ್ಳಿಯ ಹವೆ-ನೀರುಗಳು ಇವಳಿಗೂ ತಡೆಯುಲೊಲ್ಲವು. ಆರೈಕೆಗೆ ಬಂದವಳಾದ ಇವಳೂ ಬೇನೆ ಬೀಳುವಳಿಲ್ಲಿಯೋ ಎಂದು ಭಯವೆನಿಸತೊಡಗಿದೆ.'

ಸಾಹೇಬರು ಉಷೆಯನ್ನು ಕಣ್ಣು ತುಂಬ ನೋಡಿದರು. ಜವುಳ ಕೇದಗೀಹಳ್ಳಿಯಂತಹ ಗ್ರಾಮದಲ್ಲಿ ವಾಸವಾಗಿದ್ದ ಶಿಕ್ಷಕನಲ್ಲಿ ಇಂತಹ ಅಮೌಲ್ಯವಾದ ರತ್ನವಿರುವದೆಂಬದನ್ನು ಅವರು ಇಂದೇ ಮೊದಲನೇ ಸಾರೆ ಕಂಡರು. ಈ ರತ್ನವು ಕುಗ್ರಾಮದಲ್ಲಿದ್ದುದರಿಂದಲೇ ಒಳಿತಾಗಿತ್ತು; ಇಲ್ಲ ದಿದ್ದರೆ ಇಷ್ಟೊತ್ತಿಗೆ ಅವಳು ಸಾಹೇಬರ ಕಟಾಕ್ಷಕ್ಕೆ ಈಡಾಗುತ್ತಿದ್ದಳು. ಅಹಹಾ! ಇಷ್ಟು ದಿನಗಳ ವರೆಗೆ ಈ ರತ್ನವು ಕೆಸರಲ್ಲಿ ಸಿಲುಕಿತ್ತಲ್ಲವೆ? ಎಂದು ಸಾಹೇಬರು ಅಂದುಕೊಂಡು—'ದಿವಾಕರರಾಯರೆ, ಇಂತಹ ಸುಶಿ ಕ್ಷಿತಳಾದ ಮಗಳನ್ನು ಮನೆಯಲ್ಲಿಟ್ಟುಕೊಂಡು ಎಷ್ಟು ಯೋಚನೆಗೊಳಗಾ ಗಿರುವಿರಿ? ಸ್ತ್ರೀಶಿಕ್ಷಣ ಪ್ರಸಾರಣೆಯ ಕಾರ್ಯವನ್ನು ಕೈಕೊಂಡಾಗಿನಿಂದ ಎಷ್ಟು ಸ್ತ್ರೀಯರು ಶಿಕ್ಷಣ ಸಂಸ್ಥೆಯಲ್ಲಿ ಶಿಕ್ಷಣವ್ಯವಸಾಯವನ್ನು ಕೈಕೊಂಡಿರು ರೆಂಬದು ಹಳ್ಳಿಗರಾದ ನಿಮಗೆ ಗೊತ್ತಿಲ್ಲ. ಶಿಕ್ಷಣಸಂಸ್ಥೆಯಲ್ಲಿ ಕೆಲಸ ಮಾಡ ಲಿಕ್ಕೆ ತಕ್ಕವಳಾದ ಇಂಥವಳನ್ನು ಮನೆಯಲ್ಲಿಟ್ಟುಕೊಂಡು ನೀವು ದಡ್ಡತನ ಮಾಡಿರುವಿರಿ. ಶಿಕ್ಷಕರಾದ ನಿಮ್ಮಿಂದ ಇಂತಹ ತಪ್ಪುಗಳು ಆಗುವದನ್ನು ನೋಡಿ ನನಗೆ ಸಿಟ್ಟು ಬರುವದು. ಈಗಾದರೂ ಏನಾಯಿತು? ನೀವು ಇನ್ನು ಮೇಲಾದರೂ ಇವಳನ್ನು ನೌಕರಿಗೆ ತೊಡಗಿಸಿರಿ; ಅಂದರೆ ನಿಮಗೆ ಚನ್ನಾಗಿ ಅನುಕೂಲವಾಗುತ್ತದೆ.

'ಸಾಹೇಬರೆ!' ದಿವಾಕರರಾಯನು—'ಈಗಲೆ ಇವಳು ನೌಕರಿಯನ್ನು ಹೇಗೆ ಮಾಡುವಳು? ಚಿಕ್ಕವಳು. ಇನ್ನೂ ಅನುಭವವಿಲ್ಲ. ಹೊರಗೆ ಜಗತ್ತು ಯಾವ ವಿಧದ್ದಿರುವದೆಂಬದು ಇವಳಿಗೆ ಗೊತ್ತಿಲ್ಲ.'

'ನಾವು ಸುಧಾರಿಸಿ ಕೆಲಸ ತಕ್ಕೊಳ್ಳುವೆವು. ನೀವು ಇವಳ ಚಿಂತೆ ಯನ್ನು ಬಿಡಿರಿ, ನಾವಿದ್ದೇವೆ,' ಎಂದು ಸಾಹೇಬರು ಎದೆಯ ಮೇಲೆ ಕೈ ಯಿಟ್ಟುಕೊಂಡು ನುಡಿದು—'ಉಷೆ, ನೀನು ಶಿಕ್ಷಕಿಯಾಗಲಿಕ್ಕೆ ಒಪ್ಪು ವೆಯಾ?' ಎಂದು ಉಷೆಯನ್ನು ಕೇಳಿದರು.

ಸಾಹೇಬರಂತಹ ಜನರೊಡನೆ ಮಾತಾಡುವ ಪ್ರಸಂಗ ಒದಗಿದ್ದು ಉಷೆಗೆ ಇಂದೇ ಮೊದಲು. ಅವ ಮಾತಿಗೆ ಉತ್ತರವನ್ನೇನು ಕೊಡಬೇಕೆಂ- ಬದು ಗೊತ್ತಾಗದ್ದರಿಂದ ಉಷೆಯು ಸುಮ್ಮನೆ ನಿಂತಳು. ತಮ್ಮ ಮಾತಿಗೆ ಉತ್ತರ ದೊರೆಯದ್ದರಿಂದ ಸಾಹೇಬರು ಮತ್ತೆ ಅವಳನ್ನು ಕುರಿತು—'ಉಷೇ, ನೀನು ನೌಕರಿ ಮಾಡತೊಡಗಿದರೆ ಮೃತ್ಯುಪಥವನ್ನು ಆಶ್ರಯಿಸಹತ್ತಿದ ನಿನ್ನ ತಂದೆಗೆ ಜೀವದಾನ ಮಾಡಿದಂತಾಗುವದು ಜನ್ಮದಾತನ ಸುಖದ ಸಲುವಾಗಿಯಾದರೂ ನೀನು ನಾನು ಹೇಳಿದಂತೆ ಕೇಳಲೇಬೇಕು.'

ತಾನು ನೌಕರಿಯನ್ನು ಮಾಡತೊಡಗಿದರೆ ತಂದೆಯ ಔಷಧೋಪಚಾರ ನಡೆಯಿಸಲಿಕ್ಕೆ ಸಾಧನವಾದಂತಾಗುವದೆಂದು ಅವಳಿಗೆ ತಿಳಿಯಿತು. ಆಗ ಅವಳು ಕೈ ಜೋಡಿಸಿ—'ರಾವಸಾಹೇಬರ ಅಪ್ಪಣೆಯಂತೆ ನಡೆಕೊಳ್ಳುವೆನು.' ಎಂದು ವಿನಯದಿಂದ ಹೇಳಿದಳು.

'ಶಾಬಾಸ! ಸೂಕ್ಷ್ಮ ಹುಡುಗೆ. ಹೇಗೆ ಸಮರ್ಪಕ ಉತ್ತರವಿತ್ತಳು ನೋಡಿರಿ!' ಎಂದು ಕೃಷ್ಣರಾಯರು ನುಡಿದು-'ದಿವಾಕರರಾಯರೆ, ಹೆಣ್ಣು ಹುಡುಗೆಯರ ಒಂದನೇ ನಂಬರ ಶಾಲೆಯ ಮುಖ್ಯ ಶಿಕ್ಷಕಿಯರಾದ ರಾಧಾದೇವಿಯವರು ಅಸ್ವಾಸ್ಥ್ಯ ಹೊಂದಿ, ರುಗ್ಣಾಲಯದಲ್ಲಿ ಬಿದ್ದಿರುವರು. ಉಷೆಯನ್ನು ಅವರ ಸ್ಥಳದ ಮೇಲೆ ನಿಯಮಿಸುವೆನು. ಇವಳು ಹೊಸ ಕೆಲಸಗಾರಳಾಗಿದ್ದರೂ ರಾಧಾದೇವಿಯವರ ವೇತನವನ್ನೇ ಕೊಡುವೆನು. ನೀವು ಇಲ್ಲಿಯ ಸರಕಾರೀ ರುಗ್ಣಾಲಯದಲ್ಲಿ ಚಿಕಿತ್ಸೆ ಹೊಂದಿರಿ. ನಿಮ್ಮ ಪೂರ್ಣ ವೇತನದ ರಜೆಯು ಎಷ್ಟು ತಿಂಗಳದ್ದಿರುವದೋ ಅದನ್ನು ಭೋಗಿಸಿರಿ. ಅಷ್ಟರಲ್ಲಿಯೂ ನಿಮ್ಮ ಬೇನೆಯು ವಾಸಿಯಾಗದಿದ್ದರೆ, ಅರ್ಧಪಗಾರದ ಬೇನೆಯ ರಜೆಯನ್ನು ಕೊಡುವೆನು. ಶಿಕ್ಷಕರು ಯಾವ ವಿಧದ ತೊಂದರೆಗಳನ್ನು ಹೊಂದಬಾರದೆಂಬಡೇ ನಮ್ಮ ಮತವು. ಜವುಳಕೇದಗೀಹಳ್ಳಿಗೆ ಇಲ್ಲಿಯ ಶಿಕ್ಷಕನಾದ ಸುರೇಂದ್ರರಾಯನನ್ನು ಕಳುಹಿಸುವೆನು. ನಿಮ್ಮ ಬೇನೆ ವಾಸಿಯಾದ ಮೇಲೆ ನೀವು ಇಲ್ಲಿಯ ಅವನ ಸ್ಥಳದಲ್ಲಿ ಕೆಲಸ ಮಾಡತೊಡಗಿರಿ. ಈಗ ಸುರೇಂದ್ರರಾಯನು ಸೆರೆಯಲ್ಲಿರುವನು. ಬಹಳ ಮಾಡಿ ಅವನ ಮೇಲಿನ ಅಪರಾಧವು ತೊಡೆದು ಹೋಗಲಿಕ್ಕಿಲ್ಲ. ಅವನು ಅಪರಾಧಿಯೆಂದೇ ನಿರ್ಣಯಿಸಲ್ಪಟ್ಟರೆ, ಅವನು ಕರಿನೀರನ್ನಾಗಲಿ, ಮರಣದಂಡನೆಯನ್ನಾಗಲಿ ಹೊಂದುವನು. ನಿರಪರಾಧಿಯೆನಿಸಿಕೊಂಡರೆ ಜವುಳ ಕೇದಗೀ ಹಳ್ಳಿಗೆ ಹೋಗಬೇಕಾಗುವದು. ಸ್ಕೂಲಮಿಸ್ಟ್ರೆಸ್ ರಾಧಾದೇವಿಯವರು ಕೆಲಸಕ್ಕೆ ಬಂದ ಮೇಲೆ ಉಷೆಯನ್ನು ಎರಡನೇ ನಂಬರ ಶಾಲೆಯ ಮುಖ್ಯ ಶಿಕ್ಷಕಿಯನ್ನಾಗಿ ನಿಯಮಿಸುವೆನು.'

'ರಾಧಾದೇವಿಯವರ ಕೊಲೆಯಾಗಿರುವದೆಂದು ನಮ್ಮೂರ ಗೌಡರು ಅನ್ನುತ್ತಿದ್ದರು.'

'ಅವರು ಇನ್ನೂ ಜೀವದಿಂದಿರುವರು,' ಎಂದು ಸಾಹೇಬರು ನುಡಿದು: 'ದಿವಾಕರರಾಯರೆ, ನನ್ನ ಯೋಜನೆಯು ನಿಮ್ಮ ಮನಸ್ಸಿಗೆ ಸರಿಯಾಯಿತೆ? ವೇತನವಿಲ್ಲದ ರಜೆಯನ್ನು ಹೊಂದಿ ಔಷಧ-ಪಥ್ಯಗಳನ್ನು ಕಾಣದೆ ವ್ಯರ್ಥವಾಗಿ ಸಾಯುತ್ತಿದ್ದಿರಿ. ನಿಮ್ಮ ಹಾಗು ನಿಮ್ಮ ಮಗಳ ವೇತನವು ಪ್ರಾರಂಭವಾಗುವದರಿಂದ ನಿಮಗೆ ಮುಂದೆ ಏನೂ ತೊಂದರೆಯೆನಿಸಲಾರದು.'

ಸಾಹೇಬರು ಈ ಬಗೆಯಾಗಿ ದಯಾರ್ದ್ರರಾಂದದ್ದು ನೋಡಿ, ದಿವಾಕರ ರಾಯನು ಅತಿಶಯವಾಗಿ ವಿಸ್ಮಯಗೊಂಡನು. ಅವರ ಕಠಿಣವಾದ ಹೃದಯ ವನ್ನು ಮಿಂದುವು ಮಾಡಿದ ಶ್ರೇಯವು ಉಷೆಯದೇ ಎಂಬದು ಗೊತ್ತಾಗಲಿಕ್ಕೆ ಅವನಿಗೆ ಬಹಳ ವೇಳೆ ಹಿಡಿಯಲಿಲ್ಲ; ಯಾಕಂದರೆ ಅವನು ಸಾಹೇಬರ ಗುಣ ಗಳ ಪರಿಚಯವುಳ್ಳವನಾಗಿದ್ದನು; ಆದರೆ ಬೇರೆ ಸ್ತ್ರೀಯರ ಮೇಲೆ ನಡೆ ಯಿಸಿದಂತೆ ತನ್ನ ಮಗಳ ಮೇಲೆಯೂ ಸಾಹೇಬರ ಸೂಕ್ಷ್ಮ ಕಾರಭಾರ ನಡೆಯುವದೆಂದು ದಿವಾಕರರಾಯನು ತಿಳಿದಿದ್ದಿಲ್ಲ; ಯಾಕಂದರೆ ಉಷೆಯು ಸಾಹೇಬರ ಮೊಮ್ಮಗಳಾಗಲಿಕ್ಕೆ ತಕ್ಕವಳಾಗಿದ್ದಳು. ಸ್ವಭಾವಜನ್ಯವಾದ ಸ್ತ್ರೀದಾಕ್ಷಿಣ್ಯದ ಗುಂಗಿನಲ್ಲಿ ಅವರು ತನ್ನ ಮೇಲೆ ದಯದೋರಿರುವರೆಂದೂ, ಚಿಕ್ಕವಳಾದ ಉಷೆಯ ಮೇಲೆ ಸಾಹೇಬರ ಪ್ರತ್ಯಕ್ಷ ಪಾಪಕರ್ಮವು ಘಟಿಸ ಲಿಕ್ಕಿಲ್ಲವೆಂದೂ ದಿವಾಕರರಾಯನು ತಿಳಿದನು. ಅದರಲ್ಲಿ ಅವನು ಅನನ್ಯ ಗತಿಕನಾಗಿದ್ದನು. ವರಿಷ್ಠರ ಮಾತು ಮೀರುವದೂ ಮೃತ್ಯುಮುಖದಲ್ಲಿ ಬೀಳುವದೂ ಅವನಿಗೆ ಒಂದೇ ಆಗಿತ್ತು. ವಿಶಿಷ್ಟ ತರದ ಮಾತು-ಕಥೆ, ವಿಶಿಷ್ಟತರದ ದೃಷ್ಟಿಕ್ಷೇಪಗಳ ಹೊರತು ಸಾಹೇಬರು ಮುಂದೆ ಹೆಜ್ಜೆಯಿಕ್ಕ ಲಾರರೆಂದೂ, ಹಾಗೆ ಮಾಡಲುಪಕ್ರಮಿಸಿದರೆ ಮಗಳನ್ನು ನೌಕರಿಯಿಂದ ಬಿಡಿಸಿಕೊಳ್ಳುವದು ಅಸಾಧ್ಯವಲ್ಲವೆಂದೂ ಅವನು ಯೋಚಿಸಿದನು.

ಸಾಹೇಬರ ಆದೇಶಾನುಸಾರವಾಗಿ ಕಾಫಿ-ಉಪಾಹಾರಗಳು ಅಲ್ಲಿಗೆತರ ಲ್ಪಟ್ಟವು. ಸಾಹೇಬರು ಇಂದು ತಮ್ಮ ಕೈ ಮುಟ್ಟಿ ಅತಿಥಿಗಳಿಗೆ ಪ್ರಸಾದ ಕೊಟ್ಟರು. ಈ ಬಗೆಯ ಅನುಗ್ರಹದಿಂದ ದಿವಾಕರರಾಯನಿಗೆ ಸಮಾಧಾನ ವಾಯಿತೋ ಇಲ್ಲವೋ ತಿಳಿಯಲಿಕ್ಕೆ ಮಾರ್ಗವಿದ್ದಿಲ್ಲ; ಆದರೆ ಉಷೆಯು ಮಾತ್ರ ಅವರ ನಿಗರ್ವ ಸ್ವಭಾವವನ್ನು ಮನಸಾ ಕೊಂಡಾಡಿದಳು. ರಾಧಾ ದೇವಿಯ ರಜೆಯ ಅವಧಿಯಲ್ಲಿ ಅವಳ ಎಲ್ಲ ಚಾರ್ಜುಗಳು ತನ್ನ ಮಗಳಿಗೆಲ್ಲಿ ದೊರೆಯುವವೋ ಏನೋ ಎಂದು ದಿವಾಕರರಾಯನು ಯೋಚನೆಗೊಳಗಾ ದನು. ಆಗ ಕೃಷ್ಣರಾಯರ ಕೃಷ್ಣಚಿತ್ರಗಳು ಒಂದೊಂದೇ ಅವನ ಕಣ್ಣೆದು ರಿಗೆ ಕಟ್ಟಿದಂತಾದವು. ಕೂಡಲೆ ಅವನ ಎದೆಯು ನಡುಗಿತು. ಉಷೆಯು ಸಾಹೇಬರಿಗೆ ಮೊಮ್ಮಗಳಂತೆ ಇರುವಳೆಂಬದೊಂದೇ ಬಲವಾದ ಸಾಧನ ದಿಂದ ಅವನು ಧೈರ್ಯಗೊಂಡನು. ಹುಲಿಯಂತೆ ಗರ್ಜಿಸುತ್ತಿದ್ದ ಸಾಹೇಬರು, ಇಲಿಯಂತೆ ಚಿಂವುಗುಡತೊಡಗಿದ್ದನ್ನು ನೋಡಿದರೆ, ಅವನ ಗ್ರಹಿಕೆಯು ತಪ್ಪಾದಷ್ಟೆಂದೇ ವ್ಯಕ್ತವಾಗುತ್ತಿತ್ತು.

ಸಾಹೇಬರಿಂದ ಅನುಗ್ರಹೀತನಾದ ದಿವಾಕರರಾಯನು ಕೃತಜ್ಞತೆ

ಯಿಂದ—'ನಿಮ್ಮ ಉಪಕಾರವನ್ನು ಏಳು ಜನ್ಮ ಹೊತ್ತು ತೀರಿಸಿದರೂ ತೀರದು. ನಿಮಗೆ ನಾನು ವಿಜ್ಞಾಪ್ತಿಮಾಡಿಕೊಳ್ಳುವದೇನಂದರೆ, ಉಷೆಯನ್ನು ಹೊಟ್ಟೆಯ ಮಗಳಂತೆ ನೋಡಬೇಕು, ಅವಳ ಕೈಯಿಂದ ಸುಧಾರಿಸಿ ಕೆಲಸ ತೆಗೆದುಕೊಳ್ಳಬೇಕು. ದಯಾಘನರಾದ ತಮಗೆ ಹೆಚ್ಚಿಗಿನ್ನೇನು ಹೇಳಲಿ?'

'ದಿವಾಕರರಾಯರೇ, ನೀವು ಚಿಂತೆಬಿಡಿರಿ. ಉಷೆಯು ಇಂದಿನಿಂದ ನಮ್ಮವಳಾದಳು. ನಾವು ಅವಳನ್ನು ಪರಕೀಯಳೆಂದು ಎಂದೂ ತಿಳಿಯುವ ದಿಲ್ಲ. ಸ್ತ್ರೀಯರ ಕಲ್ಯಾಣಕ್ಕಾಗಿಯೆ ನಮ್ಮ ಅವತಾರವಿರುವದೆಂದು ನಂಬಿರಿ. ನಿಮ್ಮ ಮಗಳನ್ನು ಶಿಕ್ಷಕಿಯ ಸ್ಥಳದಲ್ಲಿ ನಿಯಮಿಸಿದ್ದಾಗಲಿ, ನಿಮಗೆ ಪೂರ್ಣ ವೇತನದ ರಜೆಯನ್ನು ದಯಪಾಲಿಸಿದ್ದಾಗಲಿ ಉಪಕಾರವೆಂದು ಭಾವಿಸ ಬೇಡಿರಿ. ನಾವು ನಮ್ಮ ಕರ್ತವ್ಯ ಮಾಡಿರುವೆವು. ಆದರಲ್ಲಿ ದೀನ ಜನರನ್ನು ಕಂಡರೆ ನಮ್ಮ ಮನಸ್ಸು ಬಹಳೇ ಮರಗುವದು.' ಎಂದು ಸಾಹೇಬರು ತಮ್ಮ ಘನವಂತಿಕೆಯನ್ನು ತಮ್ಮ ಬಾಯಿಯಿಂದಲೆ ಹೊಗಳಿಕೊಂಡು, ಉಷೆಯನ್ನು ಕುರಿತು-'ಉಷಾದೇವಿ, ನೀನು ನಾಳೆಗೇ ಕೆಲಸ ಕೈಕೊಳ್ಳ ಬೇಕು. ನಾನು ಇಂದು ಒಂದನೇ ನಂಬರ ಶಾಲೆಯ ಆ್ಯಕ್ಟಿಂಗ ಹೆಡ್‌ಮಿಸ್ಟ್ರೆಸ ಸೌಭಾಗ್ಯವತಿ ವಸಿತೆಯವರ ಕಡೆಗೆ ಆಜ್ಞಾಪತ್ರ ಕಳುಹಿಸುವೆನು.'

'ಖಾವಿಂದರವರ ಆಜ್ಞೆಯು ಶಿರಸಾಮಾನ್ಯವಿರುವದು.' ಎಂದು ಉಷೆಯು ಆನಂದೋದ್ಗಾರ ತೆಗೆದಳು.

ಆನಂತರದಲ್ಲ ದಿವಾಕರರಾಯನು ಅಲ್ಲಿಂದ ಹೊರಡಲನುವಾದನು. ಆಗ ಸಾಹೇಬರು—'ದಿವಾಕರರಾಯರೇ, ನೀವು ಬೇನೆಯವರು; ಉಷೆಯು ದೂರದಲ್ಲಿರುವ ನಿಮ್ಮ ವಸತಿಗೃಹದ ವರೆಗೆ ನಡೆಯಲಾರದ ಕೋಮಲೆಯು. ನಮ್ಮ ಮೊಟಾರ ಬಂಡಿಯಲ್ಲಿ ಕುಳಿತುಕೊಂಡು ಹೋಗಿರಿ. ಬಂಡಿಯವ ನನ್ನು ಕರೆಯಿಸಿ ಹೇಳುವೆನು.'

ಸಾಹೇಬರು ಹೀಗೆ ಅನುಗ್ರಹ ಮಾಡತೊಡಗಿದ್ದನ್ನು ನೋಡಿ ದಿವಾಕರ ರಾಯನಿಗೆ ದಿಕ್ಕು ತಪ್ಪಿದಂತಾಯಿತು. ತನ್ನ ಮಗಳಾದ ಉಷೆಯ ಕಾಲ ಗುಣದಿಂದಲಾದರೂ ಭಾಗ್ಯೋದಯಕಾಲವೊದಗಿತೆಂದು ಅವನು ಹಿಗ್ಗಿದನು. ಮತ್ತು ಆ ಹಿಗ್ಗು ಎಂದೂ ಕುಗ್ಗದೆಂದು ಅವನ ಭಾವನೆಯಿತ್ತು.

ಮೊಟಾರ ಬಂಡಿಯು ಸಿದ್ಧವಾಯಿತು. ಉಷಾ-ದಿವಾಕರರಾಯರು ಸಾಹೇಬರಿಗೆ ಅಭಿವಾದನೆಗಳನ್ನರ್ಪಿಸಿ, ಅವರ ನಿರೂಪ ಹೊಂದಿ ಮೊಟಾರ ನ್ನೇರಿದರು. ಮೊಟಾರ ಬಂಡಿಯು ಸ್ವಲ್ಪ ವೇಳೆಯಲ್ಲಿ ಸಾಹೇಬರ ಕಣ್ಣು ಮರೆಯಾಯಿತು.

---

## ಸಂತಾನಲಾಭ.

÷

'ನಾನು ಎಲ್ಲಿರುವೆನು?'

'ನೀವು ಸರಕಾರೀ ರುಗ್ಣಾಲಯದಲ್ಲಿರುವಿರಿ.'

'ನಾನು ಇಲ್ಲಿಗೆ ಹೇಗೆ ಬಂದೆನು?'

'ನೀವು ಪ್ರಾಣಘಾತಕ ಗಾಯಹೊಂದಿದ್ದರಿಂದ ಶಾಂತಿರಕ್ಷಕರು ನಿಮ್ಮನ್ನು ಇಲ್ಲಿಗೆ ತಂದುಬಿಟ್ಟಿರುವರು.'

'ಮೈ ತುಂಬ ಕರೀ ಬಟ್ಟೆಗಳನ್ನು ಸುತ್ತಿಕೊಂಡು, ಮುಖವನ್ನು ಕರೀ ಬಟ್ಟೆಯಿಂದ ಮುಚ್ಚಿಕೊಂಡಿದ್ದ ಒಬ್ಬ ದುಷ್ಟನು ನನ್ನ ಮುಖದ ಮೇಲೆ ದ್ರಾವಕವನ್ನು ಸುರುವಿದನು; ಆದರೆ ಅದು ನೆಲದ ಮೇಲೆ ಬಿದ್ದು ಹೋಯಿತು. ಕೂಡಲೆ ಅವನು ಮೈ ಮೇಲೆ ಬಂದು ನನ್ನನ್ನು ಕಠಾರಿಯಿಂದ ಇರಿಯತೊಡಗಿದನು. ಪ್ರಾಣಸಂಕಟಕ್ಕಾಗಿ ನಾನು ಬಲವಾಗಿ ಚೀರಿದೆನು. ಗದ್ದಲ ಕೇಳಿ ಜನರು ಬಂದರು ಅಷ್ಟರಲ್ಲಿ ಕೊಲೆಗಡಕನು ಓಡಿಹೋದನು. ಪ್ರಬಲವಾದ ಹೊಡೆತದಿಂದ ನನಗೆ ಆಗಿಂದಾಗ ಮೂರ್ಛೆಯುಂಟಾಯಿತು. ಮುಂದೇನಾಯಿತೋ ಗೊತ್ತಿಲ್ಲ! ಡಾಕ್ಟರ ಸಾಹೇಬರೇ, ನಾನು ಬದುಕುವದಿಲ್ಲ; ಗಾಯಗಳ ವೇದನೆಗಿಂತ ಸಾವೇ ಮೇಲೆಂದು ತೋರಹತ್ತಿದೆ.'

'ರಾಧಾದೇವಿ, ಚಿಂತಿಸಬೇಡಿರಿ. ಗಾಯಗಳು ಭಯಂಕರವಾಗಿದ್ದರೂ ಬಹಳ ಮಾಡಿ ಜೀವಕ್ಕೆ ಬಾಧೆಯಿಲ್ಲ.'

ರಾಧಾದೇವಿಯ ಕಣ್ಣುಗಳೊಳಗಿಂದ ಎರಡು ಅಶ್ರುಬಿಂದುಗಳು ಹೊರಬಿದ್ದವು. ಇಂದಿಲ್ಲದಿದ್ದರೂ ನಾಳೆ-ನಾಡದು ಇಷ್ಟರಲ್ಲಿ ತನ್ನ ಇಹಲೋಕ ಯಾತ್ರೆಯು ಮುಗಿಯುವದೆಂದು ಅವಳು ತಿಳಿದಿದ್ದಳು. ಗಾಯಗಳ ವೇದನೆಯಾದರೂ ಅವಳಿಗೆ ಅಸಹ್ಯವಾಗಿತ್ತು. ವೇದನೆಯನ್ನನುಭವಿಸುವದಕ್ಕಿಂತ ಸಾಯುವದೇ ಮೇಲೆಂದು ಅವಳು ಅನ್ನತೊಡಗಿದ್ದಳು. ಅವಳ ಗಾಯಗಳು ಮರಣಪ್ರಾಯ ಸ್ಥಿತಿಯ ಮನುಷ್ಯರಿಗೆ ಶೋಭಿಸುವಂಥವುಗಳಿದ್ದರೂ, ಆಯುಷ್ಯತಂತುವು ಇನ್ನೂ ಬಲವಾಗಿದ್ದುದರಿಂದ, ಅವಳು ಜೀವ ಹಿಡಿದಿದ್ದಳು. ಕೃಷ್ಣರಾಯರಂತಹ ದೊಡ್ಡ ಅಧಿಕಾರಿಗಳು ನಂದಾದೀಪದಂತೆ ಅಲ್ಲಿಯೇ ಬಹಳ ವೇಳೆ ಇದ್ದು, ಅವಳ ಸೇವಾ-ಶುಶ್ರೂಷೆಯನ್ನು ಉತ್ತಮರೀತಿಯಿಂದ ಮಾಡಿಸುತ್ತಿದ್ದರು. ರಾಧಾದೇವಿಯು ಯಃಕಶ್ಚಿತ ಸ್ಕೂಲ ಮಿಸ್ಟ್ರೆಸ್ಸಳು; ಕೃಷ್ಣರಾಯರೆಂದರೆ ದೊಡ್ಡ ಅಧಿಕಾರಿಗಳು. ಪರಸ್ಪರರು ಹತ್ತುಗಡೆಯುವರು ಸಹ ಇದ್ದಿಲ್ಲ ಹೀಗಿರಲು, ಆ ಸ್ಕೂಲಮಿಸ್ಟ್ರೆಸ್ಸಳ

ಮೇಲಿನ ಸಂಕಟಕ್ಕಾಗಿ ಶಿಕ್ಷಣಾಧಿಕಾರಿಗಳ ಅಂತಃಕರುಣವು ಮೇಣಬತ್ತಿಯಂತೆ ಕರಗತೊಡಗಿರುವದನ್ನು ನೋಡಿ, ಈ ಸಂಗತಿಯಲ್ಲಿ ಒಂದು ರಹಸ್ಯವಿರಬಹುದೆಂದು ಅಲ್ಲಿಯ ಜನರು ತರ್ಕಿಸಿದರು.

ರಾಧಾದೇವಿಯ ಪ್ರಕೃತಿ ಶೋಧನೆ ಮಾಡುವಾಗ ಮತ್ತೊಂದು ವಿಚಿತ್ರವಾದ ರಹಸ್ಯವು ಹೊರಬಿದ್ದಿತ್ತು. ಅವಳ ಗರ್ಭದಲ್ಲಿ ಮಗುವು ನಿದ್ರಿಸುತ್ತಿದ್ದು, ಅದರ ನಾಶಕ್ಕಾಗಿ ಅವಳು ಔಷಧ ಪ್ರಯೋಗ ಮಾಡಿಕೊಂಡಿರುವಳೆಂಬದನ್ನು ಡಾಕ್ಟರರು ಕಂಡು ಹಿಡಿದಿದ್ದರು ಒಂದು ವೇಳೆ ಅವಳು ಮರಣ ಹೊಂದಿದರೆ, ಯಾವ ಕಾರಣದಿಂದ ಮರಣ ಹೊಂದಿದಳೆಂದು ತಿಳಿಯಬೇಕೆಂಬದು ಅವರಿಗೆ ತೋಚದಾಯಿತು. ಗರ್ಭಪಾತದ ಪ್ರಯತ್ನದಿಂದ ಮಡಿದಳೆಂದು ತಿಳಿದರೆ, ಗಾಯಗಳೇನೂ ಸಾಧಾರಣ ತರದವಿದ್ದಿಲ್ಲ. ಗಾಯದಿಂದ ಮೃತಿಹೊಂದಿದಳೆಂದು ತಿಳಿದರೆ ಗರ್ಭನಾಶಕ್ಕಾಗಿ ಪ್ರಾಶನ ಮಾಡಿದ ಔಷಧವು ಸಾಮಾನ್ಯವಾದದ್ದಿದ್ದಿಲ್ಲ. ಹೀಗಾಗಿ ಡಾಕ್ಟರರು ತೊಂದರೆಯಲ್ಲಿ ಸಿಲುಕಿದರು. ಆಗ ಅವರು ಕೃಷ್ಣರಾಯರನ್ನು ರುಗ್ಣಾಲಯದೊಳಗಿನ ಒಂದು ಕೋಣೆಯಲ್ಲಿ ಕರೆದೊಯ್ದು–'ರಾಧಾದೇವಿಯು ವಿಧವೆಯಲ್ಲ; ಯಾಕಂದರೆ ಹಣೆಯ ಮೇಲೆ ಸೌಭಾಗ್ಯ ತಿಲಕವಿದೆ. ಅವಳು ವಾರಾಂಗನೆಯೇನು?' ಎಂದು ಕೇಳಲು,

'ಛೇ! ವಾರವನಿತೆಯಲ್ಲ; ಸೌಭಾಗ್ಯವತಿಯು. ನೀವು ಅವಳನ್ನು ವಾರವನಿತೆಯೆಂದು ಹೇಗೆ ತರ್ಕಿಸಿದಿರಿ?'

'ಏನೋ ಸಂಶಯ ಬಂದು ಕೇಳಿದೆನು. ಅದಿರಲಿ. ಈ ಸ್ತ್ರೀಯ ಗಂಡನು ಎಲ್ಲಿರುವನು?" ಎಂದು ಡಾಕ್ಟರರು ಕೃಷ್ಣರಾಯರನ್ನು ಕೇಳಿದರು.

'ಇಲ್ಲಿಯೇ ಇರುವನು.'

'ಏನು ಮಾಡುತ್ತಾನೆ?'

'ಶಿಕ್ಷಣ ಸಂಸ್ಥೆಯಲ್ಲಿ ಶಿಕ್ಷಕನಾಗಿರುವನು.'

'ನಿಮ್ಮ ಕೈಕೆಳಗೆ ಶಿಕ್ಷಕನಿರುವನೆ?' 'ಹೌದು.'

ಡಾಕ್ಟರರು ಸ್ಮಿತಹಾಸ್ಯ ಮಾಡಿದರು. ಅವರ ಈ ಪ್ರಶ್ನೆಪರಂಪರೆಗಳಿಂದಲೂ ಹಾಸ್ಯದಿಂದಲೂ ಕೃಷ್ಣರಾಯರು ಸಿಟ್ಟಿಗೆದ್ದರು; ಆದರೆ ಅವರ ಸಿಟ್ಟು ಅಲ್ಲಿಯ ಯಾರಿಗೂ ಏನೂ ಮಾಡುವಂತಿದ್ದಿಲ್ಲ. ಕೃಷ್ಣರಾಯರ ಪ್ರಭಾವದಿಂದ ಶಿಕ್ಷಣಸಂಸ್ಥೆಯು ಕೃಷ್ಣನ ಗೋಕುಲವಾಗಿದ್ದರೂ, ತಮ್ಮ ಗುಪ್ತವ್ಯವಸಾಯವು ಗುಪ್ತವಾಗಿರುವದೆಂದೇ ಇದುವರೆಗಿನ ಅವರ ತಿಳುವಳಿಕೆ; ಆದರೆ ಡಾಕ್ಟರರಿಗೆ ತಮ್ಮ ಹಾಗು ರಾಧಾದೇವಿಯ ನಡುವಿನ ಸೂಕ್ಷ್ಮ ಸಂಬಂಧದ

ಗಂಧವಾರ್ತೆಯೂ ಹತ್ತಿರಲಾರದೆಂದು ಅವರು ತಿಳಿದರು. ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದಂತೆ ಅವರ ಸ್ಥಿತಿಯಿತ್ತು. ವಿಜಯನಗರ ಸಂಸ್ಥಾನದಲ್ಲಿ ಕೃಷ್ಣರಾಯರ ವಿಲಾಸೀ ಆಡಳಿತದ ರೂಪವರ್ಣವು ಅಲ್ಲಿಯ ದನಕಾಯುವ ಹುಡುಗರಿಗೆ ಸಹ ಗೊತ್ತಾಗಿತ್ತು. ಕೃಷ್ಣರಾಯರ ಹಾಗು ರಾಧಾದೇವಿಯ ವಿಷಯವಾಗಿ ಜನರಲ್ಲಿ ಹಬ್ಬಿದ ವಾರ್ತೆಯು ಡಾಕ್ಟರರಿಗೆ ಗೊತ್ತಾಗಿತ್ತು. ಆ ಡಾಕ್ಟರರು ರಾಧಾದೇವಿಯು ಗರ್ಭವತಿಯಿರುವಳೆಂಬ ದನ್ನೂ, ಅವಳು ಔಷಧ ಪ್ರಾಶನ ಮಾಡಿ ಗರ್ಭನಾಶ ಮಾಡಲುಪಕ್ರಮಿ ಸಿದ್ದಳೆಂಬದನ್ನೂ ಶೋಧಿಸಿ ತೆಗೆದು, ಗರ್ಭನಾಶ ಮಾಡಲು ಪ್ರೇರಕರಾರೆಂಬ ದನ್ನು ಅವರು ಶೋಧಿಸಬೇಕೆಂದಿದ್ದರು. ಅಧಿಕಾರ-ಕಲೆಗಳಿಂದ ವಿಭೂಷಿತ ರಾದ ಡಾಕ್ಟರರಿಗೆ ಸುಳ್ಳಿದ್ದದ್ದನ್ನು ನಿಜವಾಗಿ ಮಾಡಲಿಕ್ಕೂ ನಿಜವನ್ನು ಸುಳ್ಳು ಮಾಡಲಿಕ್ಕೂ ಬಹಳ ಮಾಡಿ ಯಾವ ಪ್ರತ್ಯವಾಯವೂ ಇರುವದಿಲ್ಲ. ಕೊಲೆ ಗೀಡಾದ ವ್ಯಕ್ತಿಯು ಡಾಕ್ಟರರ ಶೋಧನೆಯಲ್ಲಿ ಆತ್ಮಹತ್ತೆ ಮಾಡಿಕೊಂಡ ದ್ದೆಂದು ನಿರ್ಣಯಿಸಲ್ಪಡಬಹುದು. ಹಾಗೆ ನಿರ್ಣಯ ದೊರೆಯಬೇಕಾದರೆ, ಡಾಕ್ಟರರ ಚಿತ್ತವನ್ನು ಪ್ರಸನ್ನಗೊಳಿಸಬೇಕಾಗುವದು. ಪ್ರಸನ್ನತೆಯಿಲ್ಲದೆ ಯಾವ ಕೆಲಸಗಳೂ ಆಗುವದಿಲ್ಲ. ಹಿಂಡುವಾಗ ದನಗಳನ್ನು ಪ್ರಸನ್ನ ಗೊಳಿಸಬೇಕಾದರೆ, ಮುರುವು ಮೊದಲಾದ ತಿನಿಸು ಕೊಡಬೇಕಾಗುವದು; ಸ್ತ್ರೀಯರನ್ನು ಪ್ರಸನ್ನಗೊಳಿಸಬೇಕಾದರೆ ಶೃಂಗಾರ ಚೇಷ್ಟೆಗಳ ತಿನಿಸುಕೊಡ ಬೇಕಾಗುವದು; ಕೃಷ್ಣರಾಯರಂತಹ ಅಧಿಕಾರಿಗಳನ್ನು ಪ್ರಸನ್ನಗೊಳಿಸಬೇಕಾ ದರೆ ಪಾವಿತ್ರ್ಯ-ಪಾತಿವ್ರತ್ಯಗಳ ತಿನಿಸು ಅರ್ಪಿಸಬೇಕಾಗುವದು; ವಿಲಾಸಪ್ರಿಯ ರಾಜ-ಮಹಾರಾಜರಿಗೆ ಸ್ವರ್ಗೀಯ ರೂಪವತಿಯರ ತಿನಿಸು ಕೊಡಬೇಕಾಗು ವದು. ಧನಲೋಭಿಗೆ ಧನದ ತಿನಿಸು ಕೊಡಬೇಕಾಗುವದು. ತಿನಿಸು ತಿಂದು ತೃಪ್ತಿಹೊಂದಿದಮೇಲೆ, ತಿನಿಸುಬಾಕರು ಬೇಕಾದಂತಹ ಕಣ್ಣುಕಟ್ಟಿನ ಆಟ ಮಾಡುತ್ತಾರೆ. ಸಮಾಜದಲ್ಲಿಯೂ ಸರಕಾರ-ದರಬಾರದಲ್ಲೂ ಪ್ರತ್ಯಹ ಘಟಿ ಸುವ ನ್ಯಾಯ-ನೀತಿಗಳು ಬಹುತರವಾಗಿ ಕಣ್ಣುಕಟ್ಟಿನಾಟದಿಂದ ತುಂಬಿ ಕೊಂಡಿರುವದೇನೂ ಅಸಂಭವನೀಯವಲ್ಲ

ಆ ಡಾಕ್ಟರರಾದರೂ ಕಣ್ಣುಕಟ್ಟಿನಾಟದವರೇ ಇದ್ದರೆಂದು ಜನವಾರ್ತೆ ಯಿತ್ತು. ಒಬ್ಬ ಧನಾಢ್ಯಮನುಷ್ಯನು ತನ್ನ ಹೆಂಗಸಿನೊಡನೆ ದುರ್ವರ್ತನ ವಿಟ್ಟ ಒಬ್ಬ ಬಡ ತರುಣನಿಗೆ ಗುಂಡು ಹಾಕಿ ಕೊಂದ ಕಾರಣದಿಂದ ಫಿರ್ಯಾದಿ ಯಾಯಿತು. ಕೊಲೆಗೀಡಾದ ಮನುಷ್ಯನ ಪ್ರೇತವು ಶೋಧನೆಗಾಗಿ ಡಾಕ್ಟ ರರ ಕಡೆಗೆ ಕಳಿಸಲ್ಪಟ್ಟಿತು. ಸತ್ತ ಮನುಷ್ಯನು ಮಿದುಳಿನ ವಿಕಾರದವ

ನಿದ್ದುದರಿಂದ, ಜೀವವು ಬೇಸರವಾಗಿ ಗುಂಡು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡನೆಂದು ಸಂಶೋಧಕ ಬುದ್ಧಿಯ ಆ ಡಾಕ್ಟರರು ನಿರ್ಣಯ ಕೊಟ್ಟಿದ್ದರು! ಸ್ವಚ್ಛಂದವೃತ್ತಿಯ ನವಪರಿಣತಿಯನ್ನು ಒಬ್ಬ ಜಾರರಾಯನು ಓಡಿಸಿಕೊಂಡು ಹೋದದ್ದಕ್ಕಾಗಿ ಶೋಧನೆಯ ಕೆಲಸ ನಡೆಯಿತು. ಒಂದು ತಿಂಗಳ ಮೇಲೆ ಆ ಕನ್ಯೆಯ ಶೋಧವಾಯಿತು. ಅವಳನ್ನು ಓಡಿಸಿಕೊಂಡು ಹೋದದ್ದಕ್ಕಾಗಿ ಜಾರರಾಯನ ಮೇಲೆ ಫಿರ್ಯಾದಿಯಾಯಿತು. ಇಬ್ಬರಿಂದಲೂ ನಿಂದ್ಯ ವರ್ತನವು ಘಟಿಸಿತೋ ಇಲ್ಲವೋ ಎಂಬದರ ಬಗ್ಗೆ ಶೋಧವು ನಡೆ ಯಿತು. ಡಾಕ್ಟರರು ಕನ್ಯೆಯನ್ನು ಶೋಧಿಸಿದರು. ಆಗ ಅವರು ಆ ಕನ್ಯೆಯು ಇನ್ನೂ ಅಕ್ಷತ ಯೋನಿ ಇರುವಳೆಂದು ನಿರ್ಣಯಿಸಿದರು. ಕೂಡಲೆ ಫಿರ್ಯಾದಿ ಪಕ್ಷದ ಹಲ್ಲು ಮುರಿದಂತಾಯಿತು. ಅವರಿಬ್ಬರೂ ಒಂದೇ ಮನೆಯಲ್ಲಿರು ತ್ತಿದ್ದ ಬಗ್ಗೆಯೂ ಏಕಾಂತವಾಡುತ್ತಿದ್ದಬಗ್ಗೆಯೂ ಎಷ್ಟೋ ಸಾಕ್ಷಿಗಳು ತರ ಲ್ಪಟ್ಟಿದ್ದವು. ಫಿರ್ಯಾದಿ ಪಕ್ಷದ ವಕೀಲನು ಆ ಸ್ತ್ರೀಯನ್ನು ಈ ವಿಷಯದಲ್ಲಿ ವಿಚಾರಿಸಿದಾಗ ಅವಳು ಲಜ್ಜೆಯಿಂದ ಅವನತಮುಖಿಯಾದಳು. ಅವಳ ಮೌನದ ಅರ್ಥವು ಮರ್ಯಾದೆಶೀಲತೆಯೆಂದು ಮಾಡಲ್ಪಟ್ಟಿತು. ಈ ಎಲ್ಲ ಸಾಕ್ಷಿಗಳ ಮೇಲಿಂದ ಆ ಪ್ರಕರ್ಣದ ಮರ್ಮವು ನ್ಯಾಯಾಧಿಕಾರಿಗೆ ಗೊತ್ತಾ ದರೂ, ಡಾಕ್ಟರರ ಅಭಿಪ್ರಾಯದ ಮುಂದೆ ಅವರು ಕೈಊರಬೇಕಾಯಿತು. ಜಾರರಾಯನಿಗೆ ಮಾತ್ರ ಶಿಕ್ಷೆಯಾಯಿತು. ಕನ್ಯೆಯು ಸದ್ವರ್ತನಿಯೂ ಮಡಿವಂತೆಯೂ ಆಗಿ ತವರುಮನೆಯಲ್ಲಿರತೊಡಗಿದಳು!

ಕೃಷ್ಣರಾಯರಿಂದ ಏನಾದರೂ ತಿನಿಸು ದೊರೆಯಬೇಕೆಂದು ಡಾಕ್ಟರರ ಇಚ್ಛೆಯಿದ್ದಿಲ್ಲ; ಯಾಕಂದರೆ, ಕೃಷ್ಣರಾಯರು ದೊಡ್ಡ ಅಧಿಕಾರಿಗಳೂ ದರ ಬಾರದಲ್ಲಿ ವರ್ಚಸ್ಸುಳ್ಳವರೂ ಇದ್ದ ಸಂಗತಿಯು ಅವರಿಗೆ ಗೊತ್ತಿತ್ತು. ಜಗತ್ತಿ ನೊಳಗಿನ ದೊಡ್ಡ ದೊಡ್ಡವರೆನಿಸಿಕೊಳ್ಳುವವರಲ್ಲಿ ಬಹುತರವಾಗಿ ಇಂತಹ ಜನರ ಸಂಖ್ಯೆಯೇ ದೊಡ್ಡದಿರುವದೆಂದು ಅವರು ತಿಳಿದುಕೊಂಡಿದ್ದರು. ಹೇಗಾದರೂ ಒಮ್ಮೆ ಶೋಧನೆಯ ಕೆಲಸವನ್ನು ಪೂರೈಸಬೇಕೆಂದು ಅವರು ಶಾಸ್ತ್ರೀಯ ಭಾಷೆಯಿಂದ ಕೃಷ್ಣರಾಯರೊಡನೆ ಮಾತಾಡತೊಡಗಿದರು.

'ಕೃಷ್ಣರಾಯರೆ, ರಾಧಾದೇವಿಯ ಮದುವೆಯ ಗಂಡನು ಈಗ ಎಲ್ಲಿ ರುವನು?'

ಈ ಪ್ರಶ್ನೆಯು ಕೃಷ್ಣರಾಯರ ಅಂತಃಕರಣಕ್ಕೆ ಚುಚ್ಚಿತು. ಅವರು ಸ್ವಲ್ಪ ಗಾಬರಿಗೊಂಡರೂ, ಹೊರಗೆ ಒಳ್ಳೇ ದಿಟ್ಟತನವನ್ನು ತೋರಿಸುತ್ತ: 'ನೀವು ನನಗೆ ಈ ಪ್ರಶ್ನೆಯನ್ನು ಯಾವ ಅರ್ಥದಿಂದ ವಿಚಾರಿಸಿದಿರಿ?'

'ಇದರ ಅರ್ಥವೇನೂ ಅಷ್ಟೊಂದು ತೊಡಕಿನದಲ್ಲ; ತೀರ ಸರಳವಿದೆ. ಎಲ್ಲಿಯ ರಾಧಾದೇವಿಯು, ಎಲ್ಲಿಯ ಕೃಷ್ಣದೇವರು! ಕೈ ಕೆಳಗಿನ ಕೆಲಸಗಾರರ ವಿಷಯಕ್ಕೆ ನೀವು ಇಷ್ಟು ಅನುಕಂಪೆಯುಳ್ಳವರೂ, ಇಷ್ಟು ಸಹಾನುಭೂತಿಯುಳ್ಳವರೂ ಆಗಿರುವಿರಿ; ಆದರೆ ಯಾರ ಹೆಸರಿನಿಂದ ರಾಧಾದೇವಿಯು ಕೊಟ್ಟಳೋ ಆ ದಾನವನಿಗೆ ಇವಳ ಪರಿವೆಯೇ ಇಲ್ಲ. ಈ ಪರಿಸ್ಥಿತಿಯು ವಸ್ತುಸ್ಥಿತಿಗೆ ವಿಸಂಗತವೆನಿಸತೊಡಗಿದ್ದರಿಂದ ಕೇಳಿದೆನು.'

'ನಾನು ಈ ಸ್ಥಳಕ್ಕೆ ಬಂದದ್ದೆಂದರೆ, ಕೇವಲ ನೆರೆಯ ಧರ್ಮವನ್ನು ನೆನೆದದ್ದೇ ಆಗಿದೆ.'

'ಒಟ್ಟಿನಮೇಲೆ ಇವಳು ನಿಮ್ಮ ಮನೆಯ ನೆರೆಯಲ್ಲಿಯೇ ಇರುವಳೆಂದಂತಾಯಿತು'

'ಹೌದು.' 'ಹೀಗೆ ಏನು?'

'ನಾನು ನನ್ನ ಕೈ ಕೆಳಗಿನ ಕೆಲಸಗಾರರೊಡನೆ ಸಲಿಗೆಯಿಂದಲೂ ನಿಗರ್ವಿಯಾಗಿಯೂ ವರ್ತಿಸುತ್ತಿರುವೆನು.—'

'ನಿಮ್ಮಂತಹ ದೊಡ್ಡವರಿಗೆ ಇದು ಭೂಷಣವೇ ಸರಿ!'

'ಇದರಲ್ಲಿ ಭೂಷಣದ ಪ್ರಶ್ನೆಯಿಲ್ಲ. ಮನೆತನದ ಸಂಬಂಧದಲ್ಲಿ ನಾನು ಎಂದೂ ಅಧಿಕಾರವನ್ನು ನಡೆಯಿಸುತ್ತಿರುವದಿಲ್ಲ. ಅದರಲ್ಲಿ ರಾಧಾದೇವಿಯು ಸದಾಚಾರಿಯೂ, ಸುಶೀಲೆಯೂ, ಕರ್ತವ್ಯದಕ್ಷಳೂ, ವಿನಯಶೀಲೆಯೂ ಇರುವಳು. ಇವಳ ಅಚ್ಚುಕಟ್ಟುತನ, ಶಿಕ್ಷಣ ಪದ್ಧತಿ ಮೊದಲಾದವುಗಳಾದರೂ ವರ್ಣನೀಯವಾಗಿರುವವು. ನಾನು ಗುಣಗ್ರಾಹಿಯಿರುವೆನು. ಅಂತೆಯೇ ರಾಧಾದೇವಿಯವರ ಗುಣಗಳಿಗೆ ಲುಬ್ಧನಾಗಿ, ಇವಳೊಡನೆ ಭಗಿನಿಯಂತೆ ವರ್ತಿಸುತ್ತಿರುವೆನು.'

'ನೋಡಿದಿರಾ! ಇಂತಹ ಗೃಹಲಕ್ಷ್ಮಿಯೊಡನೆ ನಿರ್ದಯತೆಯಿಂದ ವರ್ತಿಸುವ ಇವಳ ಟೊಣಪ ಗಂಡನಿಗೆ ಹೇಗೆ ನಾಚಿಕೆ ಬರುವದಿಲ್ಲವೋ ಏನೋ!'

'ವಸ್ತುಸ್ಥಿತಿಯು ವಿಚಿತ್ರವಿದೆ.' ಡಾಕ್ಟರರ ಸಹೃದಯತೆಯ ಮೇಲೆ ವಿಶ್ವಾಸವಿಟ್ಟು ಕೃಷ್ಣರಾಯರು ಮನಬಿಚ್ಚಿ–'ಡಾಕ್ಟರ ಸಾಹೇಬರೆ, ಅವ್ಯಂಗವಾದ ಜೋಡುಗಳನ್ನು ಪರಮೇಶ್ವರನು ನಿರ್ಮಾಣ ಮಾಡುವದು ವಿರಳ. ಎಲ್ಲಿ ಹೆಂಡಿರು ಹೀಗೆ ಲಕ್ಷ್ಮೀದೇವಿಯಂತಿರುವರೋ, ಅಲ್ಲಿ ಗಂಡನು ದಾನವನೇ ಇರುತ್ತಾನೆ; ಎಲ್ಲಿ ಗಂಡನು ದಾಶರಥಿ ರಾಮನಂತಿರುವನೋ, ಅಂಥಲ್ಲಿ ಹೆಂಡಿರು ಮಾರಿಯಮ್ಮನಂತಿರುತ್ತಾರೆ. ಈಶ್ವರೀ ಸೃಷ್ಟಿಯಲ್ಲಾದರೂ ಸಮಭಾವನೆಯ ನೆಲೆಗೊಂಡಿದೆ?'

'ನಿಮ್ಮ ಮಾತುಗಳಿಗೆ ಅಲ್ಲವೆನ್ನಲಾರೆನು,' ಎಂದು ಡಾಕ್ಟರರು ನುಡಿದು, 'ರಾಧಾದೇವಿಯ ಪತಿಯು ಈ ಬಗೆಯಾಗಿ ದಾನವನಾಗಲಿಕ್ಕೆ ಕಾರಣವೇನಿರಬಹುದು?'

'ಬಹಳ ಮಾಡಿ ಅವನು ವ್ಯಸನಾಧೀನನಿರಬಹುದೆಂದು ನನ್ನ ಅಭಿಪ್ರಾಯವುಂಟು.'

ಕೃಷ್ಣರಾಯರು ಹೀಗೆ ಮಾತನಾಡುವಷ್ಟರಲ್ಲಿ ಅಡವೀರಾಯನೇ ಅಲ್ಲಿಗೆ ಬಂದನು. ಅವನನ್ನು ನೋಡಿದ ಕೂಡಲೆ ಕೃಷ್ಣರಾಯನು-'ಇದೇನು? ಅಡವೀರಾಯರೆ, ನೀವು ಸರ್ವಸಂಗ ಪರಿತ್ಯಾಗ ಮಾಡಿದ ಯತಿಗಳಂತಿರುವಿರಿ! ಮನೆಯಲ್ಲಿ ಇಷ್ಟು ಅನರ್ಥ ನಡೆದಿದ್ದರೂ ನೀವು ಮನೆಯ ಹೊರಗೇ!'

ಅಡವೀರಾಯನು ಏನೂ ಮಾತಾಡಲಿಲ್ಲ. ಅವನು ಕಂಬದಂತೆ ನಿಂತು ಬಿಟ್ಟನು ಕೃಷ್ಣರಾಯರ ಮಾತುಗಳ ಪರಿಣಾಮವು ಅವನ ಮನಸ್ಸಿನ ಮೇಲೆ ಸ್ವಲ್ಪಾದರೂ ಆಗದ್ದನ್ನು ನೋಡಿ ಡಾಕ್ಟರರಿಗೆ ವಿಸ್ಮಯವಾಯಿತು.

'ಡಾಕ್ಟರ ಸಾಹೇಬರೆ, ಇವರೇ ರಾಧಾದೇವಿಯವರ ಯಜಮಾನರು. ಸಂಸಾರದಲ್ಲಿದ್ದರೂ, ಇತ್ತೀಚೆಗೆ ಇವರು ವಿರಕ್ತರಂತೆ ಆಚರಿಸುತ್ತಿರುವರು,' ಎಂದು ಕೃಷ್ಣರಾಯರು ಹೇಳಿದರು.

'ಅಡವೀರಾಯರೆ, ಕೊಲೆಯ ಪ್ರಯತ್ನ ನಡೆದಾಗ ನೀವು ಮನೆಯಲ್ಲಿದ್ದಿರೇನು?' ಡಾಕ್ಟರರು ಕೇಳಿದರು.

'ಇಲ್ಲ!' ಎಂದು ಅಡವೀರಾಯನು ಉತ್ತರಿಸಿದನು.

'ಈ ವಿಷಯದಲ್ಲಿ ನಿಮಗೆ ಏನಾದರೂ ಗೊತ್ತಿದೆಯೊ?'

'ಇಲ್ಲ."

'ನೀವು ಯಾರ ಮೇಲಾದರೂ ಕೊಲೆಯ ಬಗ್ಗೆ ಸಂಶಯಗೊಂಡಿರುವಿರೊ?'

'ಇಲ್ಲ.'

'ಬೆಳಗಾಗುವ ವರೆಗೆ ನೀವು ಈ ಸಂಗತಿಯನ್ನು ಕೇಳಿದ್ದಿಲ್ಲವೇನು?'

'ಇಲ್ಲ.'

ಅಡವೀರಾಯನಿಂದ 'ಇಲ್ಲ' ಎಂಬದರ ಹೊರತು ಬೇರೆ ಮಾತುಗಳೇ ಹೊರಡದ್ದನ್ನು ನೋಡಿ ಡಾಕ್ಟರರಿಗೆ ವಿಸ್ಮಯವಾಯಿತು. ಪತ್ನಿಯ ಮೇಲೊದಗಿದ ಗಂಡಾಂತರದಿಂದ ಅವನ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗದ್ದರಿಂದ ಆ ದಂಪತಿಗಳ ಸಂಬಂಧವು ಬಹಳೇ ವಿಚಿತ್ರವಾಗಿರಬೇಕೆಂದು ಅವರು ತರ್ಕಿಸಿದರು.

ಅಷ್ಟರಲ್ಲಿ ರಾಧಾದೇವಿಯ ಪ್ರಕರಣದ ಶೋಧನೆಗೆ ನಿಯಮಿಸಲ್ಪಟ್ಟ ಹಿಂದೂಕೊತವಾಲನಾದ ಕೇದಾರನಾಥನು ಅಲ್ಲಿಗೆ ಬಂದನು. ಅವನುಬಂದ ಕೂಡಲೆ ಕೊಲೆಯ ಸ್ತ್ರೀಯ ಪ್ರಕೃತಿಯ ವಿಷಯವಾಗಿ ಡಾಕ್ಟರರನ್ನು ಕೇಳಿದನು. ಅವಳು ಸಾಧಾರಣವಾಗಿ ಸಾವಧಾನಗೊಂಡಿರುವಳೆಂದು ತಿಳಿದ ಕೂಡಲೆ ಕೊತವಾಲನು ಅವಳ ಸಮೀಪಕ್ಕೆಹೋಗಿ-'ಅಮ್ಮಾ, ನಿಮ್ಮ ಕೊಲೆ ಮಾಡಲಿಕ್ಕೆ ಯಾರು ಬಂದಿದ್ದರೆಂಬದು ನಿಮಗೆ ಗೊತ್ತಿದೆಯೋ?'

''ಚನ್ನಾಗಿ ಗೊತ್ತಿಲ್ಲ."

'ಅದೇಕೆ ಗೊತ್ತಾಗಲಿಲ್ಲ? ಕೊಲೆಗಡಕನ ಮುಖವು ನಿಮಗೆ ಕಾಣಲಿಲ್ಲೇನು?'

'ಅವನು ಮುಖದ ಮೇಲೆ ಬುರುಕೆ ಹಾಕಿಕೊಂಡಿದ್ದನು; ಆದರೂ ಗೊತ್ತಾದ ಎಲ್ಲ ಸಂಗತಿಗಳನ್ನು ನಮ್ಮ ರಾವಸಾಹೇಬರ ಮುಂದೆ ಹೇಳಿರುವೆನು; ಹಾಗು ಪಂಚನಾಮೆಗೆ ಬಂದ ಪೋಲೀಸರಮುಂದೆಯೂಹೇಳಿರುವೆನು.

'ರಾಧಾದೇವಿಯವರ ಸಂಶಯವು ಯಾರ ಮೇಲಿರುವದೋ ಅವರ ಹೆಸರನ್ನು ನಾನು ಕೊತವಾಲ ಒದ್ರುದ್ದೀನಖಾನರಿಗೆ ತಿಳಿಸಿರುವೆನು. ಇಷ್ಟರಲ್ಲಿ ಅವರು ಸೆರೆಮನೆಯನ್ನು ಕಂಡಿರಬಹುದು' ಎಂತು ಕೃಷ್ಣರಾಯರು ಕೊತವಾಲನಿಗೆ ಹೇಳಿದರು.

'ಮುಖದ ಮೇಲೆ ಬುರುಕೆ ಹಾಕಿಕೊಂಡು ಕೊಲೆ ಮಾಡಲಿಕ್ಕೆಬಂದವರ ಗೊತ್ತುವಳಿಯಾಗದಿದ್ದ ಸಂದರ್ಭದಲ್ಲಿ, ಇಂತಹ ಮನುಷ್ಯರೇ ಕೊಲೆ ಮಾಡಿರುವರೆಂದು ನೀವು ಯಾತರ ಮೇಲಿಂದ ಹೇಳುತ್ತೀರಿ?'

ಕೃಷ್ಣರಾಯರು ಗೊಂದಲದಲ್ಲಿ ಬಿದ್ದರು. ಅವರು ಸ್ವಲ್ಪವೇಳೆ ಯೋಚಿಸಿ-'ಕೊತವಾಲಸಾಹೇಬರೆ, ನೀವು ತರ್ಕದಿಂದ ಅಪರಾಧಿಗಳನ್ನು ಹೇಗೆ ಶೋಧಿಸುವಿರೋ ಅದೇ ತರ್ಕದಿಂದ ನಾನಾದರೂ ಅಪರಾಧಿಗಳ ಶೋಧ ಮಾಡಿರುವೆನು. ರಾಧಾದೇವಿಯವರಾದರೂ ನನ್ನಂತೆಯೆ ಅಭಿಪ್ರಾಯವುಳ್ಳವರಾಗಿರುವರು. ನಿನ್ನೆ ರಾತ್ರಿಯಲ್ಲಿ ರಾಧಾದೇವಿಯವರೊಡನೆ ರಮಾದೇವಿಯು ವ್ಯಾಜ್ಯ ಮಾಡಿದ್ದಳು. ಈ ಸಂಗತಿಯನ್ನು ಕೇಳಿ ಸುರೇಂದ್ರರಾಯನು ಸಿಟ್ಟಿಗೆದ್ದು ಈ ಕೃತ್ಯ ಮಾಡಿರುವನು. ಸುರೇಂದ್ರರಾಯನೂ ರಾಧಾದೇವಿಯವರೂ ನನ್ನ ಕೈಕೆಳಗಿನಕೆಲಸಗಾರರಿರುವದರಿಂದ ಪರಸ್ಪರರಲ್ಲಿ ಸಖ್ಯವಿಲ್ಲೆಂಬದು ನನಗೆ ಗೊತ್ತಿದೆ. ಇಂದಿನ ಅಪರಾಧವು ದೊಡ್ಡದಾದ್ದರಿಂದ ಇದರ ವಿಚಾರಣೆಯ ಕೆಲಸವು ನಿಮ್ಮ ಕಡೆಗೆ ಬಂದಿದೆ; ಆದರೆ ಇಷ್ಟರೊಳಗೆ ನಾನು ಇವರಲ್ಲಿಯ ಎಷ್ಟೋ ಅಪರಾಧಗಳ ವಿಚಾರಣೆ ಮಾಡಿರುವೆನು. ಪ್ರತಿ

ಯೊಂದು ವಿಷಯದಲ್ಲಿ ಸುರೇಂದ್ರರಾಯನೂ, ರಮಾದೇವಿಯೂ ಅಪರಾಧಿ ಗಳಿದ್ದ ಬಗ್ಗೆ ನನ್ನ ಮನವರಿಕೆಯಾಗಿದೆ.”

‘ಒಟ್ಟಿನ ಮೇಲೆ ಸುರೇಂದ್ರ-ರಮಾಬಾಯಿ ಇವರು ರಾಧಾದೇವಿಯ ಅಸ್ಥಿವೈರಿಗಳಿರುವರೆಂದಂತಾಯಿತು.’

‘ಛೇ! ಹಾಗೇನೂ ಇಲ್ಲ!’ ಅಡವೀರಾಯನು ಹೇಳಿದನು.

‘ಇವರು ಯಾರು?’ ಕೇದಾರನಾಥನು ಕೃಷ್ಣರಾಯರನ್ನು ಕೇಳಿದನು.

‘ಇವರೇ ರಾಧಾದೇವಿಯವರ ಯಜಮಾನರು’ ಎಂದು ಡಾಕ್ಟರರು ಹೇಳಿದರು.

‘ಆದರೆ ಇವರಿಗೆ ಕೊಲೆಯ ವಿಷಯವು ಗೊತ್ತಿಲ್ಲ’ ಎಂದು ಕೃಷ್ಣ ರಾಯರು ಹೇಳಿದರು.

‘ಅದು ಹೇಗೆ? ಹೆಂಡತಿಯ ಕೊಲೆಯ ಸುದ್ದಿಯು ಗಂಡನಿಗೆ ಗೊತ್ತಾ ಗದೆ ಉಳಿಯುವದೇ?’ ಎಂದು ಕೇದಾರನಾಥನು ನುಡಿದು, ಅಡವೀರಾಯ ನನ್ನು ಕುರಿತು—‘ನಿಮ್ಮ ಹೆಸರೇನು?’

‘ಅಡವೀರಾಯ ರತ್ನಪುರ.’

ನೀವು ಈ ಅಮ್ಮನವರ ಯಜಮಾನರೇನು?’

‘ಇವಳೊಡನೆ ನನ್ನ ಲಗ್ನವಾದದ್ದು ಸುಳ್ಳಲ್ಲ’

ಅಡವೀರಾಯನ ಮಾತಿನ ಮಾರ್ಮಿಕತೆಯು ಕೊತವಾಲನಿಗೆ ಗೊತ್ತಾಗಲಿಲ್ಲ. ಡಾಕ್ಟರರಿಗೂ ಕೃಷ್ಣರಾಯರಿಗೂ ಅದು ಚನ್ನಾಗಿ ತಿಳಿಯಿತು. ಕೃಷ್ಣರಾಯರ ಜೀವವು ಮಾತ್ರ ಕೆಳಗೆ ಮೇಲೆ ಆಗಹತ್ತಿತು.

‘ಅಡವೀರಾಯರೇ,’ ಕೊತವಾಲನು ಒಂದು ವಿಧದ ಸಂಶಯದಿಂದ: ‘ನಿಮಗೆ ಈ ಅತ್ಯಾಚಾರದ ವಿಷಯವಾಗಿ ಗೊತ್ತುವಳಿಯಿರಲಿಕ್ಕೆಬೇಕು.’

‘ನನಗೆ ಏನೂ ಗೊತ್ತಿಲ್ಲ; ಆದರೆ ನಿಷ್ಕಾರಣವಾಗಿ ರಮಾದೇವಿ-ಸುರೇಂದ್ರರಾಯರನ್ನು ಸೆರೆ ಹಿಡಿದದ್ದು ಅನ್ಯಾಯವೆಂದು ಹೇಳಬಲ್ಲೆನು; ಅವರು ಆದರ್ಶ ದಂಪತಿಗಳಿರುವರು.’

‘ಅಡವೀರಾಯರೇ, ಯಾವ ವಿಷಯವು ನಿಮಗೆ ಗೊತ್ತಿಲ್ಲವೋ ಅದರ ಬಗ್ಗೆ ಇಂತಹ ಅಧಿಕಾರಿಗಳೆದುರಿಗೆ ಏನಾದರೊಂದು ಮತಪ್ರದರ್ಶನಮಾಡು ವದು ಅನುಚಿತವೂ ಸಂಕಟಪ್ರದವೂ ಆಗಿದೆ; ಯಾಕಂದರೆ, ನಿಮ್ಮ ಮಾತಿ ನೊಳಗಿನ ಪ್ರತಿಯೊಂದು ಶಬ್ದವು ಸಾಕ್ಷಿಯಾಗಬಹುದು.’ ಎಂದು ಕೃಷ್ಣ ರಾಯರು ಗರ್ಜಿಸಿದರು.

ಕೃಷ್ಣರಾಯರ ಈ ವರ್ತನವು ಕೇದಾರನಾಥನಿಗೆ ಸರಿಯಾಗಿ ತೋರ

ಲಿಲ್ಲ. ಅತ್ಯಾಚಾರವು ರಾಧಾದೇವಿಯ ಮೇಲೆ ಮಾಡಲ್ಪಟ್ಟಿದ್ದು, ಅವಳ ಗಂಡನು ತನಗೆ ತಿಳಿದವಟ್ಟಿಗೆ ಮಾತಾಡುವನು; ಅದರೆ ನಡುವೆ ಈ ಮೂರನೆಯವನ ಮಧ್ಯಸ್ಥಿಕೆಯೇಕೆಂದು ಆ ಅಧಿಕಾರಿಯು ಸಿಟ್ಟಿಗೆದ್ದನು; ಆದರೂ ಕೃಷ್ಣರಾಯರಂತಹ ವರ್ಚಸ್ವಿಗಳಾಗಿದ್ದ ಅಧಿಕಾರಿಗಳ ಮಾನಕ್ಷಿತಿ ಮಾಡಬಾರದೆಂದು ಅವನು ತನ್ನ ಸಿಟ್ಟು ನುಂಗಿಕೊಂಡನು.

'ರಮಾದೇವಿ ಸುರೇಂದ್ರರ ಅಂಗವು ಈ ಅಪರಾಧದಲ್ಲಿಲ್ಲವೆಂದು ನೀವು ಹೇಳುವಿರಿ; ಆದರೆ ಈ ಕೆಲಸ ಯಾರು ಮಾಡಿರಬಹುದೆಂದು ನಿಮಗೆ ಸಂಶಯವುಂಟಾಗುವದು?' ಎಂದು ಕೊತವಾಲನು ಅಡವೀರಾಯನನ್ನು ಕೇಳಿದನು.

'ನಾನು ಯಾರ ಮೇಲೆಯೂ ಸಂಶಯಗೊಳ್ಳುವದಿಲ್ಲ.'

'ನೀವು ಮುಚ್ಚುತ್ತಿರುವಿರಿ.'

'ಇಲ್ಲ.'

'ಸುಳ್ಳಾಡುವಿರಿ.'

'ಇಲ್ಲ' ಎಂದಿಷ್ಟೇ ಅಡವೀರಾಯನು ನುಡಿದನು.

'ನಿಮ್ಮಲ್ಲಿಯೇ ಸಂಶಯವುಂಟಾಗುವದರಿಂದ, ನಾನು ನಿಮ್ಮನ್ನೇ ಸೆರೆ ಹಿಡಿಯುವೆನು!'

'ಪ್ರಸಂಗವು ತನ್ನ ಮೇಲೆಯೇ ಹೊರಳಿದ್ದರಿಂದ ಅಡವೀರಾಯನ ಎದೆಯೊಡೆಯಿತು. ಅವನು ನಿಂತಲ್ಲಿಯೇ ಕುಸಿಬಿದ್ದು, ಮನಸ್ಸಿನಲ್ಲಿ-'ಪರಮೇಶ್ವರನು ಈ ದೇವಿಯ ಗಂಡತನವನ್ನು ನನ್ನ ಹಣೆಯಲ್ಲಿ ಬರೆದದ್ದಕ್ಕೆ ಏನೇನು ಗಂಡಾಂತರವನ್ನು ಭೋಗಿಸಬೇಕಾಗುವದೋ-ಏನೋ!' ಎಂದು ಮಿಡುಕ ತೊಡಗಿದನು.

ರಾಧಾದೇವಿಯ ಪ್ರಕೃತಿಯು ಕ್ಷಣಕ್ಷಣಕ್ಕೆ ಸ್ಥಿತ್ಯಂತರ ಹೊಂದುತ್ತ ನಡೆಯಿತು. ಅವಳಿಗೆ ಮತ್ತೆ ಮೂರ್ಛೆಯುಂಟಾಗುವ ಚಿಹ್ನವು ತೋರ ಹತ್ತಿತು. ಈ ಎಲ್ಲ ಪ್ರಕಾರವನ್ನು ನೋಡಿದೊಡನೆಯೇ ಕೃಷ್ಣರಾಯರ ಎದೆಯೊಡೆಯಿತು. ಈ ಪ್ರಸಂಗದಲ್ಲಿ ಆಕೆ ಎಚ್ಚರಗೊಳ್ಳದಿದ್ದರೆ ಕಠಿಣವಾಗುವದೆಂದು ತಿಳಿದು, ಅವರು ಕೇದಾರನಾಥರನ್ನು ಕುರಿತು-'ನಿಮ್ಮೊಡನೆ ಮಹತ್ವ ವಿಷಯವಾಗಿ ಮಾತಾಡಬೇಕಾಗಿದೆ. ಸ್ವಲ್ಪ ವೇಳೆ ಆ ಕೋಣೆಯಲ್ಲಿ ನಡೆಯಿರಿ.'

ಕೇದಾರನಾಥ-ಕೃಷ್ಣರಾಯರು ಕೋಣೆಯಲ್ಲಿ ಹೋದರು. ಅವರ ಭಾಷಣವೇನಾಯಿತೆಂಬದು ತಿಳಿಯದಿದ್ದರೂ, ಸಂಧಿಯ ವಿಷಯವಾಗಿ

ಪ್ರಸ್ತಾಪ ನಡೆದಿರಬಹುದೆಂದು ತರ್ಕದಿಂದ ತಿಳಿಯಬಹುದಾಗಿತ್ತು.

ರುಗ್ಣಾಲಯದ ನರ್ಸಳಾದ ಗುಲಾಬಿಯು ರಾಧಾದೇವಿಯ ಬಳಿಯಲ್ಲಿ ಕುಳಿತಿದ್ದಳು. ಆಗ ಅಡವೀರಾಯನು ಅವಳ ಬಳಿಗೆ ಹೋಗಿ—'ಈ ಅಮ್ಮ ನವರು ಇನ್ನೆಷ್ಟು ವೇಳೆ ಜೀವಿಸುವರು?'

'ಅದನ್ನು ಹೇಗೆ ಹೇಳಬೇಕು?' ಎಂದು ಗುಲಾಬಿಯು ನುಡಿದಳು. ಎಲ್ಲವನ್ನೂ ಬಿಟ್ಟು ರಾಧಾದೇವಿಯು ಮರಣ ವಿಚಾರಣೆ ಮಾಡುವ ಈ ವಿಕ್ಷಿಪ್ತ ಪ್ರಾಣಿಯು ಯಾರಿರಬಹುದೆಂಬದನ್ನು ತಿಳಕೊಳ್ಳಲಿಕ್ಕೆ ಅವಳು ಮುಖವೆತ್ತಿದಳು.

'ಇಷ್ಟೇಕೆ ದಿಟ್ಟಿಸಿ ನೋಡುವಿರಿ? ಇವರು ರಾಧಾದೇವಿಯವರ ಯಜಮಾನರು,' ಎಂದು ಡಾಕ್ಟರರು ನರ್ಸಳಿಗೆ ಹೇಳಿದರು.

ಅಷ್ಟರಲ್ಲಿ ರಾಧಾದೇವಿಯು ಪ್ರಾಣಾಂತಿಕ ವೇದನೆಯಿಂದ ನರಳುತ್ತಿರುವದನ್ನು ಕೇಳಿ ನರ್ಸಳ ಲಕ್ಷ್ಯವು ಅವಳ ಕಡೆಗೆ ಹೋಯಿತು. ಆಗ ಅವಳು-'ರಾಧಾದೇವಿ, ನಿಮಗೆ ಹೇಗಾಗುತ್ತದೆ?'

'ಸಾಯಬೇಕೆಂಬ ಹಾಗಾಗುತ್ತದೆ.'

ಕೂಡಲೆ ಡಾಕ್ಟರರು ಅವಳ ಪ್ರಕೃತಿಯನ್ನು ನೋಡಲಿಕ್ಕೆ ಮುಂದೆ ಬಂದರು. ಅಷ್ಟರಲ್ಲಿ ಕೊತವಾಲನೂ ಕೃಷ್ಣರಾಯರೂ ಹೊರಗೆ ಬಂದರು. ಅನಂತರದಲ್ಲಿ ಕೊತವಾಲನು ಡಾಕ್ಟರರನ್ನು ಕುರಿತು ಡಾಕ್ಟರ ಸಾಹೇಬರೆ, ರಾಧಾದೇವಿಯವರ ಪ್ರಕೃತಿಯ ವಿಷಯವಾಗಿ ನಿಮ್ಮ ಮತವೇನಿರುದೆಂಬದನ್ನು ತಿಳಿಸಿರಿ. ಹೊರಗೆ ಹೋದ ಕೂಡಲೆ ವರ್ತಮಾನಪತ್ರಗಳ ಸುದ್ದಿಗಾರರು ನನ್ನ ಜೀವ ತಿನ್ನುವರು. ಅವರಿಗೆ ಏನಾದರೊಂದು ಹೇಳಲಿಕ್ಕೇ ಬೇಕು'

'ನಿಜವು,' ಎಂದು ಡಾಕ್ಟರರು ನುಡಿದು, ಗುಲಾಬಿಯನ್ನು ಕುರಿತು— 'ಸಿಸ್ಟರ ಗುಲಾಬ, ರಾಧಾದೇವಿಯವರು ಗಾಯದಿಂದ ಬಹಳೇ ಅಶಕ್ತರಾಗಿರುವರು. ಇಂತಹ ಸ್ಥಿತಿಯಲ್ಲಿ ನೈಸರ್ಗಿಕ ರೀತಿಯಿಂದ ಪ್ರಸೂತರಾಗುವಂತೆ ಮಾಡುವದು ಅನುಚಿತವು. ಶಸ್ತ್ರಕ್ರಿಯೆಯಿಂದ ಕೂಸನ್ನು ಕೊಯ್ದು ತೆಗೆಯುವದೇ ಯೋಗ್ಯವೆಂದು ನನಗೆ ತೋರುವದು. ನಿಮ್ಮ ಮತವು ಹೇಗಿರುವದು?'

'ನನಗೂ ಹಾಗೆಯೇ ತೋರುವದು.' ಎಂದು ನರ್ಸಳು ಉತ್ತರಿಸಿದಳು.

'ಅಡವೀರಾಯರೇ, ನಮ್ಮ ಯೋಜನೆಯ ವಿಷಯದಲ್ಲಿ ನಿಮ್ಮ ಮತ

ವೇಸಿದೆ?' ಎಂದು ಡಾಕ್ಟರರು ಅಡವೀರಾಯನನ್ನು ಕೇಳಿದರು.

ರಾಧಾದೇವಿಯು ಯಮಯಾತನೆಯನ್ನನುಭವಿಸುತ್ತ, ಗರ್ಭದೊಳಗಿನ ಅರ್ಭಕನೊಡನೆ ಮೃತಿ ಹೊಂದಬೇಕೆಂದು ಅಡವೀರಾಯರ ಇಚ್ಛೆಯಿತ್ತು. ಇಂತಹ ದುಷ್ಟ ವಿಚಾರವನ್ನು ಬೈಲಿಗೆಳೆದರೆ, ಅಪರಾಧವು ತನ್ನ ಮೇಲೆಯೇ ಹೊರುವದೆಂಬ ಬೆದರಿಕೆಯಿಂದ ಅವನು ಮನಸ್ಸು ಬಿಗಿಹಿಡಿದು: 'ನನಗೆ ಮತವೇ ಇಲ್ಲ.' ಎಂದು ಉತ್ತರ ಕೊಟ್ಟನು.

ಈ ಉತ್ತರವಾದರೂ ಕಡಿಮೆ ನಿಷ್ಠುರತನದ್ದಾಗಿದ್ದಿಲ್ಲ ಅವನ ಮಾತಿನ ಮರ್ಮವು ರಾಧಾದೇವಿ-ಕೃಷ್ಣರಾಯರ ಹೊರತು ಬೇರೆ ಯಾರಿಗೂ ತಿಳಿಯಲಿಲ್ಲ. ಆಗ ಕೃಷ್ಣರಾಯರು ಅಡವೀರಾಯನನ್ನು ಕುರಿತು:—'ಅಡವೀರಾಯರೆ, ಸ್ವಲ್ಪ ಇತ್ತ ಕಡೆಗೆ ಬರ್ರಿ.'

'ಯಾಕೆ ರಾವಸಾಹೇಬರೆ?' ಅಡವೀರಾಯನು ತನ್ನ ಸಾಹೇಬರೆದುರಿಗೆ ನಿಂತು ಕೇಳಿದನು.

'ಸದ್ಯದ ಪ್ರಸಂಗದ ವಿಷಯವಾಗಿ ನಿಮಗೆಚನ್ನಾಗಿ ಕಲ್ಪನೆಯಾಗಿರುವದೋ?'

'ನನಗೇನು ಕಲ್ಪನೆಯಾಗಬೇಕು?'

'ಈ ಪ್ರಕರಣದಲ್ಲಿ ನಿಮ್ಮ ಸಂಬಂಧವಿಲ್ಲದಿದ್ದರೂ, ಸಂಬಂಧವಿರುವದು ಅಸಂಭಾವ್ಯವಾಗಿದ್ದರೂ, ಕೊತವಾಲರು ನಿಮ್ಮನ್ನು ಪ್ರತಿಬಂಧಕ್ಕೊಳಪಡಿಸಿರುವರು. ಇದರ ಕಲ್ಪನೆಯಾದರೂ ನಿಮಗಾಗಿರುವದೆ?'

'ಕೊತವಾಲರ ಕೃತ್ಯಕ್ಕೆ ನಾನೇನು ಮಾಡಬೇಕು? ಉಪಾಯವಿಲ್ಲ.'

'ಉಪಾಯವಿಲ್ಲದಿದ್ದರೂ ನಾನು ಹೇಳಿದಂತೆ ನೀವು ನಡೆದರೆ ಅಪರಾಧಿಗಳ ಮಾಲಿಕೆಯಿಂದ ಮುಕ್ತರಾಗುವಿರಿ.'

'ನಾನು ಹೇಗೆ ನಡೆಯಬೇಕೆಂದು ನಿಮಗೆ ತೋರುವದು?'

'ನಿಮ್ಮ ಗಂಡ-ಹೆಂಡಿರಲ್ಲಿ ಎಂತಹ ವಿತುಷ್ಟತೆಯಿದ್ದರೂ ಅದನ್ನು ಹೊರಗೆ ತೆಗೆಯದೆ, ಒಬ್ಬ ಅಂತಃಕರಣಿಯಾದ ಪತಿಯಂತೆ ನೀವು ನಡೆಕೊಳ್ಳಬೇಕು. ಕಡೆತನಕ ಹಾಗೆ ನಡೆಕೊಳ್ಳಬೇಕೆಂದು ನಾನು ಅನ್ನುವದಿಲ್ಲ. ಸದ್ಯದ ಪ್ರಕರಣದ ಸಮಾಪ್ತಿಯಾಗುವವರೆಗೆ ಮಾತ್ರ ಹಾಗೆ ನಡೆಕೊಳ್ಳಿರಿ.'

'ಆರೋಪಿಯಾಗಿ ಶಿಕ್ಷೆ ಹೊಂದುವದಕ್ಕಿಂತಲೂ ಈ ಶಿಕ್ಷೆಯು ದೊಡ್ಡದೆಂದು ನನಗೆ ತೋರುವದು.'

'ನೀವು ಹೀಗೆ ಹುಚ್ಚರಂತೆ ಮಾಡಬೇಡಿರಿ. ನಾನು ನಿಮ್ಮ ಹಿತಕ್ಕಾಗಿಯೆ ಹೇಳುವೆನೆಂದು ತಿಳಿಯಿರಿ. ನನ್ನ-ನಿಮ್ಮ ಋಣಾನುಬಂಧವನ್ನು

ನೆನೆದು, ನಿಮ್ಮ ರಕ್ಷಣೆಗಾಗಿ ಮಾಡಬೇಕಾದಷ್ಟು ಕೆಲಸವನ್ನು ನಾನು ಮಾಡಬೇಕೆಂದು ಯೋಚಿಸಿರುವೆನು. ನೀವು ಅದರ ಉಪಯೋಗ ಮಾಡಿಕೊಳ್ಳದಿದ್ದರೆ ನಿಮ್ಮ ದುರ್ದೈವವೆಂದು ತಿಳಿಯಬೇಕಾಗುವದು.'

ಇಷ್ಟು ವೇಳೆಯವರೆಗೆ ಸುಮ್ಮಸಿದ್ದ ಕೇದಾರನಾಥ ಕೊತವಾಲನು ಅಡವೀರಾಯನನ್ನು ಕುರಿತು-'ಅಡವೀರಾಯರೇ, ನಿಮ್ಮರಾವಸಾಹೇಬರು ನಿಮ್ಮ ಹಿತದ ಮಾತನ್ನೇ ಹೇಳುತ್ತಿರುವರು. ಅವರ ಮಾತನ್ನು ಉಪೇಕ್ಷಿಸಿದರೆ ನೀವು ಸಂಕಟಕ್ಕೀಡಾಗುವಿರಿ. ನಿಮ್ಮನ್ನು ಸೆರೆಹಿಡಿಯಬೇಕೆಂದು ನನ್ನ ಯೋಚನೆಯಿತ್ತು; ಆದರೆ ನಿಮ್ಮ ರಾವಸಾಹೇಬರು ಸತ್ಯಸ್ಥಿತಿಯನ್ನು ನನಗೆ ತಿಳಿಸಿದ್ದರಿಂದ, ನೀವು ನಿರ್ದೋಷಿಗಳಿರುವಿರೆಂದು ನಂಬಿಗೆಯಾಗಿದೆ. ನೀವು ಸದ್ಯದ ಪ್ರಸಂಗದಲ್ಲಿ ಸರಕಾರದ ಪಕ್ಷದಿಂದ ಸಾಕ್ಷಿದಾರರಾಗಬೇಕಾಗುವದು. ನಿಮ್ಮನ್ನು ಅಪರಾಧಿಗಳ ಡಾವಣಿಯಲ್ಲಿ ಬಂಧಿಸುವದೂ-ಬಿಡುವದೂ ಕೊತವಾಲನಾದ ನನ್ನ ಅಧಿಕಾರದ ಕಕ್ಷೆಯೊಳಗಿನದಾಗಿದೆ. ಕಾನೂನಿಗನುಸಾರವಾಗಿ ಕೃತಿಗಳನ್ನು ಪ್ರಚಾರದಲ್ಲಿ ತರುವದಕ್ಕಿಂತ ಮೌಂಚಿತವಾಗಿ ನೀವು ನಿರಪರಾಧಿಗಳಿರುವಿರೆಂಬ ಬಗ್ಗೆ ನನಗೆ ನಂಬಿಗೆಯಾದ್ದರಿಂದ, ನಿಮ್ಮ ಛಲನೆಯಾಗಬೇಕೆಂದು ನಾನು ಇಚ್ಛಿಸುವದಿಲ್ಲ. ನಿರಾಯಾಸವಾಗಿ ದೊರೆಯುತ್ತಿರುವ ಲಾಭವನ್ನು ವ್ಯರ್ಥಮಾಡಿಕೊಳ್ಳಲಾರಿರೆಂದು ನಂಬುತ್ತೇನೆ.'

ಜೀವವು ಅತ್ಯಂತ ಪ್ರಿಯವಾದದ್ದೇ ಸರಿ. ಪಾತಾಳಯಂತ್ರಿಗಳಾದ ಪೋಲೀಸರು ಪೂರ್ವ- ಪಶ್ಚಿಮಗಳನ್ನೊಂದುಮಾಡುವಂತಹಪಾತಾಳಯಂತ್ರಿಗಳಿರುವರೆಂಬದನ್ನು ಅಡವೀರಾಯನು ಜನರ ಬಾಯಿಯಿಂದ ಕೇಳಿ ಅರಿತಿದ್ದನು. ಈಗ ಕೇದಾರನಾಥನ ಸೂಚನೆಯಂತೆ ನಡೆಯದಿದ್ದರೆಯಾವಅನರ್ಥವೊದಗುವದೋ ಎಂದು ಅವನು ಅಂಜಿದನು. ರಾಧಾದೇವಿ-ಕೃಷ್ಣರಾಯರು ನಾಶವಾಗಬೇಕೆಂದು ಅವನ ಮಹತ್ವಾಕಾಂಕ್ಷೆಯಿತ್ತು. ಈಗ ರಾಧಾದೇವಿ ಮೃತ್ಯುಪಥವನ್ನಾಶ್ರಯಿಸಿರುವಳೆಂದು ಅವನ ಮನಸ್ಸು ಸ್ವಲ್ಪ ಸಮಾಧಾನಗೊಂಡಿತ್ತು. ಕೃಷ್ಣರಾಯರ ಪ್ರಾಣವು, ಕಡೆಗೆ ಮಾನವು ನಷ್ಟವಾದರೂ ಅವನು ತನ್ನ ಶಿರಃಕಮಲವನ್ನು ದೇವತಾಚರಣಕ್ಕೆ ಅರ್ಪಿಸುತ್ತಿದ್ದನು. ಈಗ ಎರಡೂ ಕಾರ್ಯಗಳು ಅಪೂರ್ಣಾವಸ್ಥೆಯಲ್ಲಿರಲು ತನ್ನ ಕೈಯಿಂದ ತಾನೇ ಗಂಡಾಂತರವನ್ನು ತಂದುಕೊಳ್ಳುವದು ಅನುಚಿತವೆಂದು ಅವನ ಭಾವನೆಯಾಯಿತು. ಅವನು ಕೊತವಾಲರ ಹೇಳಿಕೆಯಂತೆ ನಡೆದು ಜೀವರಕ್ಷಣೆ ಮಾಡಿಕೊಳ್ಳಬೇಕೆಂದು ಯೋಚಿಸಿದನು. ಆಗ ಅವನು-'ಸಾಹೇಬಧ್ವಯರ ಆಜ್ಞೆಯು ನನಗೆ ಶಿರಸಾಮಾನ್ಯವಿರುವದು.'

'ಇನ್ನು ಮೇಲೆ ನೀವು ನಮ್ಮ ಹೇಳಿಕೆಯಂತೆ ನಡೆಯಬೇಕು' ಎಂದು ಕೇದಾರನಾಥನು ಆಜ್ಞೆ ಮಾಡಿದನು.

ಮಾಫಿಯ ಸಾಕ್ಷಿಗಳಾಗುವದೆಂದರೆ ತಮ್ಮ ಜೀವದ ರಕ್ಷಣೆಗಾಗಿ ಬೇರೆಯವರ ಪ್ರಾಣಭಕ್ಷಣೆ ಮಾಡುವದೆಂಬದು ಅಡವೀರಾಯನಿಗೆ ಗೊತ್ತಿತ್ತು; ಆದರೆ ಮಾಡುತ್ತಾನೇನು? ಅವನು ಪೋಲೀಸರ ಹಿಡಿತದಲ್ಲಿ ಸಿಕ್ಕು ಜಿಬ್ಬೆಯಾಗಿದ್ದನು; ಆದ್ದರಿಂದ ಅವನು ನಿರ್ವಾಹವಿಲ್ಲದೆ–'ಒಳ್ಳೇದು, ನಿಮ್ಮ ಹೇಳಿಕೆಯಂತೆ ನಡೆಯುವೆನು.'

ಅಷ್ಟರಲ್ಲಿ ನರ್ಸ ಗುಲಾಬಿಯು ಅಲ್ಲಿಗೆ ಬಂದು—'ಅಡವೀರಾಯರೇ, ನೀವು ನಿಶ್ಚಿಂತೆಯಿಂದಿರ್ರಿ. ರಾಧಾದೇವಿಯು ಸುಖರೂಪವಾಗಿ ಪ್ರಸೂತಳಾಗುವ ಚಿಹ್ನವಿದೆ."

ಅಡವೀರಾಯನಿಗೆ ಈ ಮಾತುಗಳು ಶಲ್ಯಪ್ರಹಾರದಂತೆ ವೇದನೆಯನ್ನುಂಟು ಮಾಡಿದವು. ಸಂತಾನಲಾಭವಾಗುವದೆಂಬ ದುಃಖದ ವಾರ್ತೆಯು ಅವನನ್ನು ಕ್ಲೇಶಕ್ಕೀಡು ಮಾಡಿತು. ಸಿಸ್ಟರ ಗುಲಾಬಿಯು ಒಳಗೆ ಹೋಗಿ ಕೆಲವು ವೇಳೆಯ ಮೇಲೆ ತಿರುಗಿ ಬಂದು, ರಾಧಾದೇವಿಯು ಪುತ್ರರತ್ನವನ್ನು ಪ್ರಸೂತಳಾದಳೆಂದು ತಿಳಿಸಿದಳು. ಈ ಸಂಗತಿಯನ್ನು ಕೇಳಿ ಅಡವೀರಾಯನು ಸತ್ತಂತಾದನು!

——

## ವಿದ್ಯಾಮಂದಿರವಲ್ಲ, ವಿಲಾಸಮಂದಿರ!

.............

ವಿಜಯನಗರದ ಹೆಣ್ಣು ಹುಡಿಗೆಯರ ಒಂದನೇನಂಬರ ಶಾಲೆಯ ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳಾದ ರಾಧಾದೇವಿಯು ರುಗ್ಣಾಲಯವನ್ನು ಪ್ರವೇಶಿಸಿದ ಮೇಲೆ ಆ ಶಾಲೆಯ ಮುಖ್ಯಾಧ್ಯಾಪಕಳ ಪದವಿಯು ಸೌಭಾಗ್ಯವತಿ ವನಿತೆಗೆ ಪ್ರಾಪ್ತವಾಗಿತ್ತು. ದೇವರ ಅನುಗ್ರಹದಿಂದ ಅಭ್ಯುದಯಕಾಲವೊದಗಿತೆಂದು ಅವಳು ಆನಂದಸಾಗರದಲ್ಲಿ ಲೋಲಾಡಹತ್ತಿದಳು. ಸಂಜೆಯವರೆಗೆ ಆ ಆನಂದಕ್ಕೆಭರತಿಯೇ ಇತ್ತು. ಸಂಧ್ಯಾಕಾಲದ ಆರುಗಂಟೆಗೆ ಆ ಆನಂದಸಾಗರಕ್ಕೆ ಒಮ್ಮೆಲೆ ಇಳಿತವು ಪ್ರಾರಂಭವಾಯಿತು; ಯಾಕಂದರೆ, ಹೆಡ್ ಮಿಸ್ಟ್ರೆಸ್ಸಳ ಸ್ಥಳದ ಮೇಲೆ ಉಷೆಯನ್ನು ನಿಯಮಿಸಿರುವೆವೆಂದು ಕೃಷ್ಣರಾಯರು ಅವಳ ಕಡೆಗೆ ಆಗಲೆ ಆಜ್ಞಾಪತ್ರ ಕಳುಹಿಸಿದರು. ವರಿಷ್ಠರ ಆಜ್ಞೆ. ಅದರಂತೆ ನಡೆಯದಿದ್ದರೆ ನಿರ್ವಾಹವಿದ್ದಿಲ್ಲ. ಕಂಡ ಸುಖವು ಕನಸಾಯಿತೆಂದು ವನಿತೆಯು ಮರುಗಿದಳು. ಆಗ ಅವಳು ತನ್ನ ಶಾಲೆಯೊಳಗಿನ ಇನ್ನೊಬ್ಬ ಶಿಕ್ಷಕಿ

ಯಾದ ಕುಮಾರೀ ಕುಸುಮಾವತಿಯು ಮನೆಗೆ ಹೋಗಿ ಸಾಹೇಬರ ಆಜ್ಞಾಪತ್ರತೋರಿಸಿದಳು. ಕುಸುಮಾವತಿಗೆ ಈ ಘಟನೆಯಿಂದ ಆನಂದವಾಗಲಿಲ್ಲ. ಯಾಕಂದರೆ, ತನಗಿಂತ ಕಡಿಮೆ ಶಿಕ್ಷಣ ಹೊಂದಿದ ವನಿತೆಯು ಮುಖ್ಯ ಶಿಕ್ಷಕಿಯಾದದ್ದು ಅವಳಿಗೆ ಅಸಮಾಧಾನವನ್ನುಂಟು ಮಾಡಿತ್ತು.

ರಾಧಾದೇವಿಯ ತರುವಾಯ ಮುಖ್ಯ ಸ್ಕೂಲ ಮಿಸ್ಟ್ರೆಸ್ಸಿನ ಪದವಿಯು ಕುಸುಮಾವತಿಗೇದೊರೆಯಬೇಕಾಗಿತ್ತು; ಆದರೆಅವಳುರಾಧಾದೇವಿಯಅನುಗ್ರಹಕ್ಕೆಪಾತ್ರಳಾದವಳಿದ್ದಿಲ್ಲ. ಅಂತೆಯೇಕೃಷ್ಣರಾಯರು ಅವಳಿಗೆ ಆಪದವಿಯನ್ನು ಕೊಡದೆ, ವನಿತೆಗೆ ಕೊಟ್ಟಿದ್ದರು; ಆದರೆ ಅಂದೇ ವನಿತೆಯಂತಹರನ್ನು ನಿವಾಳಿಸಿ ಚಲ್ಲುವ ಉಷೆಯ ಭೆಟ್ಟಿಯಾದ್ದರಿಂದ, ವನಿತೆಯ ಅಧಿಕಾರವೂ, ಪದವಿಯೂ ನೀರ ಮೇಲಿನ ಗುರುಳಿಯಂತೆ ಕ್ಷಣಭಂಗುರವಾಯಿತು.

ಕುಸುಮಾವತಿಯ ಜೀವನ ಚರಿತ್ರವು ವಿಚಿತ್ರವಾಗಿತ್ತು. ಇವಳು ಸರಕಾರೀ ರುಗ್ಣಾಲಯದಲ್ಲಿ ನರ್ಸಳಾಗಿದ್ದ ಸಿಸ್ಟರ ಗುಲಾಬಿಯ ತಂಗಿಯು. ಈ ಅಕ್ಕ-ತಂಗಿಯರಿಬ್ಬರೂ ಕುಮಾರಿಯರಾಗಿದ್ದರು. ಕುಮಾರಿ ಕುಸುಮಾವತಿಯು ವಿಜಯನಗರ ಸಂಸ್ಥಾನದ ಪ್ರಜೆಯಾಗಿದ್ದಿಲ್ಲ. ಅವಳು ಒಂದು ವರ್ಷದ ಟ್ರೇನಿಂಗ ಹೊಂದಿದ್ದು, ಎರಡನೇ ವರ್ಷವೇ ಅರ್ಧಶಿಕ್ಷಣಹೊಂದಿ ಕಾಲೇಜದಿಂದ ತಳ್ಳಲ್ಪಟ್ಟಿದ್ದಳು ಕಾಲೇಜನ್ನು ಪ್ರವೇಶಿಸಿದ ವರ್ಷವೇ ಅವಳು ಅಲ್ಲಿಯ ಒಬ್ಬ ಶಿಕ್ಷಕನ ನೌಕರಿಗೆ ಕೇರು ಹಾಕಿದಳು. ಕುಸುಮಾವತಿಯು ಪುರುಷರನ್ನು ಪ್ರಾಣಕ್ಕಿಂತ ಹೆಚ್ಚು ಪ್ರೀತಿಸುತ್ತಿದ್ದರೂ, ಅವರ ಸ್ವಾಧೀನತೆ ಹೊಂದಲಿಕ್ಕೆ ಮನಸ್ಸಿಲ್ಲದವಳಾಗಿದ್ದಳು. ವಿವಾಹಬಂಧನೆಯು ದಾಸ್ಯವೆಂದು ಅವಳ ತಿಳುವಳಿಕೆಯಿದ್ದುದರಿಂದ, ತನ್ನ ಆಯುಷ್ಯವನ್ನು ಕೌಮಾರ್ಯದಲ್ಲೇ ಕಳೆಯಬೇಕೆಂದು ದೃಢಸಂಕಲ್ಪ ಮಾಡಿದ್ದಳು. ಅವಳು ಕಾಲೇಜದಲ್ಲಿದ್ದಾಗ ಅಲ್ಲಿ ಬಹಳೇ ಕೋಲಾಹಲವನ್ನೆಬ್ಬಿಸಿದ್ದಳು. ಒಬ್ಬ ವಿದ್ಯಾರ್ಥಿಯು ಕದ್ದು ಚುಂಬನವನ್ನು ತೆಗೆದುಕೊಂಡನೆಂಬ ಫಿರ್ಯಾದಿ ಮಾಡಿ, ಅವನನ್ನು ಕಾಲೇಜದಿಂದ ತಳ್ಳಿಸಿ ದಂಡ ಮಾಡಿಸಿದ್ದಳು. ಅನಂತರದಲ್ಲಿ ಅವಳು ಒಬ್ಬ ಮುಸಲ್ಮಾನ ವಿದ್ಯಾರ್ಥಿಯ ಪ್ರೇಮಪಾಶದಲ್ಲಿ ಸಿಲುಕಿದುದು ಕಾಲೇಜದ ಪ್ರಿನ್ಸಿಪಾಲರದೃಷ್ಟಿಗೆ ಬಿದ್ದಿತು. ಅದಕ್ಕಾಗಿಮುಸಲ್ಮಾನ ವಿದ್ಯಾರ್ಥಿಯೂ ಕುಮಾರೀ ಕುಸುಮಾವತಿಯೂ ಕಾಲೇಜದಿಂದ ತಳ್ಳಲ್ಪಟ್ಟರು. ತರುವಾಯ ಅವಳು ದೊಡ್ಡ ದೊಡ್ಡ ಜನರ ಮಧ್ಯಸ್ಥಿಕೆಯಿಂದ ಹೊರಗೆ ಅಭ್ಯಾಸ ಮಾಡಿ ಪರೀಕ್ಷೆಗೆ ಕುಳಿತುಕೊಳ್ಳುವದಕ್ಕಾಗಿ ಆಜ್ಞಾಪತ್ರ ಪಡೆದಳು. ಕಾಲೇಜದ ಸರ್ಟಿಫಿಕೇಟಗಾಗಿ ಐದು ಬಾರಿಗಳನ್ನು ಮಾಡಿ

ಆಯುಶಸ್ವಿಯಾಗಿದ್ದಳು. ಅಷ್ಟರಲ್ಲಿ ಅವಳು ಸ್ತ್ರೀಜನ್ಮಸುಲಭ ಪಾಪವಿಮೋಚನೆಗಾಗಿ ಪಂಢರಪುರದ್ದೊಂದು ವಾರಿಯನ್ನಾದರೂ ಮಾಡಿರುವಳೆಂದು ಜನವಾರ್ತೆಯಿತ್ತು. ಹೀಗಿದ್ದರೂ ಅವಳು ಲೌಕಿಕ ದೃಷ್ಟಿಯಿಂದ ಇನ್ನೂ ಕುಮಾರಿಕೆಯಾಗಿಯೇ ಇದ್ದಳು! ವಿಜಯನಗರ ಶಿಕ್ಷಣಸಂಸ್ಥೆಯು ತನ್ನಂತಹ ಸ್ವಚ್ಛಂದವೃತ್ತಿಯ ತರುಣಿಯ ಪ್ರವೇಶಕ್ಕೆ ಸುಲಭಸಾಧ್ಯವಿರುವದನ್ನು ಅವಳು ಮನಗಂಡಿದ್ದಳು. ಅವಳ ನಂಬಿಕೆಯಂತೆ ಕೆಲಸವೂ ನೆರವೇರಿತು. ಅವಳು ಸ್ಕೂಲಮಿಸ್ಟ್ರೆಸ್ ರಾಧಾದೇವಿಯ ಕೈಕೆಳಗಿನ ಉಪಶಿಕ್ಷಕಿಯಾದಳು.

ಕುಮಾರೀ ಕುಸುಮಾವತಿಯು ಅಷ್ಟೊಂದು ಚಲುವೆಯಾಗಿರದಿದ್ದರೂ ಒನಪಿನ ಒಯ್ಯಾರೆಯಾಗಿದ್ದಳು. ಅವಳು ರಾಧಾದೇವಿಯಂತೆ ವೃದ್ಧಕೃಷ್ಣರಾಯರನ್ನು ಮನಸಾ ಬಿಗಿದಪ್ಪಲಿಕ್ಕೆ ಸಿದ್ಧಳಿದ್ದಿಲ್ಲ. ಅಂತೆಯೆ ರಾಧಾದೇವಿಯು ರುಗ್ಣಾಲಯವನ್ನು ಸೇರಿದ ಕೂಡಲೆ ಹೆಡ್‌ಮಿಸ್ಟ್ರೆಸ್ ಪದವಿಯು ಸೌಭಾಗ್ಯವತಿ ವನಿತೆಗೆ ದೊರೆಯಿತು. ವನಿತೆಯು ಅಧಿಕಾರೈಶ್ವರ್ಯಸಂಪನ್ನರಾದ ವೃದ್ಧ ಪುರುಷರನ್ನು ತಿರಸ್ಕರಿಸುವಷ್ಟು ಬುದ್ಧಿಶೂನ್ಯಳಿದ್ದಿಲ್ಲ. ಬಹು ಕಾಲದ ಸೌಖ್ಯಕ್ಕಾಗಿ ಸೊಟ್ಟ ಹೆಜ್ಜೆಯಿಟ್ಟರೆ, ತಪ್ಪಲ್ಲೆಂದು ಅವಳು ಅನ್ನುತ್ತಿದ್ದಳು. ರೂಪದಿಂದ ಅವಳು ಕುಸುಮೆಗಿಂತ ಕಡಿಮೆ ತರಗತಿಯವಳಾಗಿದ್ದರೂ ತನ್ನ ಬುದ್ಧಿಬಲದಿಂದ ಮುಖ್ಯ ಸ್ಕೂಲ ಮಿಸ್ಟ್ರೆಸ್ಸಿನ ಪದವಿಯನ್ನು ಸಂಪಾದಿಸಿದ್ದಳು. ಆ ಪದವಿಯು ಅವಳ ದುರ್ದೈವದಿಂದ ಹನ್ನೆರಡುತಾಸು ಸಹ ಉಳಿಯಲಿಲ್ಲ. ಪದವಿಲಾಭದಿಂದ ಆನಂದ ಪಡುವಷ್ಟರಲ್ಲಿ, ಅದು ಹೊರಟು ಹೋಗಿ, ಅವಳನ್ನು ಕ್ಲೇಶಕ್ಕೀಡು ಮಾಡಿತು. ತನ್ನ ಸಹವ್ಯವಸಾಯಿಯಾದ ಕುಸುಮಾವತಿಯ ಮುಂದೆ ಎಲ್ಲವನ್ನೂ ತೋಡಿಕೊಂಡು ದುಃಖಭಾರವನ್ನು ಹಗುರು ಮಾಡಿಕೊಳ್ಳಬೇಕೆಂದು ಅವಳಮನೆಗೆ ಬಂದಳು. ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳಾಗಿ ಜಂಭ ಬಡಿಯುತ್ತಿದ್ದ ಸೌಭಾಗ್ಯವತಿಗೆ ಚನ್ನಾಗಿ ಪ್ರಾಯಶ್ಚಿತ್ತವಾಯಿತೆಂದು ಕುಮಾರಿಯು ಮನದಲ್ಲಿಯೇ ಕುಲುಕುಲು ನಗತೊಡಗಿದಳು; ಆದರೆ ಬಹಿರಂಗದಲ್ಲಿ ಆ ನಗೆಯನ್ನು ತೋರಿಸುವಂತಿದ್ದಿಲ್ಲವಾದ್ದರಿಂದ, ತುಟಿಯನ್ನು ಬಿಗಿ ಹಿಡಿದಳು.

ರಾಧಾದೇವಿಯ ಪ್ರಕರಣದ ದೊಡ್ಡ ಗೊಂದಲದಲ್ಲಿ ಸಿಲುಕಿಕೊಂಡ ಕೃಷ್ಣರಾಯರು ತಮ್ಮ ವಿಲಾಸೀ ವೃತ್ತಿಗೆ ಭಂಗತಂದುಕೊಳ್ಳದ್ದನ್ನು ನೋಡಿ ಸೌಭಾಗ್ಯವತಿಗೂ ಕುಮಾರಿಗೂ ವಿಸ್ಮಯವಾಯಿತು. ಆಗ ಕುಮಾರಿಯು—

ಸೌಭಾಗ್ಯವತಿವನಿತಾದೇವಿ, ನಮ್ಮ ಸಾಹೇಬರು ಮನ್ಮಥನ ಅವತಾರವೆಂದು ಹೇಳಲಿಕ್ಕೆ ಯಾವ ಪ್ರತ್ಯವಾಯವೂ ಇಲ್ಲ. ತಮ್ಮ ಪೂರ್ಣಕೃಪೆಗೆ ಪಾತ್ರಳಾದ

ರಾಧಾದೇವಿಯು ಮೃತ್ಯುಪಥವನ್ನು ಹಿಡಿದಿರಲು, ಇಂತಹ ಸಂಧಿಯಲ್ಲಿ ಸಹ ಹೊಸ ಹೊಸ ರೂಪವತಿಯರನ್ನು ಸಂಪಾದಿಸುವ ಕಡು ಸಾಹಸ ಮಾಡುವದನ್ನು ನೋಡಿದರೆ ವಿಸ್ಮಯವಾಗುವದು.'

'ರಾಧಾದೇವಿಯ ಜೀವಿತವು ಅಶಾಶ್ವತವೆಂದು ತೋರಿದ್ದರಿಂದಲೆ ಸಾಹೇಬರ ಹೊಸ ಪ್ರಯತ್ನ ನಡೆದಿದೆ. ನಾನು ರೂಪದಿಂದ ಕಿರಿಯಳು; ನೀವು ಅವರನ್ನು ಮನ್ನಿಸುವದಿಲ್ಲ. ರಾಧಾದೇವಿಯಂತುಇಂದೋ-ನಾಳೆಯೋ ಅನ್ನುತ್ತಿರುವಳು; ಆದ್ದರಿಂದ ಅವರು ಉಷೆಯೆಂಬ ಒಬ್ಬ ನವಯುವತಿಯನ್ನು ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳನ್ನಾಗಿ ನಿಯಮಿಸಿರುವರು. ನೀವೇನಾದರೂ ಆ ಉಷೆಯನ್ನು ಕಂಡಿರುವಿರಾ?' ಎಂದು ವನಿತೆಯು ನುಡಿದಳು.

'ಇಲ್ಲ ನಾನು ಅವಳನ್ನು ನೋಡಿಲ್ಲ. ಅವಳು ಯಾರೆಂಬದು ಸಹ ನನಗೆ ಗೊತ್ತಿಲ್ಲ.'

'ಜವುಳಕೇದಗಿ ಹಳ್ಳಿಯಲ್ಲಿ ಶಿಕ್ಷಕನಾಗಿದ್ದ ದಿದಾಕರರಾಯನ ಮಗಳು ಅವಳು. ರೂಪದಲ್ಲಿ ಹಿರಿಯಳಿರುವಳಂತೆ. ಸಾಹೇಬರ ಸಿಪಾಯಿಯು ನನಗೆ ಈ ಸಂಗತಿಯನ್ನು ಹೇಳಿದನು.'

'ಸೌಭಾಗ್ಯವತಿ, ಪದವಿ ಹೋಯಿತೆಂದು ಮಿಡುಕಬೇಡಿರಿ. ಯಾರು ಆ ವೃದ್ಧನೊಡನೆ ಲೀಲೆಯಾಡಬೇಕು? ಗಂಡನು ವಯಾತೀತನೂ ಕುರೂಪಿಯೂ ಇರುವನೆಂದು ಅವನನ್ನು ಧಿಃಕರಿಸಿದ ನೀವು, ಮುದುಕ ಸಾಹೇಬನ ಪ್ರೇಮಕ್ಕಾಗಿ ಎಷ್ಟು ಆತುರಗೊಂಡಿರುವಿರಿ?'

'ಸಾಹೇಬರು ನಿತ್ಯ ಸುಖವನ್ನು ಕೊಡುವ ವಿಧಾತರು ಅಂತೆಯೇ ಇಷ್ಟು ಸಾಹಸ. ಕುಮಾರಿ, ನಿಮ್ಮಂತೆ ಕಠೋರ ಹೃದಯಿಯಾಗುವದು ನನಗೆ ಸಾಧ್ಯವಿಲ್ಲ.'

'ಬೇಕಾದಂತಹ ಧನವಂತ ತರುಣರು ಹಿಡಿಕೆಯಲ್ಲಿರುವಾಗ ಈ ವೃದ್ಧಗೃದ್ರ ಸಾಹೇಬರನ್ನು ಯಾರು ಕೇಳಬೇಕು? ನಾನು ಸ್ವಾತಂತ್ರ್ಯವನ್ನು ಬಯಸುವವಳು. ಯಾರ ಆಧೀನದಲ್ಲಿಯೂ ಇರಲಿಕ್ಕೆ ನನ್ನ ಮನಸ್ಸಿಲ್ಲ. ಅಂತೆಯೆ ಕುಮಾರಿಯಾಗಿರುವೆನು. ಸಾಯುವ ವರೆಗೆ ನಾನು ಇದೇ ವಿಧದ ಕೌಮಾರ್ಯವ್ರತವನ್ನೇ ಪಾಲಿಸಬೇಕೆಂದು ಸತ್ಯ ಸಂಕಲ್ಪಮಾಡಿಕೊಂಡಿದ್ದೇನೆ. ಸಾಹೇಬರು ವೇತನ ಕೊಡುವರೆಂದು ಆಲಿಂಗನ-ಚುಂಬನಾದಿಗಳ ಮೇಲುಪಚಾರಗಳಿಂದ ಅವರನ್ನು ಸಂತೋಷ ಪಡಿಸುತ್ತಿರುತ್ತೇನೆ. ಇದಕ್ಕೂ ಹೆಚ್ಚಿನ ಲಾಭವಾಗಲಿಲ್ಲೆಂಬ ಸಿಟ್ಟಿನಿಂದಲೇ ಅವರು ನನ್ನನ್ನು ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳನ್ನಾಗಿ ನಿಯಮಿಸಲಿಲ್ಲ.'

'ನಾನು ಎಷ್ಟು ಆತ್ಮತ್ಯಾಗ ಮಾಡಿದರೂ, ಹೇಗೆ ಲಾಭವಾಯಿತು ನೋಡಿರಿ! ಬರಿಯ ಹನ್ನೆರಡು ತಾಸಿನ ಮುಖ್ಯ ಸ್ಕೂಲ ಮಿಸ್ಟ್ರೆಸ್ಸ ಎಂಬ ಪದವಿಯು ದೂರೆತಂತಾಯಿತು.'

'ಸೌಭಾಗ್ಯವತಿ ನೀವು ವ್ಯಸನಾಧೀನರಾಗಬೇಡಿರಿ. ಆ ಮುದಿಹದ್ದಿನ ಉಪದ್ರವವು ದೂರವಾಯಿತು ನಮ್ಮ ಪೀಡೆಯು ಹೊಸ ಸ್ಕೂಲ ಮಿಸ್ಟ್ರೆಸ್ ಅಧಿಕಾರ ಹೊಂದಿದ ಉಷೆಗೆ ತಟ್ಟುತ್ತಿದ್ದರೆ, ಅದಕ್ಕೆ ನಾವೇಕೆ ಶೋಕಿಸಬೇಕು?'

ಕುಮಾರಿ ಕುಸುಮಾವತಿಯ ಮಾತುಗಳಿಂದಸೌಭಾಗ್ಯವತಿವನಿತೆಯ ಮನಸ್ಸು ಸಮಾಧಾನಗೊಂಡಿತೋ-ಇಲ್ಲವೋ' ಅವಳಿಗೇ ಗೊತ್ತು. ಅವಳು ಮರುಮಾತಾಡದೆ, ಕುಸುಮಾವತಿಯ ಅನುಜ್ಞೆಯನ್ನು ಪಡೆದು ಮನೆಗೆ ಹೋದಳು; ಆದರೆ ಅಂದು ಅವಳಿಗೆ ಊಟ ರುಚಿಸಲಿಲ್ಲ; ಬೆಳತನಕ ನಿದ್ದೆ ಹತ್ತಲಿಲ್ಲ. ಮಾರನೇ ದಿನ ಏಳುಗಂಟೆಗೆ ಸರಿಯಾಗಿ ಶಾಲೆಗೆ ಹೋದಳು. ಅಷ್ಟರಲ್ಲಿ ಹೊಸ ಸ್ಕೂಲ ಮಿಸ್ಟ್ರೆಸ್ಸಳಾದ ಉಷೆಯು ಶಾಲೆಗೆ ಬಂದುಬಿಟ್ಟಿದ್ದಳು ಮುಂದೆ ಸ್ವಲ್ಪ ವೇಳೆಯಲ್ಲಿ ಕುಸುಮಾವತಿಯೂ, ಮಿಕ್ಕ ಸ್ಕೂಲ ಮಿಸ್ಟ್ರೆಸ್ಸರೂ ಬಂದರು. ಸೌಭಾಗ್ಯವತಿಯು ಎಲ್ಲ ಜನರಿಗೆ ಸಾಹೇಬರ ಆಜ್ಞಾಪತ್ರ ತೋರಿಸಿ, ಉಷೆಯು ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳಾಗಿ ನಿಯಮಿಸಲ್ಪಟ್ಟ ಸಂಗತಿಯನ್ನು ಹೇಳಿದಳು. ಅಷ್ಟರಲ್ಲಿ ಕೃಷ್ಣರಾಯರ ಸಿಪಾಯಿಯು ಅಲ್ಲಿಗೆ ಬಂದು, ಮುಖ್ಯ ಸ್ಕೂಲ ಮಿಸ್ಟ್ರೆಸ್ ಉಷಾದೇವಿಯ ಕೈಯಲ್ಲಿ ಆಜ್ಞಾಪತ್ರ ವಿತ್ತು ಹೊರಟು ಹೋದನು. 'ಎಂಟು ಗಂಟೆಗೆ ನಿಮ್ಮಶಾಲೆಯ ನಿರೀಕ್ಷಣೆಗೆ ಬರುವೆವು' ಎಂದು ಅದರಲ್ಲಿ ಬರೆಯಲ್ಪಟ್ಟಿತ್ತು. ಉಷೆಯುಗಾಬರಿಯಾದಳು. ಆಗ ಅವಳು ವನಿತೆಯನ್ನು ಕುರಿತು–'ನಾನು ಹೊಸಬಳು. ಇಂದೇ ಶಾಲೆಯಲ್ಲಿ ಹೆಜ್ಜೆಯಿಟ್ಟವಳಾದ ನನಗೆ ನಿರೀಕ್ಷಣೆ-ಪರೀಕ್ಷಣೆಗಳ ಸುದ್ದಿ ಸಹ ಗೊತ್ತಿಲ್ಲ. ಆದ್ದರಿಂದ ಭಯವೆನಿಸತೊಡಗಿದೆ.'

'ಅದಕ್ಕೇಕಿಷ್ಟು ಭಯಗೊಳ್ಳುವಿರಿ? ನಮ್ಮ ದೊಡ್ಡ ಸಾಹೇಬರು ದಯಾಳುಗಳು; ಯುವತೀಜನ ಪ್ರೇಮಿಗಳು. ಕೆಲವು ಶಿಕ್ಷಕ-ಶಿಕ್ಷಕಿಯರಿಗೆ ಅವರು ಯಮನಂತೆ ತೋರುತ್ತಿರಬಹುದು ಅದರ ತಪ್ಪು ಸಾಹೇಬರದಲ್ಲ. ಮೈಸೊಕ್ಕಿನ ಶಿಕ್ಷಕ-ಶಿಕ್ಷಕಿಯರು ಜಂಬದಲ್ಲಿ ಮೆರೆಯುತ್ತ, ಅವರ ಅಪ್ರೀತಿ ಸಂಪಾದನೆ ಮಾಡಿರುವರು. ನಮ್ಮ-ನಿಮ್ಮಂತಹರಿಗೆ ಸಾಹೇಬರು ಸದ್ಗುಣದ ಕಣಿಯೇ ಆಗಿರುವರು' ಎಂದು ವನಿತೆಯು ನುಡಿದಳು.

'ದೊಡ್ಡ ಸಾಹೇಬರಿಗೆ ನಾವು ಅಂಜುವ ಕಾರಣವಿಲ್ಲ. ಸಣ್ಣ ಸಾಹೇ

ಬರು ಮಾತ್ರ ಹುಲಿಯು ಮೋರೆಯನ್ನು ಕಟ್ಟಿಕೊಂಡೇ ಶಾಲೆಯನ್ನು ಪ್ರವೇಶಿಸುತ್ತಿರುವದರಿಂದ, ಅವರಿಗೆ ಅಂಜಬೇಕಾಗುತ್ತದೆ. ಅವರ ಕಾನೂನು ಕಟ್ಟಳೆಗಳೇ ವಿಪರೀತವಾದವುಗಳು. ನಮ್ಮ ಮೇಲೆ ದೊಡ್ಡ ಸಾಹೇಬರ ಕೃಪಾಛತ್ರವಿರುವದರಿಂದ ಸಣ್ಣ ಸಾಹೇಬರ ಆಟವು ಇಲ್ಲಿ ನಡೆಯುವದಿಲ್ಲ; ಆದರೆ ಕೆಲವು ಶಾಲೆಗಳಲ್ಲಿ ಅವರು ಶಿಕ್ಷಕರ ಜೀವತಿನ್ನುತ್ತಾರೆಂದು ಕೇಳಿದ್ದೇನೆ,' ಎಂದು ಕುಮಾರಿ ಕುಸುಮಾವತಿಯು ಹೇಳಿದಳು.

'ಅವರು ಶಿಕ್ಷಕ ಜನರಿಗೆ ಯಾವ ವಿಧದ ತೊಂದರೆಯೊಯುವರು?' ಎಂದು ಉಷಾದೇವಿಯು ಕುಸುಮಾವತಿಯನ್ನು ಕೇಳಿದಳು.

'ಶಿಕ್ಷಕ-ಶಿಕ್ಷಕಿಯರು ಶಾಲೆಗೆ ಹೋಗಲಿಕ್ಕೆ ಐದು ನಿಮಿಷ ತಡವಾದರೆ ಅವರು ಸಹಿಸುವದಿಲ್ಲ. ವೇಳಾಪತ್ರಿಕೆಯಂತೆ ಕೆಲಸ ನಡೆಯಿಸಲಿಕ್ಕೇಬೇಕು. ಗಣಿತವಿಷಯವಿದ್ದಾಗ ಭಾಷಾವಿಷಯ ಕಲಿಸಹತ್ತಿದ ಒಬ್ಬ ಶಿಕ್ಷಕನಿಗೆ ಅವರು ದಂಡ ಮಾಡಿದರು' ಎಂದು ಕುಸುಮಾವತಿಯು ನುಡಿದು:-'ದೊಡ್ಡ ಸಾಹೇಬರೇನು ಎಲ್ಲರ ವಿಷಯವಾಗಿ ದಯೆಯುಳ್ಳವರಾಗಿಲ್ಲ. ಅವರ ಛತ್ರದೊಳಗಿನ ಜನರು ಸ್ವಾತಂತ್ರ್ಯಗಿರಿಯನ್ನೇರಿರುವರು; ಆದರೆ ಒಂದಿಲ್ಲೊಂದು ಬಗೆಯಿಂದ ಅವರ ಕ್ಷೋಭೆಗೀಡಾದ ಜನರು ಅನೇಕ ವಿಧದ ಸಂಕಟಗಳಿಗೀಡಾಗಿರುವರು. ಸಣ್ಣ ಸಾಹೇಬರಲ್ಲಿ ಸಮದೃಷ್ಟಿಯುಂಟು; ಆದರೆ ದೊಡ್ಡ ಸಾಹೇಬರ ದೃಷ್ಟಿಯು ವೈಷಮ್ಯದ್ದಿರುವದು. ಅವರ ಈ ವೈಷಮ್ಯದೃಷ್ಟಿಯ ಮೂಲಕ ಎಷ್ಟೋ ಶಿಕ್ಷಕ-ಶಿಕ್ಷಕಿಯರು ಮನೆಯಲ್ಲಿ ಮಲಗಿ ವೇತನ ತೆಗೆದುಕೊಳ್ಳುತ್ತಿರುವರು; ಎಷ್ಟೋ ಶಿಕ್ಷಕ-ಶಿಕ್ಷಕಿಯರು ವ್ಯಾಹತಿಯಿಲ್ಲದೆ ದುಡಿದು ದಂಡನೆ ಹೊಂದಿರುವರು. ಅಗ್ಗಾರಹೊನ್ನೀಹಳ್ಳಿ, ಜವುಳಕೇದಗೀಹಳ್ಳಿ ಮೊದಲಾದ ಕೆಲವು ಊರುಗಳು ವಿಜಯನಗರ ಸಂಸ್ಥಾನದ ಅಂದಮಾನಗಳಾಗಿವೆ ಹೊನ್ನೀಹಳ್ಳಿ, ಕೇದಗಿಹಳ್ಳಿಗಳಲ್ಲಿ ಐದಾರು ವಿದ್ಯಾರ್ಥಿಗಳಿರುತ್ತಿದ್ದರೂ ಅಲ್ಲಿಯ ಜನರು ಶಾಲೆಯ ಅವಶ್ಯಕತೆ ಇಲ್ಲವೆಂದು ಹೇಳುತ್ತಿದ್ದರೂ ಆ ಶಾಲೆಗಳು ಸ್ಥಿರವಾಗಿಯೇ ಉಳಿದಿವೆ. ಇದಕ್ಕೆ ಕಾರಣವೇನಂದರೆ, ಹವೆ-ನೀರುಗಳ ಬಗ್ಗೆ ಆ ಗ್ರಾಮುಗಳು ಹೆಸರಾಗಿರುವದರಿಂದ, ಅಂಥಲ್ಲಿ ವರಿಷ್ಠರ ಕ್ಷೋಭೆಗೀಡಾದ ಜನರನ್ನು ಕಳಿಸಿ, ಶಾಸನ ವಿಧಿಸಲಿಕ್ಕೆ ಆ ಗ್ರಾಮುಗಳು ತಕ್ಕವುಗಳಾಗಿವೆ. ಈ ಉಷಾದೇವಿಯವರ ತಂದೆಯವರಾದ ದಿವಾಕರರಾಯರು ಜವುಳಕೇದಗಿಹಳ್ಳಿಯನ್ನು ಕಾಣಲಿಕ್ಕೆ ಇದೇ ಕಾರಣವೆಂದು ನಿನ್ನೆ ಒಬ್ಬರು ಹೇಳಿದರು. ಶಿಕ್ಷಕನು ಅಲ್ಲಿಗೆ ಹೋದನೆಂದರೆ, ಜೀವವುಳಿಸಿಕೊಂಡು ಬರುವದೇ ಕಠಿಣವಾಗುವದು.'

ಕುಸುಮಾವತಿಯು ಹೀಗೆ ನುಡಿಯುವಷ್ಟರಲ್ಲಿ ಸಾಹೇಬರ ಮೋಟರ ಬಂಡಿಯು ಶಾಲೆಯ ತಲೆಬಾಗಿಲ ಹತ್ತರ ಬಂದು ನಿಂತುಕೊಂಡಿತು. ಕೂಡಲೆ ಶಾಲೆಯೊಳಗಿನ ಎಲ್ಲ ಶಿಕ್ಷಕಿಯರು ಅವರನ್ನು ನಮಸ್ಕರಿಸಿ, ಸ್ವಾಗತ ಪೂರ್ವಕವಾಗಿ ಕರೆತಂದರು.

ಸಾಹೇಬರು ಶಾಲೆಯನ್ನು ಪ್ರವೇಶಿಸಿದ ಕೂಡಲೆ ಸ್ತುತಿಪದವು ಪ್ರಾರಂಭವಾಯಿತು.

'ಧನ್ಯ ಧನ್ಯ ಪ್ರಮುದೆ ಮಾನ್ಯ ಕೃಷ್ಣ ಪ್ರಭುವರಾ |
ಅಜ್ಞಬಾಲೆಯರನು ನೀನು ಸುಜ್ಞರನ್ನು ಮಾಳ್ಪಿಯೋ |
ಮಂಗಲಾಂಗಿಯರನು ನೋಡಿ ಕೃಪೆಯ ನೀಡಿ ಕಾವೆಯೊ|| '

ಶ್ರುತಿಮನೋಹರವಾದ ಕಂಠದವರೆಂದು ಆರಿಸಲ್ಪಟ್ಟ ಹುಡುಗೆಯರಿಂದ ಸ್ವಾಗತಪದವು ಹೇಳಲ್ಪಟ್ಟ ಕೂಡಲೆ, ಸಾಹೇಬರು ತಣ್ಣಗಾದರು. ಅನಂತರದಲ್ಲಿ ಅವರು ಉಷೆಯನ್ನು ಕುರಿತು—'ಉಷಾದೇವಿ, ನಿಮ್ಮ ಮನಸ್ಸು ಸಮಾಧಾನಗೊಂಡಿದೆಯಲ್ಲವೆ? ದೊಡ್ಡ ಶಾಲೆಯೂ, ದೊಡ್ಡ ಸ್ಕೂಲ ಮಿಸ್ಟ್ರೆಸ್ ಸ್ಥಳಗಳೂ ತುಸ ತಪಶ್ಚರ್ಯದಿಂದ ದೊರೆಯತಕ್ಕವುಗಳಲ್ಲ' ಎಂದು ನುಡಿದು, ವಧು ಪರೀಕ್ಷೆಯಲ್ಲಿ ವರನು ಕನ್ಯೆಯನ್ನು ನಿರೀಕ್ಷಿಸುತ್ತಿರುವಂತೆ ನೋಡುತ್ತ ಕುಳಿತರು.

'ತಮ್ಮ ಅನುಗ್ರಹ ವಿಶೇಷದಿಂದ ಒಡವೆಗೆ ಭಾಗ್ಯ ದೊರೆಯಿತು' ಎಂದು ಉಷೆಯು ಮನಃಪೂರ್ವಕವಾಗಿ ನುಡಿದಳು.

ಅನಂತರದಲ್ಲಿ ಅನುಭವಿಕಳಾದ ವನಿತೆಯು ಸಾಹೇಬರನ್ನು ಕುರಿತು-'ಶಾಲೆಗೆ ಇಂದು ಸೂಟಿ ಕೊಡಬೇಕೇನು?' ಎಂದು ಪ್ರಶ್ನೆ ಮಾಡಲು,

'ಓಹೋ! ಅವಶ್ಯ ಕೊಡಿರಿ. ಹುಡಿಗೆಯರಿಗೆ ಹೇಳಿರಿ, 'ನಿಮ್ಮ ಶಾಲೆಯ ಇನ್ಸ್ಪೆಕ್ಶನ್ ಮುಗಿಯಿತು. ಇಂದು ಸೂಟಿಯಿದೆ' ಎಂದು ಚನ್ನಾಗಿ ಹೇಳಿ ಕಳಿಸಿರಿ.'

ಸಾಹೇಬರ ಆಜ್ಞೆಯಂತೆ ಹುಡುಗೆಯರು ಮನೆಗೆ ಕಳಿಸಲ್ಪಟ್ಟರು. 'ಸಾಹೇಬರು ಮಹಾ ದಯಾವಂತರು. ದೇವರು ಅವರನ್ನು ದೊಡ್ಡವರನ್ನು ಮಾಡಲಿ. ದಿನಾಲು ನಮ್ಮ ಶಾಲೆಗೆ ಬರುವಂತೆ ದೇವರು ಅವರಿಗೆ ಬುದ್ಧಿ ಕೊಡಲಿ'ಎಂದು ಹುಡುಗೆಯರು ಮಾತಾಡುತ್ತ ಆನಂದದಿಂದ ತಮ್ಮ ತಮ್ಮ ಮನೆಗೆ ಹೋದರು. ಅವರೊಡನೆ ಸಾಹೇಬರ ಪೂರ್ಣಾನುಗ್ರಹ ಪಡೆಯದ ಶಿಕ್ಷಕಿಯರೂ ಹೊರಟು ಹೋದರು. ಶಾಲೆಯಲ್ಲಿ ಸಾಹೇಬರು-ಉಷೆ-ವನಿತೆ-ಕುಸುಮಾವತಿ ಇಷ್ಟೇ ಜನರು ಉಳಿದರು.

'ಇಂದೇ ಮೊದಲನೇ ದಿನವಿದ್ದುದರಿಂದ ನಿಮಗೆ ಹಿಡಿದು ಬಿಟ್ಟಂತಾ ಗುತ್ತಿರಬಹುದು' ಎಂದು ಸಾಹೇಬರು ಉಷೆಯನ್ನು ಕೇಳಿದರು.

'ಹೌದು.'

'ನಿಮಗೆ ಧೈರ್ಯ ಕೊಡುವದಕ್ಕಾಗಿ ಎಷ್ಟು ಕೆಲಸಗಳಿದ್ದರೂ ಬಿಟ್ಟು ಇಲ್ಲಿಗೆ ಬಂದೆನು. ಇನ್ನೊಂದು ದಿನಬಿಟ್ಟು ಬರಬೇಕೆಂದು ನನ್ನ ಮನಸ್ಸಿನ ಲ್ಲಿತ್ತು. ಆದರಂತೆ ನಾನು ನಿಮ್ಮೆದುರಿಗೂ ಆಡಿದ್ದೆನು; ಆದರೆ ಹೊಸಬರಾದ ನಿಮಗೆ ಧೈರ್ಯ ಕೊಡುವದಕ್ಕಾಗಿಯೂ. ಕೆಲಸದ ಗೊತ್ತುವಳಿ ಮಾಡಿ ಕೊಡುವ ಬಗ್ಗೆ ಸೌಭಾಗ್ಯವತಿವನಿತೆ-ಕುಮಾರೀ ಕುಸುಮಾವತಿ ದೇವಿಯ ವರಿಗೆ ಸೂಚಿಸುವದಕ್ಕಾಗಿಯೂ ಬಂದೆನು' ಎಂದು ಸಾಹೇಬರು ಉಷೆಯ ನ್ನು ಕುರಿತು ನುಡಿದು, ಕುಮಾರಿ–ಸೌಭಾಗ್ಯವತಿಯರನ್ನು ಕುರಿತು–'ನೀವು ಇವರಿಗೆ ಎಲ್ಲ ಕೆಲಸಗಳ ಗೊತ್ತುವಳಿ ಮಾಡಿಕೊಡಿರಿ.'

'ಅದನ್ನು ನೀವು ಹೇಳಬೇಕಾದುದಿಲ್ಲ. ನಿಮ್ಮ ಇಚ್ಛೆಯ ಮೇರೆಗೆ ಉಷಾದೇವಿಯವರಿಗೆ ಎಲ್ಲಬಗೆಯ ಗೊತ್ತುವಳಿಕೊಟ್ಟು, ಇವರನ್ನು ಚನ್ನಾಗಿ ಸಿದ್ಧಪಡಿಸುವೆವು.'

ಅನಂತರದಲ್ಲಿ ವನಿತೆಯು ಒಂದು ಕೋಣೆಯ ಬೀಗ ತೆಗೆದು ಒಳಗೆ ಹೋದಳು. ಹಿಂದೆ ಕುಸುಮಾವತಿಯೂ ಹೋದಳು. ಕೆಲವು ವೇಳೆಯ ಮೇಲೆ ಅವರಿಬ್ಬರೂ ಹೊರಗೆ ಬಂದು—'ಒಳಗೆ ಹೋಗಬೇಕು' ಎಂದು ಹೇಳಿದರು.

ಸಾಹೇಬರು ಎದ್ದು ಒಳಗೆ ಹೋದರು. ಅನಂತರದಲ್ಲಿ ವನಿತೆಯು ಉಷೆಯನ್ನು ಕುರಿತು–'ಸಾಹೇಬರಿಗೆ ಕಾಫಿ-ಉಪಾಹಾರಗಳನ್ನು ಕೊಡಿರಿ.'

'ಕಾಫಿ-ಉಪಾಹಾರಗಳೆಲ್ಲಿ?' ಉಷೆಯು ವಿಸ್ಮಯದಿಂದ ಕೇಳಿದಳು.

'ಒಳಗೆ ಸಿದ್ಧವಾಗಿವೆ.'

'ಶಾಲೆಯಲ್ಲಿ ಕಾಫಿ-ಉಪಾಹಾರಗಳೇಕೆ?"

'ಸಾಹೇಬರಿಗೆ ಉಳಿದ ಸಮಾರಂಭವಾಗದಿದ್ದರೂ ಕಾಫಿ-ಉಪಾಹಾರ ಗಳು ಬೇಡವೆ?'

'ನೀವೇ ಕೊಡಿರಿ.' ಉಷೆಯು ಒಬ್ಬಳೇ ಕೋಣೆಯನ್ನು ಪ್ರವೇಶಿಸ ಲಿಕ್ಕೆ ಅಂಜಿ ನುಡಿದಳು.

'ಛೇ! ಸಾಹೇಬರು ಏನಂದಾರು? ಅವರಿಗೆ ಕಾಫಿ-ಉಪಾಹಾರಗಳ ಮರ್ಯಾದೆ ಮಾಡುವ ಕೆಲಸವು ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳದು. ಈ ಕೆಲಸ ವನ್ನು ನೀವು ಅಭಿಮಾನದಿಂದ ಮಾಡತಕ್ಕದ್ದು.

'ನೀವೂ ನಡೆಯಿರಿ." ಅವರ ಮಾತು ನಿಜವೆಂದೇ ತಿಳಿದು, ಉಷೆಯು ನುಡಿದಳು.

'ಸಾಹೇಬರು ಉಪಾಹಾರ ತೀರಿಸಿಕೊಂಡು ಹೊರಗೆ ಬರಲಿ ಅಲ್ಲಿಯವರೆಗೆ ನಾವು ಇಲ್ಲಿಯೇ ಕುಳಿತಿರುತ್ತೇವೆ,' ಎಂದು ಕುಸುಮಾವತಿಯು ಹೇಳಿದಳು.



ಉಷೆಯು ಕುತ್ತಿಗೆಗೆ ಬಂತು. ನಿರುಪಾಯಳಾಗಿ ಕೋಣೆಯನ್ನು ಹೊಕ್ಕಳು. ಕೂಡಲೇ ಆವಳು ದಂಗು ಬಡೆದು, ಹುಚ್ಚು ಹಿಡಿದವರಂತೆ ನಿಂತು ಬಿಟ್ಟಳು. ಅಲ್ಲಿ ಆವಳ ಕಣ್ಣಿಗೆ ಏನು ಬಿತ್ತು? ನೆಲಕ್ಕೆ ರತ್ನಗಂಬಳಿಯು ಹಾಸಲ್ಪಟ್ಟಿತು; ಮೇಲೆ ಅಸಮಾನಗಿರಿಯು ಕಟ್ಟಲ್ಪಟ್ಟಿತ್ತು. ಮೇಲೆ ಚಿತ್ರ-ವಿಚಿತ್ರವರ್ಣದ ಗುಳಾಪುಗಳು ತೂಗಾಡುತ್ತಿದ್ದವು. ನೆಲದ ಮೇಲೆ ಒಂದು ಕಡೆಗೆ ಚಪ್ಪರಮಂಚವಿದ್ದು, ಮತ್ತೊಂದು ಕಡೆಗೆದುಂಡು ಚೌಕಿಯೂ ನಾಲ್ಕು ಕುರ್ಚಿಗಳೂ ಇಡಲ್ಪಟ್ಟಿದ್ದವು. ಗೋಡೆಗಳ ಮೇಲೆ ಚಿತ್ರ-ವಿಚಿತ್ರವಾದ ಚಿತ್ರ ಪಟಗಳಿದ್ದವು. ಒಂದು ಕಡೆಯಲ್ಲಿ ರಾಸಕ್ರೀಡೆ, ಗೋಪಿಕಾವಸ್ತ್ರಹರಣ, ರಾಧಾಕೃಷ್ಣವಿಲಾಸ, ರಂಗಪಂಚಮಿಯ ಉತ್ಸವ ಮೊದಲಾದ ಕೃಷ್ಣಲೀಲೆಯ ಚಿತ್ರಗಳಿದ್ದವು ಮತ್ತೊಂದು ಕಡೆಗೆ ಎದೆಪಟ್ಟಿಯನ್ನೂ ಕೌಪೀನವನ್ನೂ ಬಿಗಿದುಕೊಂಡು ಅರ್ಧನಗ್ನಾವಸ್ಥೆಯಲ್ಲಿ ತಾಂಡವನೃತ್ಯ ಮಾಡುವ ಪಾಶ್ಚಿಮಾತ್ಯ ಚಿತ್ರದೊಳಗಿನ ನಟಿಗಳ ಭಾವಚಿತ್ರಗಳಿದ್ದವು. ಮತ್ತೊಂದು

ಕಡೆಗೆ ಪಾಶ್ಚಿಮಾತ್ಯ ಯುವ-ಯುವತಿಯರು ತೆಕ್ಕೆ-ಮುಕ್ಕೆ ಬಿದ್ದು ನೃತ್ಯ ಮಾಡುವ ಭಾವಪಟಗಳಿದ್ದವು. ಇನ್ನೊಂದು ಕಡೆಗೆ ರಾಧಾದೇವಿ-ಕೃಷ್ಣ ರಾಯರ ಚಿತ್ರಗಳಿದ್ದವು. ಒಂದು ಪಟದಲ್ಲಿ ಇಬ್ಬರೂ ಮಂಚದ ಮೇಲೆ ಕುಳಿತಿದ್ದರೆ, ಮತ್ತೊಂದರಲ್ಲಿ ಕುರ್ಚಿಯ ಮೇಲೆ ಕುಳಿತಿದ್ದರು. ಇನ್ನೊಂದ ರಲ್ಲಿ ರಾಧಾದೇವಿಯು ಹಂಸತೂಲಿಕಾತಲ್ಪಶಾಯಿಯಾಗಿ ಕೃಷ್ಣರಾಯರು ಕಾಲ ಬಳಿಗೆ ಕುಳಿತಿದ್ದರೆ, ಮತ್ತೊಂದರಲ್ಲಿರಾಧಾದೇವಿಯುಶಯನಮಾಡಿದ ಕೃಷ್ಣರಾಯರ ಪಾದಸೇವೆಯಲ್ಲಿ ತೊಡಗಿದ್ದಳು. ಈ ಎಲ್ಲ ದೃಶ್ಯಗಳನ್ನು ನೋಡಿ ಉಷೆಯು ದಂಗುಬಡಿದಳು. ಆ ಕೋಣೆಯಲ್ಲಿ ಇಸ್ಪೇಟು, ಚದು ರಂಗ, ದಶಾವತಾರ, ಕೇರಮ್ ಮೊದಲಾದ ಆಟದ ಸಾಮುಗ್ರಿಗಳೂ ಎಣ್ಣೆಯ ಓಲೆ, ಪೇಲೆ, ಸೊಂಡಿಯ ಪಾತ್ರೆಗಳೂ ಸುವ್ಯವಸ್ಥಿತವಾಗಿ ಇಡಲ್ಪಟ್ಟಿ ದ್ದವು. ನೋಡುವವರಿಗೆ ಅದೊಂದು ಒಬ್ಬ ವಿಲಾಸಿನಿಯಾದ ವಾರಾಂಗನೆಯ ವಿಲಾಸ ಮಂದಿರನೆಂಬಂತೆ ಭಾಸವಾಗುತ್ತಿತ್ತು. ಈ ಎಲ್ಲ ದೃಶ್ಯಗಳನ್ನು ನೋಡಿ ಕುಲಕಾಮಿನಿಯಾದ ಆ ಕುಮಾರಿಯು ಎಷ್ಟು ಸೋಜಿಗಗೊಂಡಿರ ಬಹುದು!

'ನೀವು ಬಹಳೇ ಒಯ್ಯಾರದವರು. ಸಾಹೇಬರು ದಾರೀ ಕಾಯುತ್ತಿರು ವರು; ನೀವು ಹೊಸ ಮದುವಣಗಿತ್ತಿಯರಂತೆ ಬಾಗಿಲಲ್ಲಿಯೇ ನಿಂತಿರಿ. ಚನ್ನಾಗಿದೆ! ಹೀಗೆ ಮಾಡಿದರೆ ಸಾಹೇಬರು ಏನು ತಿಳಕೊಂಡಾರು?' ಎಂದು ವಸಿತೆಯು ಮೆಲ್ಲನೆ, ಆದರೂ ಧಿಕ್ಕಸದಿಂದ ನುಡಿದಳು.

'ಉಷಾದೇವಿ, ಬನ್ನಿರಿ. ನೀವು ಯಾವ ವಿಷಯದಲ್ಲಿಯೂ ಅಂಜ ಬಾರದೆಂದು ನಾನು ಮೊದಲೇ ಹೇಳಿರುವೆನು. ನನ್ನ ಗುಣ ನಿಮಗೆ ಇನ್ನೂ ಗೊತ್ತಾಗಿಲ್ಲ. ಬರಬರುತ್ತ ತಿಳಿಯುವವು. ಕೈ ಕೆಳಗಿನ ಕೆಲಸಗಾರರೊಡನೆ ಎಷ್ಟು ಆತ್ಮೀಯ ಭಾವನೆಯಿಂದ ನಡೆಕೊಳ್ಳುವೆನೆಂಬದು ನಿಮ್ಮ ಅನುಭವಕ್ಕೆ ಬಂದ ಮೇಲೆ ನನ್ನಮಾತಿನ ನಂಬಿಗೆಯಾಗುವದು. ಬನ್ನಿರಿ, ಒಳಗೆಬನ್ನಿರಿ.'

'ಅವ್ವಯ್ಯಾ! ಸಾಹೇಬರ ಘನವಂತಿಕೆಯನ್ನು ನೋಡಿದಿರಾ!" ವನಿ ತೆಯು ಒನಪಿನಿಂದ ಮೆಲ್ಲನೆ, ಆದರೂ ಸಾಹೇಬರಿಗೆ ಕೇಳುವಂತೆ ನುಡಿದಳು

'ಅವರು ಹಾಗಿದ್ದರೂ ಇವರು ಹೇಗಿರುವರು ನೋಡಿರಿ, ತಿರುಕ ಜಂಭ ದವರು!' ಎಂದು ಕುಸುಮಾವತಿಯು ಅಂಥದೇ ದನಿಯಿಂದ ನುಡಿದಳು.

ಉಷೆಯು ಮೆಲ್ಲಡಿಯಿಡುತ್ತ ಒಳಗೆ ಹೋದಳು ಸಾಹೇಬರಿಗೆ ಉಪಾ ಹಾರ ಕೊಡುವದು ಶಾಲೆಯ ಕಾನೂನುಗಳಲ್ಲೊಂದಿರಬಹುದೆಂದು ಅವಳ ಗ್ರಹಿಕೆಯಾಯಿತು. ಅವಳುಪೇಲೆಯಲ್ಲಿ ಕಾಫಿ ತುಂಬಿ ಸಾಹೇಬರ ಕೈಯಲ್ಲಿ

ಕೊಟ್ಟು, ಉಪಾಹಾರದ ಸಾಮಗ್ರಿಗಳನ್ನು ಎದುರಿಗಿದ್ದ ಸಣ್ಣ ಚೌಕಿಯ ಮೇಲಿಟ್ಟಳು.

'ನೀವೂ ತೆಗೆದುಕೊಳ್ಳಿರಿ.' ಸಾಹೇಬರು ನಸು ನಗುತ್ತ ನುಡಿದರು.

'ಬೇಡ!'

'ಅದೇಕೆ?'

'ಹಿಂದಿನಿಂದ ತೆಗೆದುಕೊಳ್ಳುವೆನು.

'ಬಲು ದಾಕ್ಷಿಣ್ಯದವರು.' ಎಂದು ನುಡಿದು, ಗಹಗಹಿಸಿ ನಗುತ್ತ ಸಾಹೇಬರು ಉಷೆಯ ಮೋರೆಯನ್ನು ಹರಿದು ತಿನ್ನುವವರಂತೆಯೋ ಹೇಗೋ ದಿಟ್ಟಿಸಿ ನೋಡಹತ್ತಿದರು.

ಉಪಾಹಾರದ ತಟ್ಟೆಯೂ, ಕಾಫಿಯ ಪೇಲೆಯೂ ತೆರವಾದ ಮೇಲೆ ಅಲ್ಲಿಯೆ ತಬಕದಲ್ಲಿರಿಸಿದ್ದ ತಾಂಬೂಲವನ್ನಾದರೂ ಕೊಡಬೇಕಾದುದು ಶಿಷ್ಟಾಚಾರಕ್ಕನುಸಾರವಾಗಿ ಉಷೆಯ ಪಾಲಿನದೇ ಆಗಿತ್ತು. ಅದೂ ನೆರವೇರಿತು.

'ಒನ್ನಿರಿ, ಇಲ್ಲಿ ಕುಳಿತುಕೊಳ್ಳಿರಿ. ಹೀಗೇಕೆ ನಿಂತುಕೊಂಡಿರಿ? ನೀವು ನಿಂತದ್ದನ್ನು ನೋಡಿ, ಕುಳಿತವನಾದ ನನ್ನ ಕಾಲುಗಳು ನೋಯುಹತ್ತಿವೆ.' ಎಂದು ಸಾಹೇಬರು ತಾವು ಕುಳಿತ ಮಂಚದ ಮೇಲೆ ಕುಳಿತುಕೊಳ್ಳಲಿಕ್ಕೆ ಉಷೆಗೆ ಸೂಚಿಸಿದರು.

'ನೋಡಿದಿರಾ ಹೇಗಿದೆ! ಸಾಹೇಬರ ಸೌಹಾರ್ದ್ರತೆ!' ಎತ್ತಣಿಂದಲೋ ಧ್ವನಿ ಬಂದು ಉಷೆಯ ಕರ್ಣರಂಧ್ರವನ್ನು ಪ್ರವೇಶಿಸಿತು.

'ಒನ್ನಿರಿ. ದೊಡ್ಡ ಸಾಲೆಯ ದೊಡ್ಡ ಸ್ಕೂಲ ಮಿಸ್ಟ್ರೆಸ್ಸರೆಂದರೆ, ಅವರೇನು ಸಾಲೆಯ ಸಾಹೇಬರಿಗಿಂತ ತೀರ ಕಡಿಮೆಯವರಲ್ಲ. ಸ್ವಲ್ಪ ಹೆಚ್ಚು-ಕಡಿಮೆ ಸರಿಸಮಾನಸ್ಕಂಧರೇ. ಸ್ವಲ್ಪ ಹೊತ್ತು ಕುಳಿತು ಸ್ವಚ್ಛಂದದಿಂದ ಮಾತಾಡೋಣ.' ಎಂದು ಸಾಹೇಬರು ಮತ್ತೆ ನುಡಿದರು.

ಉಷೆಗೆ ಸಾವೋ ಮತ್ತೇನೋ ಬಂದಂತಾಯಿತು! ಅವಳ ಎದೆಯೊಡೆಯಿತು. ಇದು 'ವಿದ್ಯಾಮಂದಿರವಲ್ಲ; ವಿಲಾಸ ಮಂದಿರವು!' ಎಂದು ಅವಳು ಮನದಲ್ಲಿಯೆ ಮೆಲ್ಲನೆ ಅಂದುಕೊಂಡಳು. ಮನದಲ್ಲಾದರೂ ಗಟ್ಟಿಯಾಗಿ ನುಡಿದರೆ, ಕಣ್ಣು ಮಂದವಾಗಿದ್ದರೂ ಸರ್ಪಕರ್ಣೇಶ್ವರರಾಗಿದ್ದ ಸಾಹೇಬರಿಗೆ ಕೇಳೀತೆಂಬ ಭಯವು ಅವಳಿಗಿತ್ತು.

'ಉಷಾದೇವಿ, ನೀವು ನನ್ನೊಡನೆ ಎರಡು ಮಾತಾಡಲಿಕ್ಕೆ ಹಿಂದೆ-ಮುಂದೆ ನೋಡುವಿರಿ. ಹೀಗಾದರೆ ಹೇಗೆ? ಸದ್ಯದ ಗೊಂದಲದ ಪರಿಸ್ಥಿತಿಯಲ್ಲಿ ನಾನು ಎಲ್ಲವನ್ನೂ ಬದಿಗಿರಿಸಿ, ಇತ್ತಕಡೆಗೆ ಏಕೆ ಧಾವಿಸಿ ಬಂದಿರು

ವೆನೆಂಬದು ನಿಮಗೆ ಗೊತ್ತಿಲ್ಲವೇ ಬಂತೆ ತೋರುವದು. ನೀವು ಇನ್ನೂ ಅನನು ಭವಿಕರು. ಕೆಲಸದ ಗೊತ್ತುವಳಿಯಿಲ್ಲ. ನಿಮ್ಮ ತಂದೆಯವರ ರಜೆಯ ಬಗ್ಗೆ ಹೇಗೆ ಮಾಡಬೇಕೆಂಬುದನ್ನು ನಿಮ್ಮಿಂದ ತಿಳಿದುಕೊಳ್ಳಬೇಕಾಗಿದೆ. ನಿಮ್ಮ ನೌಕರಿಯನ್ನು ಸ್ಥಿರವಾಗಿ ಉಳಿಸುವ ಕೆಲಸವು ನನ್ನನ್ನೇ ಅವಲಂಬಿಸಿದೆ. ಇಂತಹ ಸಂದರ್ಭದಲ್ಲಿ ನೀವು ನಲಿದಾಡುವದನ್ನು ಬಿಟ್ಟು ನಾಚಹತ್ತಿದರೆ, ಮುಂದೆ ಗತಿಯೇನು? ನಾನು ಹೇಳುವದು ನಿಮ್ಮ ಕಲ್ಯಾಣಕ್ಕಾಗಿ. ಬಡವರಾದ ನಿಮಗೆ ಭಾಗ್ಯೋದಯ ಮಾಡಬೇಕೆಂದು ನನ್ನ ಇಚ್ಛೆ. ಆ ಭಾಗ್ಯವನ್ನು ಹೊಂದುವದೂ-ಬಿಡುವದೂ ನಿಮ್ಮ ಕೈಯೊಳಗಿನ ಮಾತು.'

'ಸಾಹೇಬರೆ,' ಉಷೆಯು ಧೈರ್ಯ ತಂದುಕೊಂಡು—'ನಾನು ಇಂದೇ ಶಾಲೆಯನ್ನು ಪ್ರವೇಶಿಸಿರುವೆನು. ನೀವು ಕೇಳಬೇಕೆಂದಿರುವ ವಿಷಯಗಳಿಗೆ ಉತ್ತರ ಕೊಡಲಿಕ್ಕೆ ನನಗೆ ಇಂದು ಏನೂ ತೋಚದಾಗಿದೆ. ಇನ್ನೊಂದು ದಿನ ನಿಮ್ಮ ಮಾತಿನ ಉತ್ತರ ಕೊಡುವೆನು.'

'ಹಾಗೆ ಮಾಡಲಿಕ್ಕೂ ಅಡ್ಡಿಯಿಲ್ಲ. ಮುಂದೆ ನನಗೆ ಬೇಗನೆ ಇಲ್ಲಿಗೆ ಬರಲಿಕ್ಕೆ ಅನುಕೂಲವಾಗಲಿಕ್ಕಿಲ್ಲ. ನೀವು ನನ್ನ ಮನೆಗೆ ಬಂದು ಭೆಟ್ಟಿಯಾಗುವಿರಾ?'

ಸದ್ಯದ ಗಂಡಾಂತರವೊಂದು ತಪ್ಪಿದರೆ ಸಾಕೆಂದು ಉಷೆಯು ಯೋಚಿಸಿ—'ಅವಶ್ಯವಾಗಿ ಬರುವೆನು.'

'ಬಹಳೇ ಒಳಿತಾಯಿತು' ಎಂದು ಸಾಹೇಬರು ನುಡಿದು—'ಉಷಾದೇವಿ, ಸ್ವಲ್ಪ ಕುಳಿತು ಮಾತಾಡಿರಿ' ಎಂದು ಮಂಚವನ್ನು ಬಡಿದು ಸಾಹೇಬರು ನುಡಿದರು.

'ಇಲ್ಲಿಯೇ ಕುಳಿತುಕೊಳ್ಳುವೆನು' ಎಂದು ಉಷೆಯು ರತ್ನಗಂಬಳಿಯ ಮೇಲೆ ಕುಳಿತುಕೊಳ್ಳಹೋದಳು.

'ಛೀ! ಶಿಕ್ಷಕಿಯರ ಮರ್ಯಾದೆ ಕಳೆದಿರಿ! ಕುರ್ಚಿಯ ಮೇಲಾದರೂ ಕುಳಿತುಕೊಳ್ಳಿರಿ. ಯಾಕೊ ಮಂಚದ ಮೇಲೆ ಕುಳಿತುಕೊಳ್ಳಲಿಕ್ಕೆ ಈಗ ನಾಚುತ್ತೀರಿ. ಹೀಗೆ ನಾಚಿದರೆ ಮುಂದೇನು ಗತಿ-ಉಷಾದೇವಿ!' ಎಂದು ಸಾಹೇಬರು ನುಡಿದು, ಮಂಚದಿಂದೆದ್ದು ಉಷಾದೆವಿಯ ಕೈ ಹಿಡಿದು, ಅವಳನ್ನು ಸನ್ಮಾನಪೂರ್ವಕವಾಗಿ ಕುರ್ಚಿಯ ಮೇಲೆ ಕುಳ್ಳಿರಿಸಿ ಕೃತಕೃತ್ಯರಾದರು. ಅಂದು ಅವರಿಗೆ ಪಾಣಿಗ್ರಹಣವಷ್ಟೇ ಸಾಕೆನಿಸಿತು. ಮುಂದೆ ಹೋದರೆ ಜಿಂಕೆಯು ಬೆದರುವದೆಂಬುದು ಚಾಣಾಕ್ಷರಾದ ಅವರಿಗೆ ಗೊತ್ತಿತ್ತು.

ಸಾಹೇಬರು ಕೈ ಹಿಡಿದದ್ದರಿಂದ ಉಷೆಯ ಮೈ ಜುಮ್ಮೆಂದಿತು. ಎದೆಯು

ದಡ ದಡ ಹಾರಹತ್ತಿತು ಅಲ್ಲಿಯ ಎಲ್ಲ ಸ್ಥಿತಿ-ರೀತಿಗಳಿಂದಲೂ ಮಾತುಕಥೆಗಳಿಂದಲೂ ಸಾಹೇಬರು ಯಾವ ಬಗೆಯ ಮನುಷ್ಯರಿರುವರೆಂಬದರ ಚಿತ್ರವು ಮಸಮುಸಕಾಗಿಯಾದರೂ ಅವಳ ಕಣ್ಣೆದುರಿಗೆ ಕಟ್ಟಿತು.

ಉಷೆಯು ಕುರ್ಚಾಸನ ಮಂಡಿತಳಾದ ಮೇಲೆ ಸಾಹೇಬರು ಹೊರಗಿದ್ದ ವನಿತೆ-ಕುಸುಮಾವತಿಯರನ್ನು ಕೂಗಿದರು. ಅವರು. ಒಳಗೆ ಬಂದರು. ಅನಂತರದಲ್ಲಿ ಕಾಫಿ-ಉಪಾಹಾರ ತೆಗೆದುಕೊಳ್ಳಲಿಕ್ಕೆ ಸಾಹೇಬರ ಆಜ್ಞೆಯಾಯಿತು. ಮೂವರೂ ಸ್ಕೂಲ ಮಿಸ್ಟ್ರೆಸ್ಸರು ಉಪಾಹಾರ ವಿಧಿಯನ್ನು ಪೂರ್ತಿಗೊಳಿಸಿ ವೀಳ್ಯವನ್ನು ಮೆದ್ದರು.

'ಉಷಾದೇವಿಯವರಿಗೆ ಇನ್ನೂ ಹೊರಗಿನ ದೃಷ್ಟಿಯ ಜ್ಞಾನವಿಲ್ಲ.' ಎಂದು ಸಾಹೇಬರು ನುಡಿದರು.

'ಹೊಸಬರು; ಒಮ್ಮೆಲೆಹೇಗೆ ಗೊತ್ತಾಗಬೇಕು?' ವನಿತೆಯು ನಮ್ರತೆಯಿಂದ ನುಡಿದಳು.

'ಬರಬರುತ್ತ ತಾವೇ ಗೊತ್ತಾಗುವವು' ಕುಸುಮಾವತಿಯು ವನಿತೆಯ ಮಾತನ್ನು ತನ್ನ ವಾಕ್ಯದಿಂದ ಪೂರೈಸಿದಳು.

'ವನಿತಾದೇವಿ, ಇಂದು ನೀವೇ ಶಾಲೆಗೆ ಬೀಗ ಹಾಕಿಕೊಂಡು ಬರ್ರಿ. ಉಷಾದೇವಿಯನ್ನು ನನ್ನ ಮೋಟರಿನಲ್ಲಿ ಕರೆಕೊಂಡು ಹೋಗುವೆನು. ಅವರ ಮನೆಯ ಮುಂದೆ ಹಾಯ್ದೇ ಮುಂದೆ ಹೋಗಬೇಕಾದ ಕೆಲಸವಿದೆ. ಅನಾಯಾಸವಾಗಿ ವಾಹನದ ಅನುಕೂಲವಿದ್ದಾಗ ಅವರನ್ನು ನಡೆಯಲಿಕ್ಕೆ ಹಚ್ಚಬೇಕೇಕೆ?'

ವನಿತೆಯು ಶಾಲೆಗೆ ಬೀಗ ಹಾಕಲಿಕ್ಕೆ ಒಪ್ಪಿದಳು. ಬೇಡ ಬೇಡವೆಂದರೂ ಕೇಳದೆ ಸತ್ತಾಧಾರಿಗಳಾದ ಸಾಹೇಬರು ಉಷೆಯನ್ನು ಮೋಟರಿನಲ್ಲಿ, ತಾವು ಕುಳಿತ ಆಸನದಲ್ಲಿಯೇ ತಮ್ಮ ಮಗ್ಗಲಿಗೇ ಮೈಗೆ ಮೈ ಹತ್ತುವಂತೆ ಕುಳ್ಳಿರಿಸಿಕೊಂಡರು. ಮೋಟರಬಂಡಿಯು ಮಾರುತತುಲ್ಯ ವೇಗದಿಂದ ಸಾಗಿತು. ಆಗ ಉಷೆಯ ಹೃದಯ ವೇಗವು ಎಂತಿರಬಹುದು?

---

## ದುಃಖದಲ್ಲಿಯ ಸುಖ.

ಸ್ಕೂಲ ಮಿಸ್ಟ್ರೆಸ್ ರಾಧಾದೇವಿಯು ಮೂರ್ಛೆ ಹೊಂದುವದಕ್ಕಿಂತ ಮೊದಲು ತನ್ನ ಕೊಲೆ ಮಾಡಬಂದವರಾರೆಂಬದನ್ನು ಪರ್ಯಾಯದಿಂದ ತಿಳಿಸಿದ್ದಳು. ಕೊಲೆಗಡಕನು ಬುರುಕೆ ಹಾಕಿದ್ದರಿಂದ, ಆಗಅವನ

ಗುರತು ಹೆತ್ತದಿದ್ದರೂ, ಮುನ್ನಿನ ದಿನದ ಘಟನೆಯಿಂದ ಸುರೇಂದ್ರ ರಾಯನೇ ಈ ಕೆಲಸ ಮಾಡಿರುವನೆಂದು ಅವಳು ತನ್ನ ಅನುಮಾನವನ್ನು ಪೋಲೀಸ ಅಧಿಕಾರಿಗಳೆದುರಿಗೆ ಇಟ್ಟಿದ್ದಳು. ರಮಾದೇವಿಯೊಡನೆ ಒಂದು ವಿಷಯದ ಸಲುವಾಗಿ ವಾದ-ವಿವಾದ ಮಾಡಿ ಹೊರಬಿದ್ದ ಮೇಲೆ ಸುರೇಂದ್ರ ರಾಯನು ಅಲ್ಲಿಗೆ ಬಂದನು. ದಂಪತಿಗಳ ಮಾತುಗಳೇನು ನಡೆಯುವವೋ ಕೇಳಬೇಕೆಂದು ಕಿಡಿಕಿಯ ಬಳಿಯಲ್ಲಿ ನಿಂತೆನು. ಇಂದೇ ಸ್ಕೂಲ ಮಿಸ್ಟ್ರೆಸ್ಸಿನ ಸೇಡು ತೀರಿಸಿಕೊಳ್ಳುವೆನೆಂದು ಸುರೇಂದ್ರರಾಯನು ಪತ್ನಿಗೆ ಹೇಳಿದನು. ಅವನು ನನ್ನ ಕೊಲೆ ಮಾಡಬರುವನೆಂದು ಆಗ ನನ್ನ ಭಾವನೆಯಾಗಲಿಲ್ಲ. ಮನೆಮುಟ್ಟಿ ಜಗಳಕ್ಕೆ ಬರಬಹುದೆಂದು ತಿಳಿದಿದ್ದೆನು. ಮನೆತನಕ ಬಂದು ಅಲ್ಲದ-ಸಲ್ಲದ ಮಾತಾಡಿದರೆ, ಮಾನಹಾನಿಯ ಫಿರ್ಯಾದಿ ಮಾಡಬೇಕೆಂಬ ನಿಶ್ಚಯದಿಂದ ಮನೆಗೆ ಬಂದೆನು. ಮುಂದಿ ಮಲಗುವವರೆಗೂ ಬಾರದ್ದರಿಂದ, ಮಾತಿನ ಬಂಟನೆಂದು ನಾನು ಅವನಿಗೆ ಹೆಸರಿಟ್ಟು, ಅಡ್ಡಾದೆನು. ನಮ್ಮ ಆಡವಿಯು ಹೊರಗೆ ಹೋದದ್ದರಿಂದ ನಾನು ಮನೆಯ ಬಾಗಿಲಿಗೆ ಅಗಳಿ ಹಾಕಲಿಲ್ಲ. ನನಗೆ ನಿದ್ದೆ ಹತ್ತಿತೋ-ಇಲ್ಲವೋ ಅಷ್ಟರಲ್ಲಿ ನನ್ನ ಮೇಲೆ ಆಪತ್ತು ಪ್ರಾಪ್ತವಾಯಿತು.' ಮೊದಲಾದ ಸಂಗತಿಗಳನ್ನು ಅವಳು ಕೈಗಂಟು ಕಾಲು ಗಂಟು ಹಾಕಿ, ಪೋಲೀಸರೆದುರಿಗೆ ಇಟ್ಟಿದ್ದಳು ಅವಳ ಈ ಮಾತಿನ ಮೇಲೆ ಆವಲಂಬಿಸಿ, ಪೋಲೀಸರು ಸುರೇದ್ರ-ರಮೆಯರನ್ನೂ, ಅದೇ ಓಘ ದಲ್ಲಿ ಚಂಪಾವತಿಯನ್ನೂ ಸೆರೆ ಹಿಡಿದಿದ್ದರು. ರಾಧಾದೇವಿಯ ಪರಮ ಸ್ನೇಹಿತರೂ ಶಿಕ್ಷಣಾಧಿಕಾರಿಗಳೂ ಆದ ಕೃಷ್ಣರಾಯರೂ, ಅವರ ಹಸ್ತಕರಾದ ಕಂಕಣ ಬಹಾದ್ದೂರ ಆನಂದರಾಯ, ಗರುಡವಾಹನ ಗೋವಿಂದರಾಯ ಮೊದಲಾದ ಶಿಕ್ಷಕರೂ ಕೊಲೆಯುವಳ ಮತಕ್ಕನುಸಾರವಾಗಿ ಸಾಕ್ಷಿಗಳನ್ನು ಸಿದ್ಧಪಡಿಸುವದರಲ್ಲಿ ತಲ್ಲೀನರಾಗಿದ್ದರು.

ಪೋಲೀಸಅಧಿಕಾರಿಗಳುಸುರ್‍ರೇಂದ್ರರಾಯನನ್ನೂ,ರಮಾ-ಚಂಪಾವತಿ ಯರನ್ನೂ ಸೆರೆಯಲ್ಲಿರಿಸಿದರು. ಪೋಲೀಸ ಕಚೇರಿಯ ಮುಂದೆ ನಿಂತ ಜನ ಸಮುದಾಯವು ಅಧಿಕಾರಿಗಳ ವಿಷಯಕ್ಕೆ ಅನೇಕ ವಿಧವಾದ ತರ್ಕ-ಕುತರ್ಕ ಗಳನ್ನು ನಡೆಯಿಸಿತು. ರಮಾ-ಚಂಪಾವತಿಯರು ಕೃಷ್ಣರಾಯನ ಗೋಕುಲ ದೊಳಗಿನ ಗೋಪಿಕೆಯರೆಂದೂ, ಮುಖ್ಯ ಗೋಪಿಕೆಯಾದ ರಾಧೆಯ ಕೊಲೆ ಯಾದಂತೆ ಇವರಿಬ್ಬರ ಕೊಲೆಯಾಗಿದ್ದರೆ ಒಳಿತಾಗುತ್ತಿತ್ತೆಂದೂ ಕೆಲವರು ಅನ್ನುತ್ತಿದ್ದರೆ, ರಮೆಯು ಕೃಷ್ಣಲೀಲೆಗಂಜಿ ನೌಕರಿಗೆ ಶರಣುಹೊಡೆದ ಸಾಧ್ವಿ ಯಿರುವದರಿಂದ ಇವಳಿಗೆ ದೇವರು ಕಲ್ಯಾಣ ಮಾಡಬೇಕೆಂದೂ ಕೆಲವರು

ಅನ್ನುತ್ತಿದ್ದರು. ಕೆಲವರು ರಾಧಾ-ಕೃಷ್ಣರಾಯರನ್ನು ಮನಸೋಕ್ತವಾಗಿ ನಿಂದಿಸತೊಡಗಿದ್ದರು.

ಕಚೇರಿಯ ಹೊರಗೆ ಜನರು ತಮ್ಮ ತಮ್ಮ ಮನಸ್ಸಿಗೆ ಬಂದಂತೆ ತರ್ಕಿಸುತ್ತಿದ್ದಾಗ ಒಳಗೆ ಬೇರೆ ಪ್ರಕಾರವು ನಡೆದಿತ್ತು. ಅಲ್ಲಿಯ ಪೊಲೀಸರು ದಿವ್ಯಲಾವಣ್ಯಾವತಿಯರಾದ ಚಂಪಾವತಿ-ರಮೆಯರ ಸೌಂದರ್ಯರಸಪಾನ ಮಾಡತೊಡಗಿದ್ದರು. ಫಿರ್ಯಾದಿಯಿರಲಿ,-ಆರೋಪಿಯಿರಲಿ, ಸಭ್ಯರಿರಲಿ,-ಅಸಭ್ಯರಿರಲಿ ಅವರ ಮುಖವನ್ನು ನಗ್ನದೃಷ್ಟಿಯಿಂದ ಮನಸೋಕ್ತವಾಗಿ ನೋಡುವ ಅಧಿಕಾರವು ಪೋಲೀಸ ಸಂಸ್ಥೆಯ ಕಡೆಗೆ ಬಹುಮಟ್ಟಿಗೆ ಇರುತ್ತದೆಂದು ಆ ಸಂಸ್ಥೆಯೊಳಗಿನ ಕಲವರು ತಿಳಿದಿರುತ್ತಾರೆ. ತನ್ನ ಲಗ್ನದ ಇಲ್ಲವೆ ಅಲಗ್ನದ ಸ್ತ್ರೀಯೊಡನೆ ಮಾತಾಡುತ್ತಿರುವ ಇಲ್ಲವೆ ಅವಳನ್ನು ನೋಡುತ್ತಿರುವ ಸಿಪಾಯಿಯ ವರ್ತನವು ಯಾವ ಸಿಪಾಯಿ ದಾದನಿಗೆ ಸಹನವಾಗುತ್ತಿರುವದಿಲ್ಲವೋ, ಅಂತಹನೇ ತನ್ನ ಕಕ್ಷೆಯಲ್ಲಿರುವ ಇಲ್ಲವೆ ಕಕ್ಷೆಯ ಬಾಹ್ಯದ ಕುಲಕಾಮಿನಿಯನ್ನು ಮನಸ್ವೀಯಾಗಿ ನೋಡಲಿಕ್ಕೆ ನಾಚುತ್ತಿರುವದಿಲ್ಲ. ತನ್ನ ಕರಿಯ ಕೆಚ್ಚಿನ ಉಡಿಕೆಯ ಕೂಡಿಕೆಯ ಸ್ತ್ರೀಯ ಸಮೀಪದಲ್ಲಿ ಯಾವನಾದರೂ ಹಾಯ್ದು ಹೋದರೆ ಯಾವ ಸಿಪಾಯಿ ದಾದಾನ ಕಣ್ಣು ಕೆಂಪಗಾಗುತ್ತಿರುವವೋ, ಅವನೇ ಸುಂದರ ಸತಿಯಳ ಸಮೀಪಕ್ಕೆ ಹೋಗಿ, ಯಾವ ನಿಮಿತ್ತದಿಂದಲಾದರೂ ಅವಳ ಮೈಯು ತನ್ನ ಮೈಗೆ ಬಡಿಯುವಂತೆ ವರ್ತಿಸುವದಕ್ಕೆ ಹಿಂಜರಿಯುತ್ತಿರಲಿಲ್ಲ. ರಮಾ-ಚಂಪಾವತಿಯರನ್ನು ಸೆರೆಯಿರಿಸಿದ ಕಚೇರಿಯೊಳಗಿನ ಕೆಲವು ಜನ ಪೋಲೀಸರೂ ಹಾಗು ಪೋಲೀಸ ಅಧಿಕಾರಿಗಳೂ ಇದೇ ಮಾಲಿಕೆಯೊಳಗಿನ ಮಣಿಗಳಾಗಿದ್ದರು; ಆದರೂ ಅವರಿಗೆ ಹೆಸರಿಡುವ ಎದೆ ಯಾವನದು? ಕರೀ ಡಗಲೆ-ಟೊಪ್ಪಿಗೆಗಳನ್ನು ಹಾಕಿದ ಆ ರಾಜಪ್ರತಿನಿಧಿಗಳು ಕಾಮುಕ ದೃಷ್ಟಿಯಿಂದಲೇ ಸ್ತ್ರೀಯರನ್ನು ನೋಡುವರೆಂದು ಯಾಕೆ ತಿಳಿಯಬೇಕು? ದೊಡ್ಡ ಮನೆತನದವರಿರಲಿ, ಸಣ್ಣ ಮನೆತನದವರಿರಲಿ, ರಾಜನ ರಾಣಿಯಾಗಿರಲಿ, ಸ್ತ್ರೀಯಿರಲಿ, ಪುರುಷನಿರಲಿ, ಬಡವರಿರಲಿ, ಶ್ರೀಮಂತರಿರಲಿ ಅವರ ಕಡೆಗೆ ನೋಡುತ್ತಿರುವ ಪೋಲೀಸರು ತಮ್ಮ ಕರ್ತವ್ಯವನ್ನು ನೆರವೇರಿಸುವರೆಂದು ತಿಳಿದರೆ ತಪ್ಪಾಗುವದೆ? ಸರಕಾರದ ಗಾದಿಯ ಎದುರಿಗೆ ದೊಡ್ಡವರು-ಸಣ್ಣವರು, ಸ್ತ್ರೀಯರು-ಪುರುಷರು ಎಂಬ ಭೇದವೆಲ್ಲಿ? ಈ ವಿವರಣೆಯು ಕೇವಲ ಸತ್ತ್ವೆಯದಾಯಿತು. ಸತ್ಯವಿಚಾರವು ಒಂದು ವೇಳೆ ಬೇರೆ ತರಹದ್ದಿರಬಹುದು; ಆದರೆ ಜಗತ್ತು ಶಾಶ್ವತವಾದ ಸತ್ಯವನ್ನೇ ಎಲ್ಲಿ ಅವಲಂಬಿಸುವದು? ಕಾನೂನಿನ ಸತ್ಯವನ್ನವಲಂಬಿಸಿಯೇ

ಸರಕಾರದ ವ್ಯವಹಾರವು ನಡೆಯುವದು. ಸುರೇಂದ್ರರಾಯ-ರಮಾ-ಚಂಪಾವತಿ ಇವರು ನಿರಪರಾಧಿಗಳೆಂಬ ಮಾತಿಗೆ ಕಾನೂನಿನ ವ್ಯವಹಾರದಲ್ಲಿ ಮಹತ್ವವೇನು? ರಾಧಾದೇವಿಯ ಜಬಾನಿಯು ಹಾಗು ಅದಕ್ಕೆ ಸರಿಯಾಗಿ ನಿರ್ಮಿತವಾದ ಕೆಲವು ಕೃತ್ರಿಮ ಸಾಕ್ಷಿಗಳ ಆಧಾರದ ಮೇಲೆ ಅವರು ಬಂಧಿಸಲ್ಪಟ್ಟಿದ್ದರು. ನಿರಪರಾಧಿತ್ವವು ಸಿದ್ಧವಾಗುವವರೆಗೆ ಅವರು ಅಪರಾಧಿಗಳೇ. ಅವರ ಅಪರಾಧವು ತೊಡೆದು ಹೋಗುವವರೆಗೆ ಎಲ್ಲರೂ ಅವರನ್ನು ತಿರಸ್ಕಾರ ದೃಷ್ಟಿಯಿಂದ ನೋಡುವವರೇ. ಅಪರಾಧಿಯೆಂದು ಪೋಲೀಸರ ವಶವಾದ ಮನುಷ್ಯನ ನಿಜಸ್ಥಿತಿಯು ಹೇಗಿದ್ದರೂ ಜಗತ್ತಿಗೆ ಅವನ ಬೆಲೆಯೇನು?

ಇದೇ ನ್ಯಾಯದಂತೆ ರಮಾ-ಚಂಪಾವತಿ-ಸುರೇಂದ್ರರಾಯರ ಅವಸ್ಥೆಯಾಗಿತ್ತು. ಅವರ ಮೇಲೆ ಎಂತಹ ಅಪವಾದ ಹೊರಿಸಿದರೂ, ಮಾನಹಾನಿಕರವಾದ ಎಂತಹ ಮಾತುಗಳನ್ನಾಡಿದರೂ ಯಾರೂ ಬೇಡವೆನ್ನುತ್ತಿದ್ದಿಲ್ಲ. ಅವರ ಯಾತನೆಗಾಗಿ ಮರುಗುವವರಿದ್ದಿಲ್ಲ. ಅಪಮಾನ-ಅತ್ಯಾಚಾರಗಳ ಪ್ರತೀಕಾರ ಮಾಡುವವರಿದ್ದಿಲ್ಲ. ಇನಸ್ಪೆಕ್ಟರ ಸಾಹೇಬರು ಅಪರಾಧಿಗಳ ವಿಚಾರಣೆ ಮಾಡಿ ಹೊರಡಲುದ್ಯುಕ್ತರಾದರು. ಆಗ ಸುರೇಂದ್ರರಾಯನು-'ಸಾಹೇಬರೆ, ನನ್ನನ್ನೂ ನನ್ನ ಹೆಂಡತಿ ಮಕ್ಕಳನ್ನೂ ಒಂದೇ ಕಡೆಯಲ್ಲಿರಿಸಿ,' ಎಂದು ವಿನಂತಿ ಮಾಡಿಕೊಂಡನು. ಸಾಹೇಬರು ಅವನ ಮಾತನ್ನು ಲಕ್ಷ್ಯಕ್ಕೆ ತಾರದೆ ಹೊರಟು ಹೋದರು. ಸಾಹೇಬರು ಹೋದ ಮೇಲೆ ಕಾವಲಿನ ಶಿಪಾಯಿಯು ಸುರೇಂದ್ರರಾಯನನ್ನು ಕುರಿತು—'ಏನೋ ಕೊಲೆಗಡಕಾ! ಸಾಹೇಬರೆದುರಿಗೆ ಏನೋ ಹೇಳುತ್ತಿದ್ದೆಯಲ್ಲ!" ಎಂದು ಗರ್ಜಿಸಿದನು.

'ಮತ್ತೇನೂ ಇಲ್ಲ. ನನ್ನನ್ನೂ ನನ್ನ ಹೆಂಡತಿ-ಮಕ್ಕಳನ್ನೂ ಒಂದೇ ಸ್ಥಳದಲ್ಲಿಡಲಿಕ್ಕೆ ತಿಳಿಸಿದೆನು.'

'ಶಾಬಾಸ್! ಇದೇನು ನಿನ್ನ ರಂಗಮಹಾಲೆಂದು ತಿಳಿದಿರುವೆಯಾ?' ಎಂದು ಸಿಪಾಯಿಯು ನುಡಿದು—'ಮಂಚ-ಗಾದಿ-ದಿಂಬುಗಳನ್ನು ಕಳಿಸಲಿಕ್ಕೆ ನೀನು ಸಾಹೇಬರಿಗೆ ಹೇಳಿದೆಯೋ-ಇಲ್ಲವೋ?' ಎಂದು ನಿಂದಾವ್ಯಂಜಕ ಸ್ವರದಿಂದ ನುಡಿದನು.

'ಇವನು ಯಾವ ಅಪರಾಧ ಮಾಡಿರುವನು!' ಅಲ್ಲಿಯೆನಿಂತ ಮತ್ತೊಬ್ಬ ಶಿಪಾಯಿಯು ಕಾವಲಿನ ಶಿಪಾಯಿಯನ್ನು ಕೇಳಿದನು.

'ಇವನು ಸ್ಕೂಲ ಮಿಸ್ಟ್ರೆಸ್ಸ ಸಾಹೇಬರ ಕೊಲೆ ಮಾಡ ಹೋಗಿದ್ದನು.

'ಶಿಪಾಯಿಸಾಹೇಬರೆ!' ಸುರೇಂದ್ರರಾಯನು ದೀನವಾಣಿಯಿಂದ:—'ಪರಮಾತ್ಮನನ್ನು ಸ್ಮರಿಸಿ ಹೇಳುವೆನು. ನಾನು ಸ್ಕೂಲ ಮಿಸ್ಟ್ರೆಸ್ಸ ಸಾಹೇಬರ

ಕೊಲೆಮಾಡ ಹೋಗಿಲ್ಲ.'

'ಈಗ ಹೇಗೆ ಒಪ್ಪುವೆ? ಬದಮಾಷ! ನಿನ್ನ ಮೈಯು ಒಮ್ಮೆ ನುಗ್ಗಾಯಿತೆಂದರೆ ನಿಜವಾದ ಮಾತು ಹೇಳುವೆ. ನಿನ್ನ ಮೇಲೆ ಪೋಲೀಸರ ಪ್ರಭಾವವು ಬಿದ್ದಿತೆಂದರೆ, ನಿನ್ನ ಎಲುವುಗಳೂ-ನಿನ್ನ ಮೂರು ಚಿಮುಟಿಗೆಯಷ್ಟು ಬೂದಿಯೂ ಸಹ ಕೊಲೆಮಾಡಿದ್ದನ್ನು ಒಪ್ಪಬಹುದು.'

ಶಿಪಾಯಿಯಾಡಿದ ಕರ್ಣಕಟುವಾದ ಮಾತುಗಳನ್ನು ಸುರೇಂದ್ರರಾಯನ ಕೋಣೆಯ ಬಳಿಯಲ್ಲಿಯ ಕೋಣೆಯಲ್ಲಿದ್ದರಮಾದೇವಿಯು ಕೇಳಿದಳು. ಆಗ ಅವಳಿಗೆ ಕಿವಿಯಲ್ಲಿ ತಪ್ತರಸವನ್ನು ಎರಚಿದಂತಾಯಿತು. ಸುರೇಂದ್ರರಾಯನ ದೇಹದ ಜೀವಂತಿಕೆಯಲ್ಲಿಯೇ ಅವಳ ಸೌಭಾಗ್ಯ ಸರ್ವಸ್ವವೂ ಜೀವನಸರ್ವಸ್ವವೂ ಅಡಕವಾಗಿತ್ತು. ಅಂತಹನ ದೇಹದ ಮೂರು ಚಿಮುಟಿಗೆ ಬೂದಿ ಮಾಡಲಿಕ್ಕೆ ಆ ರಾಕ್ಷಸೀ ಹೃದಯದ ಶಿಪಾಯಿ ಸಾಹೇಬನಿಗೆ ಯಾವ ಬಗೆಯ ಅಡ್ಡಿಯೂ ತೋರದ್ದನ್ನು ನೋಡಿ ಅವಳು ಕ್ಲೇಶಗೊಂಡಳು. ಪೋಲೀಸ ಖಾತೆಯೆಂದರೆ, ಇಂತಹದೇ ಒಂದು ದಾನವೀ ಸ್ವರೂಪವೆಂದು ಅವಳ ಭಾವನೆಯಾಯಿತು, ಅದು ಅನೇಕ ಸತ್ಯಾ ಸತ್ಯಸಾಕ್ಷಿ-ಪಟ್ಟಿಗಳನ್ನು ಮುಂದೆ ಮಾಡಿ, ಕಡೆಗೆ ತನ್ನ ಪತಿಯನ್ನು ಉರುಲಿನ ಶಿಕ್ಷೆಗೆಲ್ಲಿ ಗುರಿಮಾಡುವದೋ? ಎಂದು ಶೋಕಾಕುಲಳಾದಳು.

ರಮಾದೇವಿಯ ಮಗುವಾದ ವಸಂತನು ಹೊಟ್ಟೆ ತುಂಬದೆ ಒಂದೇ ಸವನೆ ಚಡಪಡಿಸತೊಡಗಿದ್ದನು. ಅವನಿಗೆ ಮೊಲೆ ಕುಡಿಸುವದಕ್ಕಾಗಿ ಚಂಪಾವತಿಯು ಮೇಲಿಂದಮೇಲೆ ಹೇಳಹತ್ತಿದಳು. ಹಾಲಿದ್ದರೆತಾನೆ ಅವನ ಹೊಟ್ಟೆ ತುಂಬಬೇಕಷ್ಟೇ? ಅವನು ಅಳುತ್ತ ಕರೆಯುತ್ತ ತಾಯಿಯೊಡನೆ ಜಗಳ ನಡೆಯಿಸಿದ್ದನು. ಹುಡುಗನು ಬಹಳ ಅಳುತ್ತಾನೆಂದು ರಮಾದೇವಿಯು ಅವನಿಗೆ ಮೊಲೆಕುಡಿಸಹತ್ತಿದಳು. ಸಾಹಸಿಯಾದ ವಸಂತನ ಪ್ರಯತ್ನದಿಂದ ಒಂದು ಗುಟುಕು ಹಾಲು ಸಹ ದೊರೆಯಲಿಲ್ಲ ಆಗ ಅವನು ಸೆರಗಿನಿಂದ ಮುಖವನ್ನು ಹೊರಗೆ ತೆಗೆದು ದೀನಮುದ್ರೆಯಿಂದ ತಾಯಿಯ ಮುಖವನ್ನು ನೋಡಹತ್ತಿದನು. ಮಗುವಿನ ಈ ಅವಸ್ಥೆಯನ್ನು ಕಂಡು ಆ ಕೋಮಲ ಹೃದಯದ ಮಾತೆಯ ಕಣ್ಣೊಳಗಿಂದ ಎರಡು ದುಃಖಾಶ್ರುಗಳುದುರಿ ಶಟ್ಟನೆ ಮಗುವಿನ ಬಾಯಲ್ಲಿ ಬಿದ್ದವು. ಆ ಕಣ್ಣೀರಿನಿಂದ ಕ್ಷುಧಾ-ತೃಷ್ಣೆಗಳನ್ನು ಶಾಂತಪಡಿಸಿಕೊಂಡ ಹೊರತು ವಸಂತನಿಗೆ ಅನ್ಯ ಮಾರ್ಗವೇ ಇದ್ದಿಲ್ಲ. 'ಧರ್ಮವಂತಳಾದ ಸ್ಕೂಲ ಮಿಸ್ಟ್ರೆಸ್ಸಳೇ! ಇದು ನಿನ್ನ ಕರ್ತವ್ಯದ ಪ್ರಭಾವವು!!' ಎಂದು ಅವಳ ಮುಖದಿಂದ ಉದ್ಗಾರ ಹೊರಟಿತು

ಸೆರೆಯಾಳುಗಳು ತಮ್ಮ ದುರ್ದೈವವನ್ನು ಹಳಿದುಕೊಳ್ಳುತ್ತ ಕುಳಿತಾಗ, ಗೋವರ್ಧನರಾಯ ವಕೀಲನು ಅವರಿಗೆ ಅನ್ನವನ್ನು ತಂದನು. ಅಂಥ ಅವಸ್ಥೆಯಲ್ಲಿ ಸಹ ಅವರಿಗೆ ಅನ್ನದ ಆವಶ್ಯಕತೆಯಿತ್ತು. ಹೊಟ್ಟೆ ಕೆಟ್ಟದ್ದು. ಹೊಟ್ಟೆಯ ಕಿಚ್ಚು ಎಲ್ಲ ದುಃಖಗಳಿಗಿಂತ ದೊಡ್ಡದು. ಎಂತಹ ದುಃಖವನ್ನಾದರೂ ಸಹಿಸಬಹುದು; ಆದರೆ ಹೊಟ್ಟೆಯ ಬಳಲಿಕೆಯನ್ನು ಸಹಿಸಲಾಸಲ್ಲ. ಗೋವರ್ಧನರಾಯನು ತಂದ ಅನ್ನವನ್ನು ಸೆರೆಯಾಳುಗಳು ಊಟ ಮಾಡಿ ಅವನನ್ನು ಹರಸಿದರು. ವಕೀಲನ ಸಂಗಡ ಆನಂದರಾಯ-ಗೋವಿಂದರಾಯರೂ ಬಂದಿದ್ದರು. ಈ ಮೂವರೂ ಸೆರೆಯಾಳುಗಳಿಗೆ ಸಮಾಧಾನ ಹೇಳತೊಡಗಿದ್ದರು. ಆಗ ಸುರೇಂದ್ರರಾಯನು ಗೋವಿಂದರಾಯನಿಗೆ ಕೈಜೋಡಿಸಿ 'ನಾನು ಕೊಲೆಗಡಕನೆಂದು ಹಿಡಿಯಲ್ಪಟ್ಟಿದ್ದೇನೆ. ನನ್ನ ಕರ್ಮವನ್ನು ನಾನು ಭೋಗಿಸುವೆನು. ನನ್ನ ಈ ಕೋಮಲ ಪತ್ನಿಯಾದ ರಮೆಯನ್ನೂ, ಎಳೆ ಬಾಲಕನಾದ ವಸಂತನನ್ನೂ, ನಿರಪರಾಧಿ ಚಂಪಾವತಿದೇವಿಯವರನ್ನೂ ಬಿಡುಗಡೆ ಮಾಡಿಸಿರಿ'

'ಸುರೇಂದ್ರರಾಯರೆ, ನೀವು ಹೇಳುವದಕ್ಕಿಂತ ಮುಂಚಿತವಾಗಿಯೆ ನಾನು ಪ್ರಯತ್ನ ನಡೆಯಿಸಿದ್ದೇನೆ. ನಿಮಗೆ ಹೊಣೆಯು ಹುಟ್ಟುವಂತಿಲ್ಲವಾದ್ದರಿಂದ ನಿರುಪಾಯನಾಗಬೇಕಾಗಿದೆ; ಯಾಕಂದರೆ, ಕೊಲೆಗಡಕರನ್ನು ಹೊಣೆಯ ಮೇಲೆ ಬಿಡಲಿಕ್ಕೆ ಕಾಯಿದೆಯ ಆಧಾರವಿಲ್ಲ.'

'ವಕೀಲರೆ, ನಾನು ಕೊಲೆಗಡಕನೇ?' ದೀನವಾಣಿಯಿಂದ ಸುರೇಂದ್ರರಾಯನು ನುಡಿದನು.

'ಸತ್ಯಸ್ಥಿತಿಯನ್ನು ದೇವರು ಬಲ್ಲ. ಸದ್ಯಕ್ಕೆ ನೀವು ಕೊಲೆಗಡಕರೆಂಬ ಸಂಶಯದಿಂದ ಬಂಧಿಸಲ್ಪಟ್ಟಿರುವಿರಿ. ನಾನು ನಿಮ್ಮ ಪಕ್ಷದಿಂದ ಸರಕಾರದೊಡನೆ ಹೋರಾಡಬೇಕೆಂದು ಮನಸ್ಸು ಮಾಡಿದ್ದೇನೆ.'

'ಹೇಗಾದರೂ ಹೊಟ್ಟೆಯಲ್ಲಿ ಹಾಲು ಹೊಯ್ದುಕೊಂಡು ಈ ದೀನರನ್ನು ಪಾರುಮಾಡಿರಿ. ಮೊದಲು ನನ್ನ ಹೆಂಡತಿಯನ್ನೂ, ಮಗುವನ್ನೂ ಬಿಡಿಸಿರಿ. ಅವರ ಯಾತನೆಯನ್ನು ನೋಡಿ ನನಗೆ ಮರಣಪ್ರಾಯವಾದ ವ್ಯಸನವಾಗುತ್ತದೆ.'

'ಪ್ರತಿಯೊಬ್ಬರಿಗೆ ನಾಲ್ಕು ನೂರರಂತೆ ಹೊಣೆಯು ಬೇಕು.'

'ನೀವು ಯೋಚಿಸದೆ ಹೊಣೆಯಾಗಿರಿ. ಇವರಲ್ಲಿ ಯಾರೂ ಓಡಿಹೋಗಿ ನಿಮ್ಮ ಘಾತಮಾಡುವಂಥವರಿಲ್ಲ' ಎಂದು ಸುರೇಂದ್ರರಾಯನು ಹೇಳಿ—'ಮಾಧವರಾಯರು ಇಲ್ಲವೆ?'

"ಯಾವ ಮಾಧವರಾಯ? ದಿವಾಣ ಮಾಧವರಾಯನೇನು?"

"ಹೌದು"

"ಅವನು ವಿಷಮ ಜ್ವರದಿಂದ ಮೈ ಮೇಲೆ ಪರವೆಯಿಲ್ಲದೆ ಬಿದ್ದು ಕೊಂಡಿರುವನು.'

'ನನ್ನ ದುರ್ದೈವ!' ಎಂದು ಗದ್ಗದ ಕಂಠದಿಂದ ನುಡಿದು, ಸುರೇಂದ್ರ ರಾಯನು ಉಸಿರ್ಗರೆದನು.

'ನೀವು ಅವನ ಮೇಲೆಯೇ ಇಷ್ಟೇಕೆ ಅವಲಂಬಿಸಿರುವಿರಿ? ನಾನೂ ಅವನಿಗಿಂತ ಹೆಚ್ಚಿನ ಕೆಲಸ ಮಾಡಲಾರೆನೆ?'

'ನಿಮ್ಮ ವಿಷಯವಾಗಿ ನನಗೆ ಅವಿಶ್ವಾಸವಿಲ್ಲ. ಸಂಕಟ ಸಮಯದಲ್ಲಿ ಒಬ್ಬರಿಗಿಂತ ಇಬ್ಬರನೆರವುದೊರೆತರೆ ನೆಟ್ಟಗಲ್ಲವೆ? ಸರಕಾರವು ಕೆಟ್ಟದ್ದು. ಅದು ಯಾವ ವೇಳೆಗೆ ಹೇಗೆ ತಂತ್ರ ಮಾಡುವದೆಂಬದನ್ನು ಹೇಳಲಾಗುವದಿಲ್ಲ.'

'ನೀವು ಯೋಚಿಸಬೇಡಿರಿ' ಎಂದು ಗೋವರ್ಧನರಾಯನು ನುಡಿದು: "ಹಸಿದಿದ್ದೀರಿ. ಬೇಗನೆ ಊಟ ತೀರಿಸಿರಿ.'

ಹೇಗಾದರೂ ಒಮ್ಮೆ ಊಟದಶಾಸ್ತ್ರವಾಯಿತು. ಅವರು ಊಟಕ್ಕೆ ಕುಳಿತಾಗ ಗೋವರ್ಧನರಾಯನುಹೊರಗೆಹೋಗಿ, ಪೋಲೀಸ ಅಧಿಕಾರಿಯೊಡನೆ ಸ್ವಲ್ಪ ವೇಳೆ ಮಾತಾಡಿ ಮತ್ತೆ ಒಳಗೆ ಬಂದನು. ಆಗ ಅವನು:-'ಸುರೇಂದ್ರ ರಾಯರೆ, ರಮಾದೇವಿ-ಚಂಪಾವತಿಯರನ್ನು ಹೊಣೆಯಮೇಲೆ ಬಿಡಲಿಕ್ಕೆ ಸರಕಾರವು ಸಿದ್ಧವಿದೆ. ನಾನು ರಮಾದೇವಿಗೆ ಹೊಣೆಯಾಗುವೆನು; ಆನಂದ ಗೋವಿಂದರಾಯರು ಚಂಪಾವತಿದೇವಿಗೆ ಹೊಣೆಯಾಗುವರು.'

ಹೀಗೆ ಹೊಣೆಗಾರಿಕೆಯನ್ನು ಹಂಚಿಕೊಂಡಿದ್ದರ ಮರ್ಮವು ಹೇಗಿದ್ದರೂ ಅದು ಸುರೇಂದ್ರರಾಯನಿಗೆ ತಿಳಿಯುವಂತಿದ್ದಿಲ್ಲ. ಪ್ರವಾಹಪತಿತನಂತಾಗಿದ್ದ ಅವನಿಗೆ ಸೂಕ್ಷ್ಮ ವಿಚಾರಗಳನ್ನು ಮಾಡುವಷ್ಟು ಚಿತ್ತಸ್ವಾಸ್ಥ್ಯವೆಲ್ಲಿಂದ ಬರಬೇಕು? ಬೆಳ್ಳಗಿದ್ದದ್ದನ್ನೆಲ್ಲ ಹಾಲೆಂದು ನಂಬುವಷ್ಟು ಬುದ್ಧಿಯು ಮಾತ್ರ ಈಗ ಅವನಲ್ಲಿ ಉಳಿದಿತ್ತು. ಗೋವರ್ಧನರಾಯನಿಂದ ತನ್ನ ಮೇಲೆ ಹೊರಲಾರದಷ್ಟು ಉಪಕಾರವಾಯಿತೆಂದು ಅವನಲ್ಲಿ ಕೃತಜ್ಞತೆಯಿಂದ ನೋಡುವದರಲ್ಲಿಯೇ ಸುರೇಂದ್ರರಾಯನು ಮಗ್ನನಾಗಿದ್ದನು.

'ಗೋವರ್ಧನರಾಯರೇ, ಹಡೆದು ಹೆಸರಿಟ್ಟರೂ ನಿಮ್ಮ ಉಪಕಾರ ತೀರದು."

'ಛೇ! ಇದರಲ್ಲೇನು? ಆಪತ್ಕಾಲದಲ್ಲಿ ಒಬ್ಬರಿಗೊಬ್ಬರು ನೆರವಾಗಲಿಕ್ಕೇ ಬೇಕು.'

ರಮಾದೇವಿಯೂ ಗೋವರ್ಧನರಾಯನಿಗೆ ಕೈಜೋಡಿಸಿ, ದೀನ-ದಂಪತಿಗಳ ಗಂಡಾಂತರ ನಿವಾರಣೆ ಮಾಡಬೇಕೆಂದು ಬೇಡಿಕೊಂಡಳು.

'ರಮಾದೇವಿ, ನಾನು ನಿಮ್ಮ ಕೂದಲಿಗೆ ಸಹ ಧಕ್ಕೆ ಹತ್ತದಂತೆ ಯತ್ನಿಸುವೆನು. ಸುರೇಂದ್ರರಾಯರ ಮೇಲಿನ ಅನಿಷ್ಟವು ದೂರವಾಗುವದೆಂದು ಧೈರ್ಯದಿಂದ ಹೇಳಲಾರೆನು; ಯಾಕಂದರೆ, ರಾಧಾದೇವಿಯವರ ಸಂಶಯಯುಕ್ತ ಜಬಾನಿಯ ಮೇಲಿಂದ ಅವರು ಬಂಧಿಸಲ್ಪಟ್ಟಿರುವರು.'

'ರಾಧಾದೇವಿಯವರು ಏನನ್ನುವರು?' ಎಂದು ಸುರೇಂದ್ರರಾಯನು ಆತುರತೆಯಿಂದ ಕೇಳಿದನು.

'ನೀವೇ ಅವರ ಕೊಲೆ ಮಾಡುವ ಸಾಹಸಕ್ಕೆ ಬಂದಿದ್ದಿರಂತೆ!'

'ನಮ್ಮ ಕರ್ಮವೇ ಅವರ ಮುಖದಿಂದ ಹೀಗೆ ಮಾತಾಡಿಸುತ್ತದೆ. ಎರಡನೆಯದೇನು!" ಎಂದು ನುಡಿದು, ಸುರೇಂದ್ರರಾಯನು ತಲೆಗೆ ಕೈಗೊಟ್ಟು ಕುಳಿತನು.

"ನೀವು ಚಿಂತಿಸಬೇಡಿರಿ. ನಿಮ್ಮ ರಕ್ಷಣೆಗಾಗಿಯಾದರೂ ನಾನು ಯತ್ನಿಸುವೆನು. ನಾನೂ ಆನಂದರಾಯ-ಗೋವಿಂದರಾಯರೂ ಈಗಲೆ ರಮಾದೇವಿ-ಚಂಪಾವತಿದೇವಿಯರ ಮುಕ್ತತೆಯ ಬಗ್ಗೆ ಹೊಣೆಯ ಪತ್ರಬರೆದು ಕೊಟ್ಟು ಬರುವೆವು."

ಗೋವರ್ಧನರಾಯನು ಹೀಗೆ ನುಡಿದು, ಆನಂದರಾಯ-ಗೋವಿಂದರಾಯರನ್ನು ಕರೆದುಕೊಂಡು ಕಚೇರಿಗೆ ಹೋದನು. ಅವನು ಹೋಗಿ ಒಂದೆರಡು ತಾಸಿನಲ್ಲಿ ತಿರುಗಿ ಬಂದನು. ಆವನನ್ನು ನೋಡಿ ಸುರೇಂದ್ರರಾಯನು; "ಯಾಕೆ? ವಕೀಲ ಸಾಹೇಬರೆ, ಹೋದ ಕೆಲಸದಲ್ಲಿ ಯಶವು ದೊರೆಯಿತೆ?"

'ಓಹೋ! ದೊರೆಯದೇನು? ಈ ಗೋವರ್ಧನರಾಯನು ಹಿಡಿದ ಕಾರ್ಯಗಳು ಇದು ವರೆಗೆ ಯಾವವೂ ವ್ಯರ್ಥವಾಗಿರುವದಿಲ್ಲ."

ಗೋವರ್ಧನರಾಯನ ಮಾತುಗಳನ್ನು ಕೇಳಿ ಸುರೇಂದ್ರರಾಯನಿಗೆ ಇದ್ದದ್ದರಲ್ಲಿಯೆ ಆನಂದವಾಯಿತು. ಆರೋಪಿತರನ್ನು ಹೊಣೆಯ ಮೇಲೆ ಬಿಡುಗಡೆ ಮಾಡುವ ಕಾರ್ಯವು ಬರಿಯ ಗೋವರ್ಧನರಾಯನೊಬ್ಬನಿಂದಲೆ ನೆರವೇರಿದ್ದಿಲ್ಲ! ಕಂಕಣಬಹಾದ್ದರ ಆನಂದರಾಯನೂ, ಗರುಡವಾಹನ ಗೋವಿಂದರಾಯನೂ ತಮ್ಮ ಪುಣ್ಯವನ್ನಲ್ಲದಿದ್ದರೂ ಬೇರೆಯವರ ಪುಣ್ಯವನ್ನು ವೆಚ್ಚ ಮಾಡಿದ್ದರು. ಅವರು ಪೋಲೀಸ ಅಧಿಕಾರಿಯಾದ ಬದ್ರುದ್ದೀನಖಾನನಿಗೆ ಚಂಪಾವತಿಯ ಸೂಕ್ಷ್ಮ ವಶೀಲಿಯನ್ನು ಹಚ್ಚಿದ್ದರು. ಅವಳಾದರೂ ರಮಾದೇವಿಯ ಹಾಗು ತಮ್ಮ ಮೇಲಿನ ಗಂಡಾಂತರವು ದೂರವಾಗುವ

ದಕ್ಕಾಗಿ ಆ ಅಧಿಕಾರಿಯನ್ನು ಸವಿಸವಿ ಮಾತುಗಳಿಂದ ಮನವೊಲಿಸಿದ್ದಳು. ಶಿಕ್ಷಣಸಂಸ್ಥೆಯಲ್ಲಿ ಪ್ರವೇಶವಾದ ಮೇಲೆ ಅವಳ ಪಾವಿತ್ರ್ಯವು ನಷ್ಟವಾಗಿ ಹೋಗಿತ್ತು. ಇಂತಹ ಅವಸ್ಥೆಯಲ್ಲಿ ಗಂಡಾಂತರದಿಂದ ಪಾರಾಗುವವರೆಗೆ ಆ ಶೀಲದಾನದ ಆಶ್ವಾಸನೆಯಿತ್ತು. ಪೋಲೀಸ ಅಧಿಕಾರಿಯನ್ನು ಮರುಳು ಗೊಳಿಸಿದ್ದೇನೂ ಅವಳ ದೃಷ್ಟಿಯಿಂದ ಪಾತಕವೆನಿಸಲಿಲ್ಲ. ಅವಳು ಹೆಣ್ಣು ತನದ ವಶೀಲಿಯನ್ನು ಹಚ್ಚಲಿಕ್ಕೆ ಆನಂದ-ಗೋವಿಂದರಾಯರಿಂದ ನೆರವು ದೊರೆತಿತ್ತು. ಚಂಪಾವತಿಯು ಸೆರೆಯಿಂದಬಿಡುಗಡೆಯಾದರೆ, ಅವಳು ತಮ್ಮ ವಿಷಯದಲ್ಲಿಕೃತಜ್ಞಳಾಗುವಳೆಂದುಆನಂದ-ಗೋವಿಂದರದೃಢವಿಶ್ವಾಸವಿತ್ತು.

ನ್ಯಾಯಾಧೀಶರ ಆಜ್ಞೆಯಮೇರೆಗೆ ಬದ್ರುದ್ದೀನ ಖಾನನು ಚಂಪಾ ವತಿ-ರಮಾದೇವಿಯವರನ್ನು ಬಂಧಮುಕ್ತಗೊಳಿಸಿದನು. ಆಗ ಸುರೇಂದ್ರ ರಾಯನು ಕೈ ಜೋಡಿಸಿ ಗೋವರ್ಧನರಾಯನನ್ನು ಕುರಿತು-'ವಕೀಲ ಸಾಹೇಬರೆ, ನಿಮ್ಮ ಘನವಂತಿಕೆಯಿಂದ ನಮಗೆ ಕಲ್ಯಾಣವಾಯಿತು. ನೀವು ರಮೆಯನ್ನು ಮಾಧವರಾಯನ ಮನೆಗೆ ಕಳಿಸಿರಿ.'

'ಛೇ! ನೀವು ಹೀಗೇಕೆ ಪರಕೀಯತನ ಭಾವಿಸುವಿರಿ? ರಮಾದೇವಿಯ ರೊಬ್ಬರ ಹೊಟ್ಟೆಯು ನನಗೆ ಭಾರವೆನಿಸುವದೇ? ನೀವು ಬಂಧಮುಕ್ತರಾಗಿ ಬರುವವರೆಗೆ ಅವರುಮನೆಯವರಂತೆನನ್ನಲ್ಲೇಇದ್ದು ಬಿಡಲಿ. ಈಗ ಮಾಧವ ರಾಯನು ರುಗ್ಣಶಯ್ಯಾಶಾಯಿಯಾಗಿರುವನು. ಇಂಥದರಲ್ಲಿ ಅವನಿಗೇಕೆ ತೊಂದರೆಯನ್ನೀಯಬೇಕು? ರಮಾದೇವಿಯವರೆಂದರೆ ಅವರೇನೂ ಪರಕೀ ಯರಲ್ಲ; ಅವರನ್ನು ನಾನು ಸ್ವಕೀಯರೆಂದೇ ತಿಳಿದಿರುವೆನು.'

ಗೋವರ್ಧನರಾಯನ ಮಾತುಗಳು ಮನಃಪೂರ್ವಕವಾದವುಗಳೆಂದು ಸುರೇಂದ್ರರಾಯನು ತಿಳಿದನು. ಆಗ ಅವನು-'ವಕೀಲಸಾಹೇಬರೆ, ಏಳು ಜನ್ಮಹೊತ್ತುತೀರಿಸಿದರೂ ನಿಮ್ಮಉಪಕಾರದ ಹೊರೆಯು ಇಳಿಯಲಾರದು'

'ಸುರೇಂದ್ರರಾಯರೆ! ದೀನರನ್ನು ಕಂಡರೆ ನನ್ನ ಹೃದಯವು ಬೆಣ್ಣೆ ಯಂತೆ ಕರಗುತ್ತದೆ ನೋಡಿರಿ!'

'ಘನವಂತರ ಹೃದಯದ ಸ್ಥಿತಿಯು ಹೀಗೆಯೇ ಸರಿ.'

ರಮಾದೇವಿಯು ಹೊರಡುವಾಗ ಪತಿಯನ್ನು ಕರುಣಾಪೂರ್ಣದೃಷ್ಟಿ ಯಿಂದ ನೋಡಿದಳು. ಸುರೇಂದ್ರರಾಯನಾದರೂ ಪತ್ನಿಯನ್ನು ಅದೇ ಪ್ರಕಾರ ನೋಡಿದನು. ಆದರ್ಶದಂಪತಿಗಳ ನೇತ್ರಗಳು ಅಶ್ರುಪೂರ್ಣವಾದವು. 'ಕುಮಾರ ವಸಂತನ ಕಡೆಗೆ ಲಕ್ಷ್ಯವಿರಲಿ.' ಎಂದು ಸುರೇಂದ್ರರಾಯನು ಪತ್ನಿಗೆ ಹೇಳಿದನು.

'ಒಡಹುಟ್ಟಿದ ಅಣ್ಣಂದಿರಂತೆ ಗೋವರ್ದನರಾಯರು ಭೆಟ್ಟಿಯಾದ್ದರಿಂದ ನಮ್ಮ ಬಾಳು ಒಳಿತಾಯಿತು. ಅವರ ಪ್ರಯತ್ನದಿಂದ ನೀವೂ ಬಿಡುಗಡೆ ಹೊಂದುವಿರಿ.' ಎಂದು ಮುಗ್ಧಭಾವದ ರಮಾದೇವಿಯು ನುಡಿದಳು.

'ರಮಾದೇವಿಯುವರಂತು ಗೋವರ್ಧನರಾಯರ ಮನೆಗೆ ತೆರಳಿದರು. ನೀವು ನಾಲ್ಕುದಿನನಮ್ಮಮನೆಗೆನಡೆಯಿರಿ. ಗಂಡಾಂತರದಿಂದ ಗಾಸಿಗೊಂಡ ಮನಸ್ಸು ಸಮಾಧಾನಗೊಂಡಮೇಲೆ ನೀವು ನಿಮ್ಮಮನೆಗೆ ಹೋಗುವಿರಂತೆ' ಗರುಡವಾಹನ ಗೋವಿಂದರಾಯನು ಚಂಪಾವತಿಗೆ ಹೇಳಿದನು.

'ನಿಮ್ಮ ಗೊಂದಲದಲ್ಲಿ ಈ ಬದ್ರುದ್ದೀನಖಾನನನ್ನು ಮರೆಯಬೇಡಿರಿ· ಆನಂದರಾಯರೆ-ಗೋವಿಂದರಾಯರೆ!' ಎಂದು ಪೋಲೀಸ ಅಧಿಕಾರಿಯು ಅವರಿಗೆ ಸೂಚಿಸಿದನು.

ರಮಾದೇವಿಯು ಪತಿಯ ನಿರೂಪ ಹೊಂದಿ, ಗೋವರ್ಧನರಾಯನೊಡನೆ ಅವನ ಮನೆಯನ್ನು ಸೇರಿದಳು.

ಗೋವಿಂದರಾಯನು ಚಂಪಾವತಿಯನ್ನು ಸಂಗಡ ಕರೆದುಕೊಂಡು ತನ್ನ ಮನೆಗೆ ತೆರಳಿದನು; ಆದರೆ ಆನಂದರಾಯನ ಪಾಲಿಗೆ ಯಾರೂ ಉಳಿಯಲಿಲ್ಲ. ಆಗ ಅವನು ಸೊಂಡೆ ಒಣಗಿಸಿಕೊಂಡು ತನ್ನಮನೆಗೆ ಹೋದನು.

---

## ಸೂಕ್ಷ್ಮವಶೀಲಿ.

ಕೃಷ್ಣರಾಯರಿಗೆ ಕ್ಲೇಶವೆಂದರೆ ಎಂತಹ ಪದಾರ್ಥವಿರುವದೆಂಬದು ಎಷ್ಟೂ ಗೊತ್ತಿದ್ದಿಲ್ಲ. ದೊಡ್ಡಅಧಿಕಾರಿಗಳು. ಸಂಸ್ಥಾನಿಕರ ಆಪ್ತರು. ಹೀಗಾಗಿ ಅವರು ಜನರ ಅಪ್ರೀತಿಗೆ ಪಾತ್ರರಾಗಿದ್ದರೂ ಸಹ ಆ ಅಸಂತೋಷಾಗ್ನಿಯ ಜಳವು ಅವರನ್ನು ಇದುವರೆಗೆ ಎಷ್ಟೂ ಸೋಂಕಿದ್ದಿಲ್ಲ. ಏನಾದರೂ ದುಃಖ-ಸಂತಾಪ-ನೈರಾಶ್ಯಗಳು ಅಲ್ಪ-ಸ್ವಲ್ಪ ಘಟಿಸುತ್ತಿದ್ದರೆ ಪಾತಿವ್ರತ್ಯದ ಇಲ್ಲವೆ ಸುಶೀಲತೆಯ ಹೆಸರಿಸಿಂದ ಮೆರೆಯುವ ರಮಾದೇವಿಯಂತಹರ ತಿರಸ್ಕಾರದಿಂದಲೇ. ಒಬ್ಬರಮೆಗೆ ಅಷ್ಟೊಂದು ಮಹತ್ವ ಕೊಡುವ ಸ್ವಭಾವವೂ ಅವರದಿದ್ದಿಲ್ಲ; ಯಾಕಂದರೆ ಅವರ ಗೋಕುಲದಲ್ಲಿ ರಮೆಯಂತಹ ಶತಕಾನುಶತಕ ರಮಣಿಯರು 'ಜೀ ಹುಜೂರ' ಎಂದು ಕೈ ಕಟ್ಟಿಕೊಂಡು ನಿಲ್ಲುವಂತಹರಿದ್ದರು. ಸಾಹೇಬರ ಪ್ರೇಮವೇ ದೇವಾನುಗ್ರಹವೆಂದು ತಿಳಿದುಕೊಳ್ಳುವ ಎಷ್ಟೋ ಶಿಕ್ಷಕ-ಶಿಕ್ಷಕಿಯರಿರುವಾಗ, ಅವರು ಒಬ್ಬ ರಮೆಗಾಗಿ ಅಷ್ಟೊಂದು ಸೊರಗಿ ಸಣ್ಣಾಗುತ್ತಿದ್ದಿಲ್ಲ.

ಸಾಹೇಬರು ವಿಶ್ರಾಂತಿ ಕುರ್ಚಿಯಾಸನದ ಮೇಲೆ ಮಂಡಿಸಿದ್ದರು. ಆವೇಳೆ ತಲೆಯಲ್ಲಿ ನಾನಾ ವಿಧದ ಯೋಚನೆಗಳು ಇಂದೇ ತುಂಬಿದ್ದವು. ಶಾಂತಿ ರಕ್ಷಕನಾದ ಬದ್ರುದ್ದೀನಖಾನನು ಚಂಪಾವತಿಯ ಮನೆಯಲ್ಲಿ ತಮ್ಮ ಹಾಗು ರಾಧಾದೇವಿಯ ದುಶ್ಚರಿತ್ರದ ಪ್ರದರ್ಶನದಂತಿರುವ ವಸ್ತುಗಳನ್ನು ಸ್ವಾಧೀನ ಪಡಿಸಿಕೊಂಡದ್ದರಿಂದ ಅವರು ಯೋಚನೆಗೊಳಗಾಗಿದ್ದರು. ಆ ವಸ್ತುಗಳು ರಾಧಾದೇವಿಯ ಪ್ರಕರ್ಣಕ್ಕೆ ಸಂಬಂಧಿಸಿದವುಗಳಾಗಿದ್ದರೂ ಅವು ಸರಕಾರದ ಸ್ವಾಧೀನವಾದರೆ, ತನ್ನ ಮರ್ಯಾದೆಯೇ ಹೋಗುವದೆಂದು ಅವರ ತಿಳುವಳಿಕೆಯಾಗಿತ್ತು. ಆ ವಸ್ತುಗಳನ್ನು ರಹಸ್ಯವಾಗಿರಿಸಬೇಕಾದರೆ, ಶಾಂತಿರಕ್ಷಕರ ಅನುಕೂಲವು ಬೇಕಾಗುತ್ತಿತ್ತು. ಅವರ ಮನೆತನಕ ಹೋಗಿಯಾದರೂ ವಶೀಲಿ ಹಚ್ಚಬೇಕೆಂದು ಅವನು ಯೋಚಿಸಿದನು. ಅಷ್ಟರಲ್ಲಿ ಅಂಚೆಯವನು ಅಲ್ಲಿಗೆ ಬಂದು ಕೆಲವು ವೃತ್ತಪತ್ರಗಳನ್ನೂ ಪತ್ರಗಳನ್ನೂ ಕೊಟ್ಟು ಹೋದನು. ಕೃಷ್ಣರಾಯರು ವೃತ್ತಪತ್ರಗಳನ್ನು ಒಡೆದು ಶಿರೋಲೇಖಗಳನ್ನು ಓದತೊಡಗಿದರು. ಅದರಲ್ಲಿ ಒಂದು ಲೇಖವನ್ನು ನೋಡಿ, ಅವರ ಮನಸ್ಸು ಗೊಂದಲಕ್ಕೊಳಗಾಯಿತು. ಆ ಲೇಖವು ಕರ್ನಾಟಕ ವೈಭವಪತ್ರದ್ದು.

ಸ್ಕೂಲ ಮಿಸ್ಟ್ರೆಸ್ಸರು ಸಾಯಲಿಲ್ಲ; ಸಂತಾನಲಾಭಹೊಂದಿದರು!

'ಶಿಕ್ಷಣಸಂಸ್ಥೆಯೊಳಗಿನ ಲೋಕಪ್ರಸಿದ್ಧ ಸ್ಕೂಲ ಮಿಸ್ಟ್ರೆಸ್ ರಾಧಾದೇವಿ ರತ್ನಪುರ, ಇವರು ಪ್ರಾಣಘಾತಕ ಗಾಯ ಹೊಂದಿ ಸರಕಾರೀ ರುಗ್ಣಾಲಯದಲ್ಲಿ ವಾಸವಾಗಿರುವರು. ಅವರ ಗಾಯಗಳು ವ್ಯವಸ್ಥೆಯಿಂದ ಕಟ್ಟಲ್ಪಟ್ಟದ್ದರಿಂದಲೂ, ಚಿಕಿತ್ಸೆಯು ಚನ್ನಾಗಿ ಆಗತೊಡಗಿದ್ದರಿಂದಲೂ ಅವರು ಗುಣಹೊಂದತೊಡಗಿರುವರು. ಅವರು ಗರ್ಭಿಣಿಯಿದ್ದು, ಈ ಅಪಘಾತಕ್ಕೀಡಾದುದರಿಂದ ಅಲ್ಲಿಯೇ ಪುತ್ರರತ್ನವನ್ನು ಪಡೆದರು. ಕೂಸು-ಬಾಣಂತಿ ಕ್ಷೇಮದಿಂದಿದ್ದಾರೆ. ಸೌ. ರಾಧಾದೇವಿ ಸ್ಕೂಲ ಮಿಸ್ಟ್ರೆಸ್ಸರು ಅತ್ಯಂತ ಭಾಗ್ಯಶಾಲಿನಿಯರಾದುದರಿಂದ, ಶಿಕ್ಷಣಸಂಸ್ಥೆಯ ಮುಖ್ಯಾಧಿಕಾರಿಗಳಾದ ರಾವಸಾಹೇಬ ಕೃಷ್ಣರಾಯರು ಅವರ ಪ್ರಕೃತಿಯು ಸುಧಾರಿಸುವದಕ್ಕಾಗಿ ತಮ್ಮ ತನುವಿನ ತಾಳೀಕೋಟೆಯನ್ನಾಗಿ ಮಾಡುತ್ತಿರುವರು.'

ವೃತ್ತಪತ್ರದೊಳಗಿನ ಕೊನೆಯ ವಾಕ್ಯವು ಕೃಷ್ಣರಾಯರ ಹೃದಯಕ್ಕೆ ಶಲ್ಯಪ್ರಹಾರ ಮಾಡಿದಂತಾಯಿತು. ಕ್ಷಣಹೊತ್ತು ದಿಙ್ಮೂಢರಾಗಿ ಕುಳಿತು ಅನಂತರದಲ್ಲಿ ಅವರು ಮುಂದಿನ ಸಂಗತಿಯ ಕಡೆಗೆ ಲಕ್ಷ್ಯಹಾಕಿದರು.

'ಈ ಪ್ರಕರಣದಲ್ಲಿಯ ಕೊಲೆಗಡಕರ ಶೋಧವಿನ್ನೂ ಆಗಿಲ್ಲ. ಸಂಶಯದಿಂದ ಸುರೇಂದ್ರರಾಯಮಾಸ್ತರ, ಅವರ ಪತ್ನಿ ರಮಾದೇವಿ, ಚಂಪಾ

ವೇತದೇವಿಯೆಂಬ ಶಿಕ್ಷಕಿ ಇವರು ಹಿಡಿಯಲ್ಪಟ್ಟಿದ್ದು, ಹೊಣೆಯ ಮೇಲಿಂದ ಎರಡನೇ-ಮೂರನೇ ಆರೋಪಿಗಳು ಸೆರೆಮನೆಯಿಂದ ಮುಕ್ತರಾಗಿರುವರು. ಕೊಲೆಯ ಸಂಶಯದಿಂದ ರಾವಸಾಹೇಬ ಕೃಷ್ಣರಾಯರ ಇಬ್ಬರು ಆಳುಗಳೂ, ಒಬ್ಬ ಒಕ್ಕಲಗಿತ್ತಿಯೂ ಸೆರೆ ಹಿಡಿಯಲ್ಪಟ್ಟಿದ್ದಾರೆ. ಯಾವ ಕಠಾರಿಯಿಂದ ಕೊಲೆಯ ಪ್ರಯತ್ನವು ಮಾಡಲ್ಪಟ್ಟಿತೋ ಆ ಕಠಾರಿಯೂ, ಸುರೇಂದ್ರ ರಾಯನು ರಾಧಾದೇವಿಯವರಿಗೆ ಕಳಸಿದ ಕೆಲವು ಪತ್ರಗಳೂ ರಾಧಾದೇವಿ ಯವರ ವಿಲಾಸಮಂದಿರದಲ್ಲಿ ದೊರೆತಿರುವವು.

ಚಂಪಾವತಿಯ ಮನೆಯಲ್ಲಿ ಕೆಲವು ವಸ್ತುಗಳು ದೊರೆತಿರುವವು. ಅವು ಕಾನೂನಿನ ದೃಷ್ಟಿಯಿಂದ ಮಹತ್ವದವಿದ್ದು ಮನೋರಂಜಕವಾಗಿರುವವು. ಜನ ವಾರ್ತೆಯಿದ್ದಂತೆ ಕೃಷ್ಣರಾಯರ ಹಾಗು ಸ್ಕೂಲ ಮಿಸ್ಟ್ರೆಸ್ಸಳ ಸ್ನೇಹಸಂಬಂಧವು ಇರುವದೇ ಹೇಗೆ? ಚಂಪಾವತಿಯ ವಿಷಯವಾಗಿ ಸಭ್ಯಸಮಾಜದಲ್ಲಾಗಿರುವ ದುರ್ಲೌಕಿಕದ ಮೂಲವು ಕೃಷ್ಣರಾಯರ ಆಢಳಿತಕ್ಕೆ ಸಂಬಂಧಿಸುವದೇ ಮೊದಲಾದ ಸಂಗತಿಗಳ ಮೇಲೆ ಈ ವಸ್ತುಗಳಿಂದ ಪ್ರಕಾಶ ಬೀಳುವಂತಿದೆ. ಈ ಪ್ರಕರ್ಣದ ತೀರ್ಪು ಆಗುವವರೆಗೆ ಈ ವಿಷಯದಲ್ಲಿ ನಮ್ಮ ಮತಪ್ರದ ರ್ಶನ ಮಾಡಲಿಕ್ಕೆ ಕಾಯಿದೆಯಿಂದ ಪ್ರತಿಬಂಧವಿದೆ. ಆದ್ದರಿಂದ ಸ್ಪಷ್ಟವಾಗಿ ತಿಳಿತುಕೊಳ್ಳಬೇಕಾಗಿರುವದು. ಒಟ್ಟಿನ ಮೇಲೆ ಸದ್ಯದ ಘಟನೆಗಳಿಂದ ನೋಡಲಾಗಿ ಈ ಪ್ರಕರ್ಣದಲ್ಲಿ ಸಜ್ಜನ ಸ್ತ್ರೀ-ಪುರುಷರಿಗೆ ಖಲಗ್ರಹಗಳ ಗ್ರಹಣ ಹಿಡಿದು, ಅವರಿಗೆ ಕಠೋರವಾದ ಶಾಸನವನ್ನು ಅನುಭವಿಸುವ ಪ್ರಸಂಗವೊದಗುವದೆಂದೂ, ನಿಜವಾದ ಅಪರಾಧಿಯು ಬಾಧೆಗೊಳ್ಳದೆ ಉಳಿ ಯುವನೆಂದೂ ಊಹಿಸಲಿಕ್ಕೆ ಮಾರ್ಗವಿದೆ.'

ಕರ್ನಾಟಕ ವೈಭವದೊಳಗಿನ ಈ ಲೇಖವನ್ನು ನೋಡಿ ಕೃಷ್ಣರಾಯರ ಜೀವವು ಕೆಳಗೆ ಮೇಲಾಗತೊಡಗಿತು. ವೃತ್ತಪತ್ರಗಳ ಇಂತಹ ಕೂಗಾಟಗಳ ಮೇಲೆ ನಿಯಂತ್ರಣಗೊಳಿಸುವ ಕಾರ್ಯವನ್ನು ಸರಕಾರವು ಮಾಡದ್ದನ್ನು ನೋಡಿ, ಅವರು ಸರಕಾರದ ಮೇಲೆಯೂ ಸಂತಾಪಗೊಂಡರು. ತಮ್ಮ ಹೆಸರಿ ನಿಂದಾದ ಬೊಬ್ಬಾಟವು ಹೇಗೆ ಕಡಿಮೆಯಾದೀತೆಂದು ಅವರು ವಿಚಾರ ಮಾಡಹತ್ತಿದರು. ಶಾಂತಿರಕ್ಷಕ ಬದ್ರುದ್ದೀನಖಾನನು ಚಂಪಾವತಿಯ ಮನೆ ಯಿಂದ ಜಪ್ತಿ ಮಾಡಿ ಒಯ್ದು ವಸ್ತುಗಳು ಒಳ್ಳೇ ಮಹತ್ವದವಿದ್ದುದರಿಂದ, ಅವುಗಳು ಸರಕಾರದ ದೃಷ್ಟಿಗೆ ಬೀಳದಂತೆ ಯತ್ನಿಸುವದು ಅವರ ಆದ್ಯಕರ್ತವ್ಯ ವಾಗಿತ್ತು. ಶಾಂತಿರಕ್ಷಕನು ಕೃಷ್ಣರಾಯರಮೇಲೆ ಕ್ಷೋಭೆಯುಳ್ಳವನಾಗಿದ್ದನು.

ಅಂತಹನ ಮನಸ್ಸನ್ನು ಯಾವ ವಿಧದಿಂದ ಸಂತುಷ್ಟಗೊಳಿಸಬೇಕೆಂದು ಕೃಷ್ಣರಾಯರು ಬಹು ಪರಿಯಾಗಿ ಯೋಚಿಸಿದರು. ಅವರು ಏನನ್ನೋ ನಿರ್ಧರಿಸಿಕೊಂಡರು. ಅನಂತರದಲ್ಲಿ ಅವರು ಪ್ರಜಾಮತ ವೃತ್ತ ಪತ್ರವನ್ನೊಡೆದು ನಿರೀಕ್ಷಿಸತೊಡಗಿದರು. ಅದರಲ್ಲಿಯ ಅಗ್ರಲೇಖವು ಆ ಕೊಲೆಗೆ ಸಂಬಂಧಿಸಿದ್ದೇ ಇದ್ದುದರಿಂದ, ಅವರು ಅದನ್ನು ಓದಲಾರಂಭಿಸಿದರು.

'ನಿಜವಾದ ಕೊಲೆಗಾರನು ಯಾವನು?

ಶ್ರೀಮತಿ ಸೌ. ರಾಧಾದೇವಿ ರತ್ನಪುರ ಇವರ ಮೇಲಿನಅತ್ಯಾಚಾರದ ವಿಷಯವು ಇತ್ತೀಚೆಗೆ ಎಲ್ಲಿ ನೋಡಿದಲ್ಲಿ ಚರ್ಚಿಸಲ್ಪಡತೊಡಗಿದೆ. ಕೊಲೆಯ ನಿಮಿತ್ಯದಿಂದ ಕೆಲವು ಜನರು ಹಿಡಿಯಲ್ಪಟ್ಟಿರುವರು. ವಿದ್ಯಾಧಿಕಾರಿಗಳಾದ ರಾವಸಾಹೇಬಕೃಷ್ಣರಾಯರಿಗೆ ಕೆಳಗಿನಪ್ರಶ್ನೆ ಕೇಳುತ್ತಿರುವೆವು. ಅವುಗಳನ್ನು ಅವರು ಪ್ರಕಟವಾಗಿ ಲೇಖನದ್ವಾರ ತಿಳಿಸಬೇಕೆಂದು ಇಚ್ಛಿಸುವೆವು.

ಸೌ. ರಾಧಾದೇವಿಯವರು ಕೃಷ್ಣರಾಯರ ಪ್ರೇಮಪಾತ್ರರಿರುವರೆಂಬ ಸಂಗತಿಯು ನಿಜವೇ ಹೇಗೆ?

ರಾಧಾದೇವಿಯವರ ವಿರುದ್ಧವಾಗಿ ಶಿಕ್ಷಕ-ಶಿಕ್ಷಕಿಯರು ಅನೇಕ ದೂರುಗಳನ್ನು ಕೃಷ್ಣರಾಯರ ಮುಂದೆ ಹೇಳಿದ್ದರೂ, ಅವುಗಳ ಉಪೇಕ್ಷೆಯಾಗಿರುವದೆಂಬ ಮಾತು ಸತ್ಯವೆ?

ಸದ್ಯಕ್ಕೆ ರಾಧಾದೇವಿಯವರ ಪತಿಯು ಶಿಕ್ಷಕನಿರುವನು. ಅವನ ಶಿಕ್ಷಣವು ಎಲ್ಲಿಯವರೆಗೆ ಆಗಿದೆ? ಶಿಕ್ಷಕ ಕೆಲಸವನ್ನು ಮಾಡುವಷ್ಟು ಶಿಕ್ಷಣವಾದರೂ ಅವನಿಗೆ ದೊರೆತಿರುವದೇ ಹೇಗೆ? ಅವನನ್ನು ಶಿಕ್ಷಕನನ್ನಾಗಿ ನಿಯಮಿಸಿದಮೇಲೆಯೆ ಆ ಶಾಲೆಯೊಳಗಿನ ಶಿಕ್ಷಕರಿಂದ ಅವನಿಗೆ ಓದು-ಬರೆಹದ ಮಟ್ಟಿಗೆ ಶಿಕ್ಷಣವು ಕೊಡಲ್ಪಟ್ಟಿತೆಂಬ ಮಾತು ನಿಜವೇ ಹೇಗೆ?

ಕೊಲೆ ಮಾಡಲು ಯತ್ನಿಸಿದ ಸಂಶಯದಿಂದ ಹಿಡಿಯಲ್ಪಟ್ಟ ಸುರೇಂದ್ರರಾಯ-ರಮಾದೇವಿ ಇವರ ಸಂಬಂಧವಾಗಿ ರಾಧಾದೇವಿ-ಕೃಷ್ಣರಾಯರ ವ್ಯಕ್ತಿದ್ವೇಷವಿರುವದೆಂಬ ವಿಷಯವು ತಿಳಿದಿದೆ. ಈ ಸಂಗತಿಯು ನಿಜವೆ?

ಈ ಪ್ರಶ್ನೆಗಳ ಉತ್ತರವನ್ನು ರಾವಸಾಹೇಬ ಕೃಷ್ಣರಾಯರು ಕೊಡಬೇಕು. ಅನಂತರದಲ್ಲಿ ಮುಂದಿನ ಪ್ರಶ್ನೆಗಳನ್ನು ಕೇಳುವೆವು. ನಮಗೆ ಸಬಲ ಕಾರಣಗಳು ದೊರೆತಿರುವದರಿಂದಲೇ ಅವರನ್ನು ಈ ವಿಷಯಗಳ ಬಗ್ಗೆ ವಿಚಾರಿಸಿರುವೆವು.

ಕೃಷ್ಣರಾಯರಆಡಳಿತದಲ್ಲಿವಿಜಯನಗರಸಂಸ್ಥಾನದಶಿಕ್ಷಣಸಂಸ್ಥೆಯು ಕೇವಲವ್ಯಭಿಚಾರದಶಾಲೆಯಾಗಿರುವದು. ಪರಮಪವಿತ್ರವಾದಸಂಸ್ಥೆಯನ್ನು

ಅಪವಿತ್ರಗೊಳಿಸಿದ ಬಗ್ಗೆ ನಂದನವನವನ್ನು ನರಕಲೋಕವನ್ನಾಗಿ ಮಾಡಿದ ಬಗ್ಗೆ-ಯಾರಾದರೂ ದೋಷಿಗಳಿದ್ದರೆ ಆ ದೋಷಿಗಳು ಕೃಷ್ಣರಾಯ-ರಾಧಾದೇವಿಯವರೇ ಎಂದು ನಿರ್ಬಾಧವಾಗಿ ಹೇಳಬಹುದು. ಹೀಗಿದ್ದರೂ ರಾಧಾದೇವಿಯವರ ಮೇಲೆ ಅತ್ಯಾಚಾರ ಮಾಡಲ್ಪಟ್ಟಬಗ್ಗೆ ನಾವು ಅತ್ಯಾಚಾರಿಯ ನಿಷೇಧ ಮಾಡುವೆವು; ಆದರೆ ಈ ಪ್ರಕರಣದಲ್ಲಿ ಅತ್ಯಾಚಾರಕ್ಕಿಂತ ಅತ್ಯಾಚಾರದ ಉದ್ದೇಶಕ್ಕೇ ಬಹಳ ಮಹತ್ವವಿರುವದು. ಅಸೀತಿಯ ಶೃಂಗಾರ ಲಾಲಸೆಯಿಂದ ಅಥವಾ ಸಂಪತ್ತಿನ ಆಶೆಯಿಂದ ಅತ್ಯಾಚಾರ ಮಾಡಿದ್ದರೆ, ಅಪರಾಧಿಯನ್ನು ಹಿಡಿದು ಸೆರೆಯಲ್ಲಿರಿಸುವದರಿಂದ ಕಾರ್ಯಭಾಗವಾಗಬಹುದು. ತಮ್ಮ ಹೆಂಡಿರ ಮೇಲೆಯೂ ಹೆಣ್ಣುಮಕ್ಕಳ ಮೇಲೆಯೂ ಅತ್ಯಾಚಾರಗಳು ಮಾಡಲ್ಪಡುತ್ತಿದ್ದು, ಅತ್ಯಾಚಾರಗಳಿಗೆ ಕಾರಣರು ರಾಧಾದೇವಿ ಕೃಷ್ಣರಾಯರಾಗಿದ್ದರೆ, ಕೊಲೆಯ ಪ್ರಯತ್ನದಲ್ಲಿ ತೊಡಗಿದ ಅಪರಾಧಿಯನ್ನು ಹಿಡಿದು ಆ ಅತ್ಯಾಚಾರದ ಮಟ್ಟಿಗೆ ಶಾಸನವಾದರೆ ಕಾರ್ಯಭಾಗವಾಗುವದಿಲ್ಲ. ಎಲ್ಲ ಪ್ರಕರಣದ ಶೋಧನೆಗಾಗಿ ಸರಕಾರವು ಒಂದು ಸ್ವತಂತ್ರ ನ್ಯಾಯ ಕಮೀಟಿಯನ್ನು ನಿಯಮಿಸಿದರೆ ಸಂಸ್ಥಾನದ ನಿಜವಾದ ಕಲ್ಯಾಣವಾಗುವದು.

ಈ ಲೇಖನವನ್ನೋದಿದ ಬಳಿಕಂತು ಕೃಷ್ಣರಾಯರು ದಿಙ್ಮೂಢರಾದರು ಎಷ್ಟುಗುಪ್ತ ವ್ಯವಹಾರವಿಟ್ಟಿದ್ದರೂ, ಅದು ಜನರ ಕಾಕದೃಷ್ಟಿಗೆ ಬೀಳದೆ ಇರಲಿಲ್ಲವೆಂಬದನ್ನು ಯೋಚಿಸಿ ಅವರು ಮುಂಗಾಣದಾಗಿದ್ದರು. ಮುಂದೆ ಮೈತುಂಬ ಕಣ್ಣಿಟ್ಟುಕೆಲಸಮಾಡುತ್ತಿರಬೇಕೆಂಬದನ್ನು ಜನರು ಕಲಿಸಿದಂತಾಯಿತೆಂದು ಅವರು ಸಮಾಧಾನ ಹಚ್ಚಿಕೊಂಡರು; ಆದರೂ ಅವರ ಮನಸ್ಸು ಆಗ ತಕ್ಕಷ್ಟು ಶಾಂತವಾಗಲಿಲ್ಲ. ಅದಕ್ಕೆ ಬೇರೊಂದು ಪ್ರಬಲವಾದ ಕಾರಣವಿತ್ತು ಆ ಕಾರಣವೆಂದರೆ, ರಾಧಾದೇವಿಗೆ ಪುತ್ರಸಂತಾನವಾದದ್ದೇ ಕಾರಣವು. ಅವಳಿಗೆ ಸಂತಾನವಾಗಬಾರದೆಂದೂ, ಒಂದು ವೇಳೆ ಗರ್ಭಿಣಿಯಾದರೆ ಗರ್ಭನಾಶವಾಗಬೇಕೆಂದೂ, ಗರ್ಭನಾಶವಾಗದಿದ್ದರೆ ಹುಟ್ಟಿದ ಕೂಡಲೆ ಶಿಶುವು ಮರಣ ಹೊಂದಬೇಕೆಂದೂ ಕೃಷ್ಣರಾಯರ ಮಾನಸವಿತ್ತು. ಕಡೆಗೆ ಯಾವ ಔಷಧಕ್ಕೂ ಅಣಿಯದೆ ಶಿಶುವು ಅವತರಿಸಿಯೇ ಬಿಟ್ಟಿತು! ಆ ಶಿಶುವು ಕೃಷ್ಣರಾಯರನ್ನು ಅಚ್ಚಳಿಯದೆ ಹೋಲುತ್ತಿದ್ದುದಲ್ಲದೆ, ಅವರ ಕೆಲವು ಗುರತುಗಳನ್ನು ಅದು ಒಳಗೊಂಡಿತ್ತು. ಕೃಷ್ಣರಾಯರ ಬಲಗೈಯಲ್ಲಿ ಆರು ಬೆರಳುಗಳಿದ್ದವು. ಎಡಪಾದದ ಮೇಲೆ ಮತ್ಸ್ಯಾಕೃತಿಯ ಕಲೆಯಿತ್ತು. ಅದರಂತೆ ರಾಧಾದೇವಿಯ ಕುಮಾರನ ಬಲಗೈಯಲ್ಲೂ ಆರು ಬೆರಳುಗಳಿದ್ದು, ಎಡಪಾದದ ಮೇಲೆ ಮತ್ಸ್ಯವಿತ್ತು. ನೋಡಿದವರಿಗೆ ಈ ಶಿಶುವು ಕೃಷ್ಣರಾಯರದೇ ಎಂದು

ಬಡಿದು ಕಾಣುವಂತಿದ್ದುದರಿಂದ ಅವರು ಅಸಮಾಧಾನಗೊಂಡಿದ್ದರು. ಹಾಗಲ್ಲದಿದ್ದರೆ ಬೇರೆ ಜಾತಿಗೋತ್ರದ ರಾಧಾದೇವಿಗೆ ಕುಮಾರನು ಜನಿಸಿದ್ದಕ್ಕೆ ಕೃಷ್ಣರಾಯರಿಗೆ ಅಷ್ಟೇಕೆ ದುಃಖವಾಗಬೇಕು? ಶಿಕ್ಷಣ ಸಂಸ್ಥೆಯೊಳಗಿನ ಎಷ್ಟೋ ಶಿಕ್ಷಕ-ಶಿಕ್ಷಕಿಯರ ಸಂತಾನ ಲಾಭ ಹೊಂದಿದ್ದರೂ, ಅವರಿಗೆ ಹರ್ಷ-ವಿಷಾದಗಳೆನಿಸಿದ್ದಿಲ್ಲ ರಾಧಾದೇವಿಯ ಕುಮಾರನೇನೂ ಕೃಷ್ಣರಾಯರ ಔರಸ ಸಂತತಿಯುವನೆಂದು ಬಾಧ್ಯತೆ ಸಾಧಿಸಲಿಕ್ಕೆ ಬರುವನೆಂಬಂತಿದ್ದಿಲ್ಲ. ಹೀಗಿದ್ದರೂ ಅವರ ದುಃಖಕ್ಕೆ ಕಾರಣವೆಂದರೆ ತಮ್ಮಲ್ಲಿಯ ಚಿಹ್ನಗಳು ಆ ಹುಡುಗನಲ್ಲಿ ಒಡೆದು ಮೂಡಿದ್ದೇ ಆಗಿತ್ತು. ಸೆರಮನೆಯಲ್ಲಿ ಜನಿಸಿದ ದೇವಕೀ ನಂದನನು ಕಂಸನನ್ನು ಕೊಂದಂತೆ, ರುಗ್ಣಾಲಯದಲ್ಲಿ ಜನಿಸಿದ ರಾಧಾನಂದನನು ಕೃಷ್ಣವಧೆ ಮಾಡಲಿಕ್ಕೆಕಾರಣೀಭೂತನಾದಾನೆಂಬ ಭಯವು ಅವರಿಗಿರದಿದ್ದರೂ, ಕುಚೋದ್ಯ ಜನರು ಕುಚೇಷ್ಟೆ ಮಾಡಲಿಕ್ಕೆ ಸಾಧನವಾಯಿತೆಂದೇ ಅವರು ಅಸಮಾಧಾನಗೊಂಡಿದ್ದರು.

ರಾಧಾದೇವಿಯ ಮಗನ ಕಾಲಗುಣವು ಎಂಥಹದಿತ್ತೋ ತಿಳಿಯದು! ಅವನು ಜನ್ಮಿಸುವಾಗ ತಾಯಿಯನ್ನು ವಿಪತ್ತಿಗೀಡು ಮಾಡಿಯೇ ಜನಿಸಿದ್ದನು. ಎಷ್ಟೋ ಜನರನ್ನು ಸೆರೆಮನೆಗೆ ಕಳಿಸಿದ್ದನು. ತಂದೆಯಾದ ಅಡವೀರಾಯನಂತು ಒಂದೇಸವನೆ ತಳಮಳಿಸತೊಡಗಿದ್ದನು. ಪರಕೀಯರೆನಿಸಿಕೊಳ್ಳುತ್ತಿದ್ದ ಕೃಷ್ಣರಾಯರಂತಹ ಜನರ ಹೃದಯಗಳನ್ನೂ ಅವನು ಅಲುಕಿಸಹತ್ತಿದ್ದನು. ಮಗುವು ಜೀವಂತವಾಗಿ ಜನಿಸಿದ್ದರಿಂದ ರಾಧಾದೇವಿಗೆ ಪುತ್ರದುಃಖಕ್ಕಿಂತಲೂ ಒಲಿದಾದ ದುಃಖವಾಗಿತ್ತು. ಸತ್ತು ಹುಟ್ಟಿದ್ದರೆ ಕೆಟ್ಟದ್ದೇನಾಗುತ್ತಿತ್ತೆಂದು ಅವಳು ಚಡಪಡಿಸತೊಡಗಿದ್ದಳು. ಜೀವದ ಮೇಲಿನ ಪ್ರಸಂಗದಿಂದ ತನ್ನ ಮಗನು ಸುಖರೂಪವಾಗುಳಿದನೆಂದು ಅವಳು ದೇವರನ್ನು ಅನನ್ಯಭಾವದಿಂದ ಸ್ಮರಿಸಬೇಕಾಗಿತ್ತು; ಆದರೆ ತನಗೊದಗಿದ ಮಾತೃಪದದಿಂದ ಅವಳಿಗೆ ಮರಣಸದೃಶವಾದ ವ್ಯಥೆಯಾಗಿತ್ತು. ಈ ಸಂಗತಿಯು ಮಾತೃಹೃದಯಕ್ಕೆ ಶೋಭಿಸುವಂತಹದಲ್ಲವೇನೋ ನಿಜವು; ಆದರೆ ಅಂತಸ್ಥ ಕಾರಣವು ಬೇರೆಯವರಿಗೆ ಒಮ್ಮೆಲೆ ಹೇಗೆ ಗೊತ್ತಾಗಬೇಕು? ಅದು ಅವರಿಗೇ ಗೊತ್ತು! ರಾಧಾದೇವಿಯ ಕರಿಗಾಲ ಮಗನ ತಂದೆಯೆನಿಸಿಕೊಳ್ಳುತ್ತಿದ್ದ ಅಡವೀರಾಯನಿಗಂತೂ ಪುತ್ರಜನನದಿಂದ ಅಡವಿಯನ್ನು ಸೇರಲೋ, ಹೊಳೆ-ಕೆರೆಗಳ ಪಾಲಾಗಲೋ ಎಂಬಂತಾಗಿತ್ತು!

ಕೃಷ್ಣರಾಯರು ಜನಾಪವಾದದ ಕಡೆಗೆ ಅಷ್ಟೊಂದು ಲಕ್ಷ್ಯಗೊಡುವಂತಹರಿರದಿದ್ದರೂ, ಸರಕಾರದಲ್ಲಿ ತಮ್ಮ ಹೆಸರು ಕೆಡಬಾರದೆಂದು ಜಾಗ್ರತೆ

ಗೊಳ್ಳುತ್ತಿದ್ದರು. ಚಂಪಾವತಿಯ ಮನೆಯಲ್ಲಿ ಜಪ್ತಿಯಲ್ಲಿ ದೊರೆತ ಒಡವೆಗಳಿಂದ ತಮ್ಮ ಸ್ವಚ್ಛವಾದ ಹೆಸರಿನ ಮೇಲೆ ರಾಡಿಹನಿಗಳು ಸಿಡಿಯುವವೆಂದು ಅವರು ಅಂಜಿದ್ದರು. ಬದ್ರುದ್ದೀನಖಾನನ ಹಾಗು ಅವನ ಮುಖಾಂತರ ಪೋಲೀಸ ಇನಸ್ಪೆಕ್ಟರರ ಮನಸ್ಸನ್ನು ಸಂತೋಷಪಡಿಸಲಿಕ್ಕೆ ಹವಣಿಸುವದೇ ಅವರಿಗೆ ಆದ್ಯ ಕರ್ತವ್ಯವೆನಿಸಿತ್ತು. ಅವರು ಕೈಯಲ್ಲಿ ಹಿಡಿದ ವರ್ತಮಾನ ಪತ್ರಗಳನ್ನು ಅಲ್ಲಿಯೇ ಚಲ್ಲಿ, ಮೋಟರಿನಲ್ಲಿ ಕುಳಿತು ಬದ್ರುದ್ದೀನಖಾನನ ಮನೆಯನ್ನು ಸೇರಿದರು.

ಶಾಲೆಯ ವ್ಯವಸಾಯಕ್ಕೆ ಸಂಬಂಧವಿಲ್ಲದ ವ್ಯವಸಾಯದವನ ಮನೆಗೆ ಶಾಲೆಯ ಸಾಹೇಬರ ಆಗಮನದ ಉದ್ದೇಶವು ತಿಳಿಯಲಿಕ್ಕೆ ಬದ್ರುದ್ದೀನಖಾನನಿಗೆ ಬಹಳ ವೇಳೆ ಹಿಡಿಯಲಿಲ್ಲ. ಅವನು ಸಾಹೇಬರನ್ನು ಸನ್ಮಾನಿಸಿ ಕುಳ್ಳಿರಿಸಿಕೊಂಡು—'ರಾವಸಾಹೇಬರೆ, ಇದೇನು? ಬಡವರ ಮನೆಗೆ ಭಾಗ್ಯದೇವತೆಯ ಆಗಮನವಾದಂತಾಯಿತು!' ಎಂದು ಕೇಳಿದನು.

'ಕೊತವಾಲ ಸಾಹೇಬರೆ!' ಕೃಷ್ಣರಾಯರು ನಿಸ್ಪೃಹತೆಯನ್ನು ತೋರಿಸುತ್ತ—'ನಾವೂ ನೀವೂ ಒಂದೇ ರಾಜ್ಯದೊಳಗಿನ ನೌಕರರಿರುವೆವು. ಇದರಲ್ಲಿ ಯಾರ ಭಾಗ್ಯದ ಹೆಚ್ಚಳವೇನು; ಯಾರ ಭಾಗ್ಯದ ಕನಿಷ್ಠತೆಯೇನು? ನಾವೂ ನೀವೂ ಸಮಸಮಾನಸ್ಕಂಧರು. ಕೆಲಸವೊದಗಿದಾಗ ಒಬ್ಬರ ಮನೆಗೆ ಒಬ್ಬರು ಬರಲಿಕ್ಕೇ ಬೇಕು'

'ಛೇ! ನಾವೂ ನೀವೂ ಸಮಾನಸ್ಕಂಧರು ಅಲ್ಲವೇ ಅಲ್ಲ. ಪರಮ ಪವಿತ್ರವಾದ ಶಿಕ್ಷಣಸಂಸ್ಥೆಯಲ್ಲಿ ಕೆಲಸ ಮಾಡುವ ನಿಮ್ಮ ಯೋಗ್ಯತೆಯು ನಮಗೆ ಹೇಗೆ ಬಂದೀತು! ಶಿಕ್ಷಣಸಂಸ್ಥೆಯೆಂದರೆ ಪ್ರಪಂಚವನ್ನೇ ಸನ್ಮಾರ್ಗಕ್ಕೆ ಹಚ್ಚುವಂತಹದಾಗಿದೆ. ನಿಮ್ಮ ಸಂಸ್ಥೆಯು ಪುಣ್ಯಮಯವಾದದ್ದು; ನಮ್ಮ ಸಂಸ್ಥೆಯು ಪಾಪಪೂರಿತವಾದದ್ದು' ಎಂದು ಬದ್ರುದ್ದೀನಖಾನನು ಬೇಕೆಂದೇ ಚುಚ್ಚಿ ಮಾತಾಡಿದನು.

'ಆ ಮಾತಿರಲಿ. ಕೊತವಾಲ ಸಾಹೇಬರೆ, ನಾನು ಒಂದು ಮಹತ್ವದ ಕಾರ್ಯಕ್ಕಾಗಿ ನಿಮ್ಮ ಬಳಿಗೆ ಬಂದಿರುವೆನು.'

'ಅದೇನು?" ಉತ್ಕಂಠತೆಯಿಂದ ಕೊತವಾಲನು ಕೇಳಿದನು.

'ಸದ್ಯಕ್ಕೆ ಉರ್ದು ಕನ್ಯಾಶಾಲೆಗಳ ಮೇಲೆ ಸ್ವತಂತ್ರ ಸ್ತ್ರೀ ಪರೀಕ್ಷಕರಿಲ್ಲದ್ದರಿಂದ ಆ ಸ್ಥಾನದಲ್ಲಿ ನಿಮ್ಮ ಭಗಿನಿಯವರಾದ ಸೋಫಿಯಾ ಬೇಗಮರನ್ನು ನಿಯಮಿಸಬೇಕೆಂದು ಯೋಚಿಸಿರುವೆನು. ಕೆಲಸ ಮಾಡಿಸಲಿಕೆ ನೀವು ಸಿದ್ಧರಾದರೆ, ಮಾಡಲಿಕ್ಕೆ ಅವರು ಇಚ್ಛಿಸುತ್ತಿದ್ದರೆ, ಹೇಳಿರಿ. ನಾನು

ಅವರ ಹೆಸರನಿಂದ ಇಂದೇ ಆಜ್ಞಾಪತ್ರ ಕಳುಹಿಸುವೆನು.

ಸಾಹೇಬರ ವರದ ವಾಣಿಯನ್ನು ಕೇಳಿ ಬದ್ರುದ್ದೀನ ಸಾಹೇಬನಿಗೆ ಅತ್ಯಾನಂದವಾಯಿತು. ಒಂದೇ ಒಂದು ಮಾತಿನಲ್ಲಿ ಅವನ ಹಿಂದಿನ ಸಿಟ್ಟು ಮರೆತು ಹೋಯಿತು. ಸಾಹೇಬರ ಮೂರ್ತಿಯು ಎಷ್ಟು ಕಲಂಕಿತವಾಗಿ ಈ ಮೊದಲು ಕಾಣುತ್ತಿತ್ತೋ, ಅದು ಈಗ ಅವನಿಗೆ ಸ್ವಚ್ಛವಾದ ಮುತ್ತಿನಂತೆ ಕಾಣಹತ್ತಿತು. ಆಗ ಅವನು ಹರ್ಷಾವೇಶದಿಂದ-'ಸಾಹೇಬರೇ, ನಿಮ್ಮ ಘನವಂತಿಕೆಗೆ ಎಣೆಯಿಲ್ಲ; ಎಣೆಯಿಲ್ಲ. ನೀವು ಬಹು ಅಭಿಮಾನಿಗಳು. ಹಿಂದೆ ನಿಮ್ಮ ಸಂಸ್ಥೆಯಲ್ಲಿ ನೌಕರಿ ಮಾಡಿದವಳೆಂಬ ಅಭಿಮಾನದಿಂದ ನೀವು ನಮ್ಮ ಸೋಫಿಯಳನ್ನೇ ಪರೀಕ್ಷಕಳನ್ನಾಗಿ ನಿಯಮಿಸುವ ಯೋಚನೆ ಮಾಡಿರುವಿರಿ. ಸ್ತುತ್ಯವು, ನಿಮ್ಮ ಉದ್ದೇಶವು ಪರಮ ಸ್ತುತ್ಯವು. ಕ್ಷುದ್ರ ಜನರು ನಿರರ್ಥಕವಾಗಿ ನಿಮ್ಮ ಹೆಸರಿನಿಂದ ಹರಲೆ ಮಾಡುತ್ತಾರೆ. ನಿಮ್ಮಲ್ಲಿಯ ಸಹಜ ಸಿದ್ಧವಾದ ಸ್ತ್ರೀದಾಕ್ಷಿಣ್ಯವನ್ನೂ, ಸ್ತ್ರೀ ಶಿಕ್ಷಣದ ಪ್ರೋತ್ಸಾಹನೆಗಾಗಿ ನೆಲೆಗೊಂಡ ಸದ್ಬುದ್ಧಿಯನ್ನೂ ಅವರೇನು ಬಲ್ಲರು? ಇನ್ನೊಂದು ಸೂಕ್ಷ್ಮ ವಿಷಯವಾಗಿ ನಿಮಗೆ ಹೇಳುವದೇನಂದರೆ, ನಮ್ಮ ಸೋಫಿಯಳು ಕುಲಯುವತಿಯಿರುವಳು. ಕುಲಕಾಮಿನಿಯರ ಶೀಲಕ್ಕೆ ಭಂಗವುಂಟಾಗದಂತೆ ಸಂಸ್ಥೆಯಲ್ಲಿ ವ್ಯವಸ್ಥೆಯಿದ್ದರೆ, ನಾನು ಅವಳನ್ನು ನೌಕರಿಗೆ ಹಚ್ಚುವೆನು. ಉಳಿದ ದೇವಿಗಳ ಉಸಾಬರಿಯು ನನಗೆ ಬೇಕಾಗಿಲ್ಲ. ಸೋಫಿಯಳ ಶೀಲಕ್ಕೂ ಗೌರವಕ್ಕೂ ಬಾಧೆ ಬರದಿದ್ದರಾಯಿತು.'

'ನೀವು ಚಿಂತೆ ಬಿಡಿರಿ. ನಾನಿದ್ದೇನೆ. ಶಿಕ್ಷಣ ಸಂಸ್ಥೆಯಲ್ಲಿ ನನ್ನ ಮನಸ್ಸಿನವಿರುದ್ಧವಾಗಿ ನಡೆಯುವಂತಹ ಎದೆಯೂ ಅಧಿಕಾರವೂ ಯಾವನಿಗೂ ಇಲ್ಲ. ಹಿಂದಿನ ಘಟನೆಗಳನ್ನು ನೀವು ಮನಸ್ಸಿನಲ್ಲಿ ಹಿಡಿಯಬಾರದು. ಎಂಥ ಎಂಥವರೋ ಒಮ್ಮೊಮ್ಮೆ ಜಾರುವದುಂಟು. ಒಮ್ಮೆ ಘಟಿಸಿದ ದುಷ್ಕೃತ್ಯಕ್ಕಾಗಿ ಪಶ್ಚಾತ್ತಾಪ ಪಡುವ ಸಮಯದಲ್ಲಿ ಎಂಥವನಿಂದಲೂ ಮತ್ತೊಮ್ಮೆ ಅಂಥ ಕೃತ್ಯಗಳು ಘಟಿಸಲಾರವು.' ಎಂದು ಕೃಷ್ಣರಾಯರು ಕೊತವಾಲನ ಸಾಶಂಕಿತ ಮನಸ್ಸನ್ನು ಸಮಾಧಾನಪಡಿಸಿದರು.

ಸಂತುಷ್ಟನಾದ ಬದ್ರುದ್ದೀನಖಾನನು ಕೃಷ್ಣರಾಯರನ್ನು ಕುರಿತು:—
'ರಾವಸಾಹೇಬರೆ, ರಾಧಾದೇವಿಯ ಪ್ರಕರಣದಲ್ಲಿ ನಿಮ್ಮಸಂಬಂಧವಿರುವಂತೆ ಕೆಲವು ಘಟನೆಗಳು ಉಪಸ್ಥಿತವಾಗಿವೆ.'

'ಕೊತವಾಲ ಸಾಹೇಬರೆ, ಆ ಘಟನೆಗಳಿಂದ ನಾನೇ ಕೊಲೆಗಡಕನೆಂದು ಸಿದ್ಧವಾಗುವದಿಲ್ಲವಷ್ಟೆ?'

“ಛೇ! ಹಾಗೇನೂ ಇಲ್ಲ. ನಿಮ್ಮ ನಿರ್ಮಲ ಕೀರ್ತಿಗೆ ಮತ್ತಿಷ್ಟು ಕಲಂಕ ಹತ್ತುವದಲ್ಲದೆ ಮತ್ತೇನೂ ಆಗುವದಿಲ್ಲ.”

‘ಜನವೋ-ದನವೋ! ಒಬ್ಬರು ಬೊಗಳುತ್ತಾರೆಂದು ಎಲ್ಲರೂ ಬೊಗಳುತ್ತಾರೆ ವೃತ್ತಪತ್ರಿಕಾಕರ್ತರು ಬೊಗಳುವ ನಾಯಿಗಳಿಗೆ ಉತ್ಸಾಹ ಕೊಡುತ್ತಾರೆ. ನಾನು ಅವರ ಕೂಗಿಗೆ ಬೆದರುವದಿಲ್ಲ. ಆದರೂ ಜಾಗ್ರತೆಯಿಂದಿರುವದು ನೆಟ್ಟಗೆ. ನೀವು ಜಪ್ತಿಯಲ್ಲಿ ಒಣಗಿದ ಹುಲ್ಲಿನೊಡನೆ ಹಸೀ ಹುಲ್ಲಿಗೂ ಬೆಂಕಿ ಹಚ್ಚುವಂತಹ ಕೃತ್ಯ ಮಾಡಿರುವಿರಿ. ನಾವೂ ನೀವೂ ಸರಕಾರೀ ನೌಕರರು. ಒಬ್ಬರ ಅಭಿಮಾನವು ಮತ್ತೊಬ್ಬರಿಗೆ ಇರದಿದ್ದರೆ ಹೇಗೆ? ಆ ವಸ್ತುಗಳಿಂದ ಏನೂ ನಿಷ್ಪನ್ನವಾಗದಿದ್ದರೂ, ಕೊಲೆಯಂತಹ ಪ್ರಕರಣಗಳಲ್ಲಿ ನನ್ನ ಹೆಸರು ಮುಂದೆ ಬರುವದು ಒಳಿತಲ್ಲವೆಂದು ನನ್ನ ಗ್ರಹಿಕೆ. ಜನಾಪವಾದಕ್ಕೆ ನಾನು ಬಹಳೇ ಅಂಜುವೆನು. ನನ್ನ ವಿರುದ್ಧವಾದ ಜನರು ವಿಜಯನಗರ ರಾಜಧಾನಿಯಲ್ಲಿ ಅಲ್ಪಸ್ವಲ್ಪಾಗಿರುವದಿಲ್ಲ.’

ಕೃಷ್ಣರಾಯರ ವಶೀಲಿಗಾಗಿಯೇ ಬಂದಿರುವರೆಂಬದನ್ನು ಬದ್ರುದ್ದೀನ ಖಾನನು ಮೊದಲೇ ಕಂಡುಹಿಡಿದಿದ್ದನು. ಅವರಿಗೆ ಕೈಯಿಂದಾದಷ್ಟು ಉಪಕಾರ ಮಾಡಿದರೆ ತನ್ನ ತಂಗಿಗೆ ಪರೀಕ್ಷಕಿಯ ಅಧಿಕಾರವು ಸ್ಥಿರವಾಗುವದೆಂದು ಅವನು ಬಗೆದನು. ಆಗ ಅವನು—“ರಾವಸಾಹೇಬರೇ, ನೀವು ನಿಶ್ಚಿಂತೆಯಿಂದಿರ್ರಿ. ನಿಮ್ಮ ಮರ್ಯಾದೆ ಬೇರೆಯಲ್ಲ, ನನ್ನ ಮರ್ಯಾದೆ ಬೇರೆಯಲ್ಲ. ನೀವು ಇನ್ನೊಂದು ಕೆಲಸ ಮಾಡಿದರೆ, ನಿಮ್ಮ ಹೆಸರು ಬೈಲಿಗೆ ಬೀಳುವದಿಲ್ಲ.”

“ಏನು ಕೆಲಸ ಮಾಡಬೇಕೆನ್ನುವಿರಿ?”

‘ಸದ್ಯಕ್ಕೆ ನನ್ನೊಬ್ಬನಿಂದಲೇ ಎಲ್ಲ ಕೆಲಸ ನೀಗುವಂತಿಲ್ಲ. ಪ್ರಕರಣವು ಇನಸ್ಪೆಕ್ಟರ ಸಾಹೇಬರ ಕೈಸೇರಿರುವದರಿಂದ ಅವರನ್ನು ಸಂತುಷ್ಟಗೊಳಿಸಬೇಕಾಗುವದು. ನಾನೂ ಆದಷ್ಟು ಪ್ರಯತ್ನ ಮಾಡುವೆನು. ನೀವು ಒಂದು ಕೆಲಸ ಮಾಡಿದರೆ ಇನಸ್ಪೆಕ್ಟರ ಸಾಹೇಬರಾದರೂ ನಿಮ್ಮ ಕೈಯೊಳಗಿನ ಸೂತ್ರದ ಗೊಂಬೆಯಂತಾಗುವರು. ಆ ಕೆಲಸವು ನಿಮಗೇನೂ ದೊಡ್ಡದಲ್ಲ. ಇನಸ್ಪೆಕ್ಟರ ಸಾಹೇಬರು ಸ್ತ್ರೈಣರಿರುವದರಿಂದ, ಬಳೆಗಳ ಸಪ್ಪಳಕ್ಕೆ ಮನ ಸೋಲುವರು. ನಿಮ್ಮ ಶಿಕ್ಷಣಸಂಸ್ಥೆಯಲ್ಲಿ ನೀವು ಎಷ್ಟೋ ರೂಪವತಿಯರನ್ನು ತುಂಬಿರುವಿರಿ. ಅವರಲ್ಲಿ ಒಬ್ಬ ಲಲನಾಮಣಿಯನ್ನು ಸಾಹೇಬರ ಉಡಿಯಲ್ಲಿ ಹಾಕಿದರೆ ತೀರಿತು. ನಿಮ್ಮ ಕೆಲಸ ಮನಸ್ಸಿನಂತೆ ಆಗಿಯೇ ತೀರುವದು!’

'ಇದೇನೂ ದೊಡ್ಡ ವಿಷಯವಲ್ಲ. ನನ್ನ ಬಲಗೈಯಂತಿದ್ದ ರಾಧಾ ದೇವಿಯು ಇಷ್ಟರಲ್ಲಿ ಗುಣವಾಗಿದ್ದರೆ ಒಬ್ಬಳನ್ನೇ ಏಕೆ, ಹೆಣ್ಣುಗಳ ಸರವನ್ನೇ ಮಾಡಿ ನಿಮ್ಮ ಸಾಹೇಬರ ಕೊರಳಲ್ಲಿ ಕಟ್ಟುತ್ತಿದ್ದೆನು; ಆದರೂ ಚಿಂತೆಯಿಲ್ಲ. ಒಬ್ಬಿಬ್ಬರ ಸಲುವಾಗಿ ನನಗೆ ಯೋಚನೆಯಿಲ್ಲ. ಇಂತಹ ಸೂಕ್ಷ್ಮ ಪ್ರಸಂಗ ದಲ್ಲಿ ಉಪಯೋಗ ಬೀಳಬೇಕೆಂಬ ಉದ್ದೇಶದಿಂದ ದೇಹವಿಕ್ರಯದ ಕಾರ್ಯ ವನ್ನು ಪ್ರಕಟವಾಗಿ ಮಾಡುವ ಎಷ್ಟೋ ಸ್ತ್ರೀಯರನ್ನು ನಾನು ಎಂದೋ ಸ್ಕೂಲ ಮಿಸ್ಟ್ರೆಸ್ಸರನ್ನಾಗಿ ಮಾಡಿಟ್ಟಿರುವೆನು. ಕುಲಕಾಮಿನಿಯರೆಂದು ಮೊದ ಮೊದಲು ಜಂಭ ಬಡಿಯುತ್ತಿದ್ದ ಯುವತಿಯರಾದರೂ ಈಗ ನನ್ನ ಸೂತ್ರದ ಗೊಂಬೆಗಳಾಗಿರುವರು. ನಿಮ್ಮ ಹೇಳಿಕೆಯಂತೆ ನಾನು ಕೆಲಸ ಮಾಡುವೆನು. ನೀವು ಮಾತ್ರ ಪ್ರಾಮಾಣಿಕತನದಿಂದ ನನ್ನ ಸಲುವಾಗಿ ಪ್ರಯತ್ನಮಾಡಿರಿ.'

'ರಾವಸಾಹೇಬರೆ, ನೀವು ನಿಶ್ಚಿಂತರಾಗಿರಿ. ಎಷ್ಟು ಕೆಲಸ ಮಾಡುವದು ನನ್ನ ಕೈಯಲ್ಲಿರುವದೋ, ಅಷ್ಟು ಮಾಡಿಯೇ ತೀರುವೆನು,' ಎಂದು ಬದ್ರು ದ್ದೀನಖಾನನು ಎದೆಯ ಮೇಲೆ ಕೈಯಿಟ್ಟುಕೊಂಡು ನುಡಿದನು.

ಅನಂತರದಲ್ಲಿ ಕೃಷ್ಣರಾಯರು ಕೊತವಾಲನ ಅಪ್ಪಣೆ ಹೊಂದಿ ತಮ ಮಂದಿರಕ್ಕೆ ಹೋಗಿ ನಿಶ್ಚಿಂತೆಯಿಂದ ಮಲಗಿದರು.

---

## ಬಡತನದ ಬಾಳು.

"ಅಪ್ಪಾ!'

'ಯಾಕೆ ಮಗೂ?'

'ನನ್ನನ್ನು ಇಂತಹ ಕೆಟ್ಟ ಉದ್ಯೋಗದಲ್ಲಿ ಯಾಕೆ ತೊಡಗಿಸಿದಿರಿ?'

'ಕೆಟ್ಟ ಉದ್ಯೋಗವಲ್ಲ ಮಗೂ! ಒಳ್ಳೇ ಉದ್ಯೋಗಕ್ಕೇ ಹಚ್ಚಿರುವೆನು.

'ಒಳ್ಳೇ ಉದ್ಯೋಗವೆಂದು ಯಾರು ಅನ್ನುವರು?'

'ಜಗತ್ತೇ ಅನ್ನುವದು.'

'ನಾನು ಯಾರ ಬಾಯಿಂದಲೂ ಕೇಳಿಲ್ಲ. ಎಲ್ಲರೂ ಕೆಟ್ಟ ಉದ್ಯೋಗ ವೆಂದೇ ಅನ್ನುತ್ತಿರುವರು. ಒಳ್ಳೇ ಉದ್ಯೋಗವೆಂದು ನೀವೊಬ್ಬರು ಮಾತ್ರ ಅಂದಿರಿ.'

'ಪರಮ ಪವಿತ್ರವಾದ ಉದ್ಯೋಗಕ್ಕೆ ಕೆಟ್ಟ ಉದ್ಯೋಗವೆಂದು ಅನ್ನ ಲಿಕ್ಕೆ ಯಾರ ನಾಲಿಗೆ ಎದ್ದೀತಮ್ಮಾ?'

'ಒಳ್ಳೇ ಉದ್ಯೋಗವಾದರೆ ಅದನ್ನು ಕೈಕೊಳ್ಳಲಿಕ್ಕೆ ನನ್ನ ಮನಸ್ಸಾಗ ಲೊಲ್ಲದೇಕೆ?'

'ನನ್ನ ದುರ್ದೈವ! ಮತ್ತೇನು?'

ದಿವಾಕರರಾಯನು ಕ್ಷೀಣ ಕಂಠದಿಂದ ನುಡಿದನು. ಅವನ ಕಣ್ಣು ಗಳು ಅಶ್ರುಪೂರ್ಣವಾದವು. ತಂದೆಯ ಕ್ಷೀಣ ಕಾಯವು ಕ್ಲೇಶಪೂರ್ಣ ವಾದದ್ದನ್ನು ನೋಡಿ, ಉಷೆಯು ವ್ಯಾಕುಲಗೊಂಡಳು. ಆಗ ಅವಳು ತಂದೆ ಯನ್ನು ಸಮಾಧಾನಪಡಿಸುವದಕ್ಕಾಗಿ:—'ಅಪ್ಪಾ, ವ್ಯಥೆಗೊಳ್ಳಬೇಡಿರಿ. ನೀವನ್ನುತ್ತಿರುವಂತೆ ಶಿಕ್ಷಣವ್ಯವಸಾಯವು ಪವಿತ್ರವಾದದ್ದಿರುವದೆಂಬದನ್ನು ನಾನು ಅರಿಯದಿಲ್ಲ. ನಾನು ಆ ಉದ್ಯೋಗಕ್ಕೆ ಹೆಸರಿಡುವೆನೆಂದು ಭಾವಿಸ ಬೇಡಿರಿ; ಹಾಗು ಆ ವ್ಯವಸಾಯವನ್ನು ತ್ಯಜಿಸಲಿಚ್ಛಿಸಿರುವೆನೆಂದೂ ತಿಳಿಯ ಬೇಡಿರಿ. ಸದ್ಯದ ನಮ್ಮ ಹೀನ-ದೀನ ಪರಿಸ್ಥಿತಿಯಲ್ಲಿ ಕೈಗೆ ಬಂದ ವ್ಯವಸಾ ಯವನ್ನು ಬಿಟ್ಟುಕೊಟ್ಟರೆ, ನಾವು ಬಾಳುವದು ಕಠಿಣವಿದೆ; ಬೇನೆಯವರಾದ ನೀವು ಔಷಧ-ಪಥ್ಯಗಳನ್ನು ಕಾಣದೆ ಒಳಲಿ ಸಾಯುವ ಪ್ರಸಂಗವೊದಗು ವದು. ಇವೆಲ್ಲ ಭಾವೀ ದೃಶ್ಯಗಳನ್ನು ನೋಡಿಯೇ ನಾನು ನೌಕರಿಯನ್ನು ಸ್ವೀಕರಿಸಿದೆನು. ನೀವು ಚಿಂತಿಸಬೇಡಿರಿ. ನಾನು ವ್ಯವಸಾಯತ್ಯಾಗಮಾಡಿ ಆತ್ಮಘಾತ-ಪಿತೃಘಾತ ಮಾಡಲಿಕ್ಕೆ ಎಂದೂ ಹವಣಿಸಲಾರೆನು.'

'ಹೀಗನ್ನು ಮಗೂ!' ಎಂದು ದಿವಾಕರರಾಯನು ಬೇನೆಯ ವ್ಯಥೆ ಯಲ್ಲಿಯೆ ಆನಂದಬಟ್ಟು ನುಡಿದನು.

ಸದ್ಗುಣಿಯೂ, ಸುಶಿಕ್ಷಿತಳೂ, ಸುವಿಚಾರಿಯೂ ಆದ ಮಗಳ ಮುಖ ದಿಂದ ಶಿಕ್ಷಣವ್ಯವಸಾಯವು ಕೆಟ್ಟದ್ದೆಂದು ಮಾತು ಹೊರಡಲಿಕ್ಕೆ ಏನಾದ ರೊಂದು ಕಾರಣವು ಘಟಿಸಿರಬಹುದೇನೆಂದು ದಿವಾಕರರಾಯನು ಸಾಶಂಕ ಮನಸ್ಕನಾದನು. ಅವನು ಹಾಗೆ ಶಂಕಿತ ಮನಸ್ಕನಾಗಲಿಕ್ಕೆ ಕಾರಣಗಳೂ ಇದ್ದವು; ಯಾಕಂದರೆ, ಅವನು ಶಿಕ್ಷಣ ವ್ಯವಶಾಯದಲ್ಲಿ ತನ್ನ ಆಯುಷ್ಯದ ಬಹು ಭಾಗವನ್ನು ವ್ಯಯಗೊಳಿಸಿದ್ದರಿಂದ, ವಿಜಯನಗರದ ಶಿಕ್ಷಣಸಂಸ್ಥೆಯ ಛಾಯಾಚಿತ್ರವು ಅವನ ಕಣ್ಣೆದುರಿಗೆ ಕಟ್ಟಿದಂತಾಗಿತ್ತು. ಅದಕ್ಕಾಗಿಯೆ ಅವನು ಮಗಳ ಮಾತಿನ ಪರಿಷ್ಕಾರ ಮಾಡಬೇಕೆಂದು ಯೋಚಿಸಿದನು. ಅವನು ಮಗಳನ್ನು ಬಳಿಯಲ್ಲಿ ಕರೆದು, ವಾತ್ಸಲ್ಯದಿಂದ ಬೆನ್ನಮೇಲೆ ಕೈಯಾಡಿಸುತ್ತ- 'ಉಷೆ, ಶಿಕ್ಷಣವ್ಯವಸಾಯವು ಕೆಟ್ಟದ್ದೆಂದು ನೀನು ಯಾಕೆ ಅಂದೆ?'

ಉಷೆಯು ಸ್ವಲ್ಪ ವೇಳೆ ಯೋಚಿಸಿದಳು. ಕೃಷ್ಣರಾಯರ ವೃತ್ತಿಯ ಬಗ್ಗೆ ತಂದೆಗೆ ತಿಳಿಸಬೇಕೆಂಥು ಅವಳ ಮನಸ್ಸಿನಲ್ಲಿ ಹುಟ್ಟಿತು; ಆದರೆ ಆ ಕುತ್ಸಿತ ಪ್ರಕಾರವನ್ನು ಹೇಳಲಿಕ್ಕೆ ಅವಳ ನಾಲಿಗೆಯೇ ಏಳದಾಯಿತು. ಹೇಳ ದಿದ್ದರೆ ಗತ್ಯಂತರವಿದ್ದಿಲ್ಲ; ಆದ್ದರಿಂದ ಅವಳು ವಿದ್ಯಾಧಿಕಾರಿಗಳ ಹಾಗು ಅವರ

ಹಸ್ತಕರಾಗಿದ್ದ ಶಿಕ್ಷಕಿಯರ ವರ್ತನೆದ ಬಗ್ಗೆ ಸೂಕ್ಷ್ಮಪರಿಚಯ ಮಾಡಿಕೊಡ ಬೇಕೆಂದು ಯೋಚಿಸಿ—'ಅಪ್ಪಾ, ಸಾಹೇಬರು ಉತ್ತರ ವಯಸ್ಕರಿದ್ದು ಕುತ್ಸಿತ ಆಚಾರ-ವಿಚಾರಗಳುಳ್ಳವರಾಗಿರುವದನ್ನು ನೋಡಿ ಸಖೇದಾಶ್ಚರ್ಯ ವಾಗುವದು ನಿಜವಾಗಿ ವಿಚಾರಿಸಿದರೆ, ಅವರು ಶಿಕ್ಷಣಸಂಸ್ಥೆಯಲ್ಲಿ ಕೆಲಸ ಮಾಡಲಿಕ್ಕೆ ಪೂರಾ ಅಪಾತ್ರರಿರುವರು. ಅವರ ಶಿಷ್ಯತ್ವವನ್ನು ವಹಿಸಿದ ವನಿತೆ-ಕುಸುಮಾವತಿಯರಂತೂ 'ನಾ-ನಾ' ಅನ್ನುವ ವಾರಾಂಗನೆಯರನ್ನು ತಲೆಬಾಗಿಸುವಂತಹರಿರುವರು. ವನಿತೆಯಂತು ಪ್ರತ್ಯಕ್ಷ ವಾರವನಿತೆಯೆ ಆಗಿರುವಳು. ಕುಸುಮಾವತಿಯ ಒನಪು-ಒಯ್ಯಾರಗಳನ್ನು ನೋಡಿದರೆಅವಳೊಬ್ಬ ಕಲಾವತಿಯಂತೆ ಒಪ್ಪುತ್ತಿರುವಳು. ಸಾಹೇಬರು ತಮ್ಮ ವಿಲಾಸವೃತ್ತಿಗನು ಶೋಧವಾಗಿ ಕೆಲಸಗಾರರನ್ನು ನಿಯಮಿಸಿರುವರು. ಕೃಷ್ಣರಾಯರ ಹಾಗು ಅವರ ಶಿಷ್ಯತ್ವ ವಹಿಸಿದ ಶಿಕ್ಷಕಿಯರ ಕೈಯಲ್ಲಿ ಸಿಲುಕಿದರೆ, ಎಂತಹ ಕುಲ ವಧುಗಳ ಪಾವಿತ್ರ್ಯ-ಪಾತಿವ್ರತ್ಯಗಳಾದರೂ ವಿಧ್ವಂಸವಾಗುವವೆಂಬದರಲ್ಲಿ ಯಾವ ಪ್ರತ್ಯವಾಯವೂ ಇಲ್ಲ. ಶಿಕ್ಷಣಸಂಸ್ಥೆಯೆಂವರೆ, ಸಂತತಿಯನ್ನು ಭಾವೀ ಪ್ರಜೆಗಳನ್ನಾಗಿಯೂ,ಉತ್ತಮ ನಾಗರಿಕರನ್ನಾಗಿಯೂ,ಆದರ್ಶ ಗೃಹಿಣಿಯರನ್ನಾಗಿಯೂ,ಅದ್ವಿತೀಯ ಮಾತೃಮೂರ್ತಿಗಳನ್ನಾಗಿಯೂ ಮಾಡುವ ಕಾರ್ಯಾಲಯವು. ಇಂತಹ ಪವಿತ್ರವೂ ಮಹತ್ವವೂ ಆದ ಸಂಸ್ಥೆಯಲ್ಲಿ ಎಂಥೆಂಥಜನರು ಪ್ರವೇಶ ಮಾಡಿರುವರು ನೋಡಿರಿ! ವಿದ್ಯಾಧಿಕಾರಿಗಳ ಪರಾಕ್ರಮದ ಪ್ರಭಾವವಿದು! ಅವರು ಅನೀತಿಯಬೀಡಾಗಿರುವದರಿಂದಶಿಕ್ಷಣಸಂಸ್ಥೆಯನ್ನು ಕುಲಟಾ ಸಂಸ್ಥೆಯನ್ನು-ವ್ಯಭಿಚಾರ ಶಾಲೆಯನ್ನುಮಾಡಿರುವರೆಂದು ನನ್ನದೃಷ್ಟಿಗಂತೂ ಭಾಸವಾಗುವದು. ಅಂತೆಯೆ ನಾನು ಶಿಕ್ಷಣದ ಉದ್ಯೋಗವನ್ನು ಕೈಕೊಂಡ ಬಗ್ಗೆ ಪಶ್ಚಾತ್ತಾಪಪಡುತ್ತಿರುವೆನು.'

'ಮಗೂ, ನೀನು ಹೇಳುತ್ತಿರುವಂತೆ ಸ್ಥಿತಿಯಿದ್ದುದು ನನಗೆ ಗೊತ್ತಿಲ್ಲವೆಂದು ಭಾವಿಸಿರುವಿಯಾ? ನಿನಗೆಷ್ಟು ತಿಳಿದಿರುವದೋ ಅದಕ್ಕಿಂತ ಹೆಚ್ಚಾಗಿ ನನಗೆ ಗೊತ್ತಿದೆ. ಕೃಷ್ಣರಾಯರೂ, ಅವರ ಅನುಯಾಯಿಗಳೂ ಹೇಗಿದ್ದರೂ ಅವರಿಂದ ನನಗೆ ಬಾಧೆಯಿಲ್ಲ; ಯಾಕಂದರೆ, ನೀನು ಸದ್ಗುಣಮಂಡಿತಳಿರುವೆ; ಕುಲವಧುವಿರುವೆ; ಅದರಲ್ಲಿ ಸಾಹೇಬರಿಗೆ ಮೊಮ್ಮಗಳಂತೆ ಶೋಭಿಸುವೆ. ಅಂದಮೇಲೆ ನೀನು ಪಶ್ಚಾತ್ತಾಪ ಹೊಂದುವ ಕಾರಣವೇನು? ಜನರ ದುಷ್ಕೃತಿಗಳನ್ನು ನೋಡಿಯೂ ನೋಡದಂತಿದ್ದರೆ ಅದರ ದುಃಖವು ನಿನ್ನನ್ನು ಬಾಧಿಸಲಾರದು.'

'ಅಪ್ಪಾ, ತಿಳಕೊಂಡಂತಹ ಪರಿಸ್ಥಿತಿಯಿಲ್ಲ. ಸಾಹೇಬರು ದುರ್ಗುಣ

ಗಳ ಕಣಿಯಾಗಿರುವರೆಂದು ನನಗೆ ಇಂದೇ ತಿಳಿಯಿತು.''

'ಹಾ! ಸಾಹೇಬರು ಶಾಲೆಗೆ ಬಂದಿದ್ದರೇನು?'

'ಬಂದಿದ್ದರು. ಅವರು ನಿರೀಕ್ಷಣೆಯ ನಿಮಿತ್ತದಿಂದ ಶಾಲೆಗೆ ಬಂದು, ವಿದ್ಯಾರ್ಥಿನಿಯರ ಅಭ್ಯಾಸವನ್ನು ನಿರೀಕ್ಷಿಸದೆ, ನನ್ನ ಮುಖ ನಿರೀಕ್ಷಣೆಯನ್ನು ಮನಸ್ವೀಯಾಗಿ ಮಾಡಿದರು. ಅವರ ಇನ್ನೂ ಕೆಲವು ಕೃತ್ಯಗಳನ್ನು ಹೇಳಲಿಕ್ಕೆ ಮನಸ್ಸಾಗಲೊಲ್ಲದು ಅವರ ನೀಚ ವೃತ್ತಿಯನ್ನು ನೋಡಿ ಸಂತಾಪವು ಹುಟ್ಟಿದೆ. ಹೊಟ್ಟೆಗಾಗಿ ದುಡಿಯಲೇ ಬೇಕಾಗಿದೆ. ದುಡಿಯಬೇಕೆಂದರೆ ಇಂತಹ ಅತ್ಯಾಚಾರ-ಅಪಮಾನಗಳನ್ನು ಸಹಿಸಬೇಕಾಗುವದು. ಸಾಹೇಬರು ವಿದ್ಯಾಮಂದಿರವನ್ನು ವಿಲಾಸಮಂದಿರವನ್ನಾಗಿ ಮಾಡಿರುವರು. ವನಿತಾ ಕುಸುಮಾವತಿಯರೇ ಮಂದಿರದ ವಿಲಾಸದೇವತೆಗಳು. ಸಾಹೇಬರು ನನಗೆ ಮುಖ್ಯ ಶಿಕ್ಷಕಿಯ ಕೆಲಸ ಕೊಟ್ಟಿದ್ದರ ಹಾಗು ನಿಮಗೆ ಪೂರ್ಣ ವೇತನದ ರಜೆಯನ್ನು ಕೊಡುವೆವೆಂದು ಹೇಳಿದ್ದರ ರಹಸ್ಯವೆಂದರೆ, ಅವರು ನನ್ನ ಸೌಂದರ್ಯಲುಬ್ಧರಾದದ್ದೇ ಆಗಿದೆ. ನಾನು ಅವರ ಮಗಳಾಗಿಯೂ ಮೊಮ್ಮಗಳಾಗಿಯೂ ಕಾಣುತ್ತಿರಬಹುದು. ಈ ವಿಚಾರವು ಪಾಪಪೂರಿತ ಹೃದಯಗಳಲ್ಲಿ ಹೇಗೆ ಬರಬೇಕು?'

ಉಷೆಯು ಹೀಗೆ ಹೇಳಿದ ಕೂಡಲೆ ದಿವಾಕರರಾಯನ ಮನಸ್ಸು ಶೋಕಾಕುಲವಾಯಿತು. ನೀಚವೃತ್ತಿಯ ಸಾಹೇಬರು ತನ್ನ ಮಗಳ ಮೇಲೆಯೂ ಪಾಪದೃಷ್ಟಿಯನ್ನಿಟ್ಟಿರುವರೆಂದು ಅವನು ತಿಳಿದನು. ಆಗ ಅವನು ನಿಟ್ಟುಸಿರುಬಿಟ್ಟು—'ಉಷೆ, ನೀನು ನಾಳಿನಿಂದ ಶಾಲೆಗೆ ಹೋಗಬೇಡ.'

'ಅಪ್ಪಾ, ಶಾಲೆಗೆ ಹೋಗದಿರುವದು ಒಳಿತೆಂಬದೇನೋ ನಿಜವು. ಹೋಗದೆ ಬಿಟ್ಟರೆ ಮುಂದೆ ಗತಿಯೇನು? ನಾನು ಶಾಲೆಗೆ ಹೋಗುವದನ್ನು ಬಿಟ್ಟರೆ ನಿಮಗೆ ಪೂರ್ಣ ವೇತನದ ರಜೆಯಾಗಲಿ ಬೇನೆಯ ರಜೆಯಾಗಲಿ ದೊರೆಯುವದಿಲ್ಲ; ಹಾಗಾದರೆ ನಮ್ಮ ಪರಿಣಾಮವೇನಾಗುವದು ನೋಡಿರಿ! ಅವರ ಪಾಪವು ಅವರ ಸುತ್ತು. ಸಾಹೇಬರು ನನ್ನನ್ನು ಪಾಪದೃಷ್ಟಿಯಿಂದ ನೋಡಿದರೆ ಇಲ್ಲವೆ ಪಾಪ ವಿಚಾರಗಳನ್ನು ಮುಂದೆ ಇರಿಸಿದರೆ, ನನ್ನ ಶೀಲಕ್ಕೆ ಭಂಗಬರುವಂತೇನೂ ಇಲ್ಲ. ಅಂತಹ ಪ್ರಸಂಗವೇ ಘಟಿಸುವದೆಂಬಂತೆ ತೋರಿದರೆ, ಆಗಿಂದಾಗ ವಿದ್ಯಾಮಂದಿರಕ್ಕೆ ಶರಣು ಹೊಡೆಯಲಿಕ್ಕೆ ಬರುವದಿಲ್ಲವೆನ್ನುವಹಾಗಿಲ್ಲ.'

'ಉಷೆ, ಸದ್ಯದ ಕಠಿಣ ಸ್ಥಿತಿಯಲ್ಲಿ ನನಗೆ ಏನೂ ತೋಚದಾಗಿದೆ. ನಿನಗೆ ನಾನು ಒಂದು ಗುಟ್ಟಿನ ಮಾತನ್ನು ಹೇಳುವೆನು. ಎಂತಹ ಪ್ರಸಂಗ

ಒದಗಿದರೂ ಶೀಲಭ್ರಷ್ಟಳಾಗಬೇಡ. ನನ್ನ ನೌಕರಿಯು ಹೋಗಲಿ; ನಿನ್ನ ನೌಕರಿಯೂ ಹೋಗಲಿ, ಅನ್ನವಿಲ್ಲದೆ ನಾವಿಬ್ಬರೂ ಬಳಲಿ ಸಾಯುಬೇಕಾದಂತಹ ಅವಸ್ಥೆಯೊದಗಿದರೂ ಚಿಂತೆಯಿಲ್ಲ. ದಿವಾಕರರಾಯನ ಮಗಳು ಶೀಲಭ್ರಷ್ಟಳೆಂದು ಯಾರೂ ಅನ್ನದಂತೆ ವರ್ತಿಸು. ಜಗತ್ತು ಮುಳ್ಳುಹಾಸಿಗೆಯಂತಿರುವದು. ಸದ್ಯದ ಶಿಕ್ಷಣ ಸಂಸ್ಥೆಯಲ್ಲಿ ಪಾವಿತ್ರ್ಯವನ್ನು ಕಾಯ್ದುಕೊಳ್ಳುವದಂತೂ ಅಘೋರ ತಪಾಚರಣೆಯಂತಿರುವದು. ನೌಕರಿಯು ಹೋದರೆ ಕೂಲೀ ಮಾಡಿ ಅಥವಾ ಅಡಿಗೆ-ನೀರುಗಳನ್ನು ಮಾಡಿ ಹೊಟ್ಟೆ ಹೊರೆಯಬಹುದು. ನಾನು ಸ್ವಾಸ್ಥ್ಯ ಹೊಂದಿದಮೇಲೆ ನಿನ್ನನ್ನು ದುಡಿಯ ಹಚ್ಚುವದಿಲ್ಲ; ಆದರೆ ಸದ್ಯದ ವಿಪನ್ನಾವಸ್ಥೆಯಲ್ಲಿ ಮಗೂ, ನಿನ್ನ ಕೈಯಿಂದಲೇ ನಾನು ಉಣ್ಣಬೇಕಾಗಿದೆ; ನಿನ್ನ ಕಾಲಿನಿಂದಲೇ ನಡೆಯಬೇಕಾಗಿದೆ; ನಿನ್ನ ಕಣ್ಣುಗಳಿಂದಲೇ ನೋಡಬೇಕಾಗಿದೆ! ದೇವರು ದೀನ-ದರಿದ್ರರಾದ ನಮ್ಮಂಥವರ ಮೇಲೆಯೆ ವಿಪತ್ತಿನ ಪರ್ವತವನ್ನು ಚೆಲ್ಲುತ್ತಿರುವನು. ಹೆಂಡತಿಯು ಹೋದಳು; ಇಬ್ಬರು ಗಂಡುಮಕ್ಕಳು ಹೋದರು. ಅದೇಪಿಡುಗಿನಲ್ಲಿ ನಾನೂ ನೀನೂ ಹೋಗಿ ಬಿಟ್ಟಿದ್ದರೆ, ಇಂದಿನ ದುರವಸ್ಥೆಯನ್ನನುಭವಿಸುವ ಪ್ರಸಂಗ ವಿದ್ದಿಲ್ಲ!'

ದಿವಾಕರರಾಯನ ಕಣ್ಣುಗಳಿಂದ ಜಲಧಾರೆಗಳು ಹರಿಯತೊಡಗಿದವು. ಉಷೆಯಂತು ಸಣ್ಣ ಹುಡುಗರಂತೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ನಿರಾಧಾರಿಗಳಾದ ಆ ವ್ಯಥಿತಾಂತಃಕರಣಿಗಳನ್ನು ಯಾರು ಸಾಂತ್ವನಪಡಿಸಬೇಕು? ದುಃಖಾವೇಗವು ತನ್ನಿಂದ ತಾನೇ ಕಡಿಮೆಯಾಗುವದು ಸ್ವಭಾವಸಿದ್ಧವು. ಅದರಂತೆ ಕೆಲವು ವೇಳೆಯ ಮೇಲೆ ಇಬ್ಬರ ಹೃದಯಗಳೂ ಸ್ವಲ್ಪ ಶಾಂತವಾದವು. ಆ ಮೇಲೆ ಉಷೆಯು ತಂದೆಯನ್ನು ಕುರಿತು:-'ಅಪ್ಪಾ, ಆಗಿಹೋದ ಸಂಗತಿಗಳಿಗಾಗಿ ದುಃಖಿಸಿದರೆ ಆಗುವದೇನು? ಹಿಂದಿನದೆಲ್ಲವೂ ಸುಳ್ಳು; ಈಗಿನದೇ ನಿಜ'

'ಉಷೆ, ಈಗಾದರೂ ನಮಗೆ ಯಾವ ಸೌಖ್ಯವಿರುವದೆಂದು ಆನಂದಪಡಬೇಕು? ನಾನಂತು ಪ್ರಬಲವಾದ ಬೇನೆಯಿಂದ ಹಾಸಿಗೆ ಹಿಡಿದೆನು. ಇದರಿಂದ ಉಳಿಯುವೆನೋ, ಉರುಳುವೆನೋ ಎಂಬ ವಿಚಾರವನ್ನು ಈಗಲೆ ಮನಸ್ಸಿನಲ್ಲಿ ತರಲಾರೆನು. ನನಗೆ ಕಾನೂನಿನಂತೆ ನಿಯಮಿತ ಅವಧಿಯ ವೇತನದ ರಜೆಯಾಗಲಿ, ಬೇನೆಯ ರಜೆಯಾಗಲಿ ದೊರೆಯಬೇಕಾದರೆ ಸಾಹೇಬರ ಮನಸ್ಸನ್ನು ಸಂತುಷ್ಟಗೊಳಿಸಬೇಕಾಗುವದು. ಅವರ ರಾಕ್ಷಸೀ ಹೃದಯಕ್ಕೆ ನಿನ್ನ ಪಾವಿತ್ರ್ಯದ ಆಹುತಿಯೇ ಬೇಕಾಗಿರುವದೆಂದು ನನಗೆ ಈಗ ಮನಸ್ಸಿಗೆ ಸಕಾಗಿ ಕಾಣಹತ್ತಿದೆ. ಅಂತೆಯೇ ಅವರು ಮಹಾನುಭಾವತೆ

ಯನ್ನು ತೋರಿಸಿ, ನಿನ್ನನ್ನು ಒಮ್ಮೆಲೆ ಮುಖ್ಯ ಶಿಕ್ಷಕಿಯನ್ನಾಗಿ ನಿಯಮಿಸಿರುವರು ಮುಂದೆ ಏನು ಮಾಡಬೇಕೆಂಬದೇ ನನಗೆ ಹೊಳೆಯದಾಗಿದೆ. ತಕ್ಕಡಿಯ ಒಂದು ಪರಡಿಯಲ್ಲಿ ನಿನ್ನ ಪಾವಿತ್ರ್ಯವಿರುವದು; ಮತ್ತೊಂದು ಪರಡಿಯಲ್ಲಿ ನಮ್ಮ ಎರಡೂ ಪ್ರಾಣಗಳಿರುವವು. ಪಾವಿತ್ರ್ಯವು ಉಳಿಯಬೇಕಾದರೆ ಪ್ರಾಣಗಳನ್ನು ಕೊಡಬೇಕು; ಪಾವಿತ್ರ್ಯವನ್ನು ನಾಶಪಡಿಸಿಕೊಂಡರೆ ಪ್ರಾಣಗಳು ಉಳಿಯುವವು. ಹಾಯ! ಹಾಯ! ಬಡನನದ ಬಾಳು ಯಾತಕ್ಕೂ ಬೇಡ. ಉಷೆ, ಶಿಕ್ಷಕ ವೃತ್ತಿಯವರ ಬಾಳು ಸುಡಬೇಕು. ಎಷ್ಟು ಬಡತನದ ಬಾಳ್ವೆ ಮಾಡಿಕೊಂಡು ಹೋದರೂ ಆಪತ್ತಿನ ವೇಳೆಯಲ್ಲಿ ನಾಲ್ಕು ಕಾಸು ಸಹ ಉಳಿಯಲಿಲ್ಲ. ನನ್ನ ಬಡತನದ ಮೂಲಕವಾಗಿಯೆ, ಪ್ರೌಢಳಾಗಿದ್ದರೂ ನಿನ್ನ ವಿವಾಹ ಮಾಡದಾಗಲಿಲ್ಲ. ವಿವಾಹದ ಮಾತು ಒತ್ತಟ್ಟಿಗಿರಲಿ, ಬೇನೆ ಬಿದ್ದಾಗ ನಾಲ್ಕುದಿನ ಔಷಧ-ಪಥ್ಯಗಳಿಗೆ ಸಹ ಅಭಾವವಾಗಿ ಹೋಗಿದೆ ಜಗತ್ತಿನೊಳಗಿನ ಸುಖ-ಸಾಮುಗ್ರಿಗಳು ಶಿಕ್ಷಕರಿಗಾಗಿ ಇಲ್ಲವೇ ಇಲ್ಲ. ಅದಕ್ಕಾಗಿ ನನಗೆ ದುಃಖವಿಲ್ಲ ಗಂಡ-ಹೆಂಡಿರ ಹಾಗು ಒಬ್ಬಿಬ್ಬರು ಮಕ್ಕಳ ಉಪಜೀವನವಾದರೂ ನಡೆಯಬಾರದೆ! ನಮ್ಮ ಶಿಕ್ಷಣಾಧಿಕಾರಿಗಳಂತು ಸಂಸ್ಥಾನಕ್ಕೆ ದುಡ್ಡು ಉಳಿಸಿಕೊಟ್ಟು, ಸಂಸ್ಥಾನಿಕರ ಕೃಪೆಗೆ ಪಾತ್ರರಾಗಬೇಕೆನ್ನುವವರು ಕಡಿಮೆ ಸಂಬಳವಾದರೂ ಆಗಲಿ, ಅನುಕೂಲವಾದ ಸ್ಥಳಗಳಾದರೂ ಶಿಕ್ಷಕರಿಗೆ ದೊರೆಯುವವೆನ್ನಬೇಕೆ? ಅದೂ ಇಲ್ಲ. ವರಿಷ್ಠರ ಬಾಲ ಬಡಿಯುವದರಲ್ಲಿ ನಿಷ್ಣಾತರಿದ್ದವರಿಗೆ ಮಾತ್ರ ಎಷ್ಟಾದರೂ ಸುಖವಾಗುವದು. ನಮ್ಮಂತಹ ನಿರ್ಭಾಗ್ಯರಿಗೆ ಜವುಳಕೇದಗಿಹಳ್ಳಿಯ ಕೊಳಚೆ ನೀರೇ ಆಧಾರ; ಇಲ್ಲವೆ ಅಗ್ಗಾಂದ ಹೊನ್ನೀಹಳ್ಳಿಯ ಹಾಳು ಮಣ್ಣಿನದೇ ಆಸರ! ಅಂಥದರಲ್ಲಿಯೂ ಹೇಗಾದರೂ ಕಾಲಕಳೆಯಬೇಕೆಂದರೆ, ಸಾಹೇಬರ ರಾಕ್ಷಸೀ ವಿಷಯಲಾಲಸೆಯು ಆs ಎಂದು ಬಾಯಿ ತೆರೆದು ಕುಳಿತಿರುವದು. ಅತ್ತ ಬಿದ್ದರೆ ಬಾವಿ, ಇತ್ತ ಬಿದ್ದರೆ ಕೆರೆ, ನಡುವೆ ನಿಂತರೆ ಉರಿ!'

ದುಃಖಾತಿರೇಕದಿಂದ ದಿವಾಕರರಾಯನ ಕಣ್ಣುಗಳಲ್ಲಿ ಕತ್ತಲೆ ಕವಿದಂತಾಯಿತು. ಅವನು ಕಣ್ಣು ಮುಚ್ಚಿದನು. ಬೇನೆಯಿಂದ ಕ್ಷೀಣಕಾಯನಾಗಿದ್ದ ಅವನಿಗೆ ಆ ದುಃಖಾವೇಗವು ಸಹನವಾಗದೆ, ಸ್ವಲ್ಪ ವೇಳೆ ಬವಳಿಯೂ ಬಂತು. ಆಗ ಉಷೆಯು, 'ಅಪ್ಪಾ!' ಎಂದು ಕೂಗಿದಳು. ಉತ್ತರ ಬರಲಿಲ್ಲ. ಎದೆ ಹಿಡಿದು ನೋಡಿದಳು; ಹಾರುತ್ತಿತ್ತು. ಆಗ ಅವಳ ಹಾರುತ್ತಿರುವ ಎದೆಯು ಶಾಂತವಾಯಿತು. ಅವಳು ಕೆಲವು ಕ್ಷಣ ಬಿಟ್ಟು ಮತ್ತೆ

"ಅಪ್ಪಾ!" ಎಂದು ಕೂಗಿದಳು. ದಿವಾಕರರಾಯನು ಕಣ್ಣು ತೆರೆದು—"ಯಾಕೆ ಮಗೂ!" ಎಂದನು. ಉಷೆಯು ಆನಂದಬಟ್ಟಳು. ಈ ವಿಶಾಲವಾದ ಜಗತ್ತಿನಲ್ಲಿ ಅವಳಿಗೆ ಆಧಾರವೆಂದರೆ, ತಂದೆಯೊಬ್ಬನೇ ಆಗಿದ್ದನು. ಆ ಆಧಾರವು ತಪ್ಪಿ ಹೋದರೆ, ತಾನು ಒಂದು ಕ್ಷಣ ಸಹ ಬಾಳಲಾರೆನೆಂದು ಅವಳ ತಿಳುವಳಿಕೆಯಿತ್ತು. ದುಡಿಯಲಿ, ದುಡಿಯದಿರಲಿ, ಅಡ್ಡಾಡುತ್ತಿರಲಿ, ಹಾಸಿಗೆ ಹಿಡಿದು ನವೆಯುತ್ತಿರಲಿ ಅವಳಿಗೆ ತಂದೆಯೆಂದರೆ ಬಹು ದೊಡ್ಡ ಆಸರ. ತನ್ನ ಆಧಾರತಂತುವು ಹರಿಯಬಾರದೆಂಬ ಉದ್ದೇಶದಿಂದಲೇ ಅವಳು ಮುಳ್ಳು ಹಾಸಿಗೆಯಂತಿದ್ದ ವಿಜಯನಗರದ ಶಿಕ್ಷಣಸಂಸ್ಥೆಯಲ್ಲಿ ನೌಕರ ಮಾಡಲಿಕ್ಕೆ ಸಿದ್ಧಳಾಗಿದ್ದಳು. ತಂದೆಯ ಬೇನೆಯು ವಾಸಿಯಾಗುವವರೆಗೆ ಅವಳಿಗೆ ನೌಕರಿ ಮಾಡದಿರುವದು ಅಪರಿಹಾರ್ಯವಿತ್ತು.

ತಂದೆಯು ಕಣ್ಣು ತೆರೆದ ಕೂಡಲೆ ಉಷೆಯು ಆನಂದದಿಂದ-ಅಪ್ಪಾ, ಹೆಚ್ಚಿಗೆ ಯೋಚನೆಯಲ್ಲಿ ಬಿದ್ದು ಮನಸ್ಸಿಗೆ ಕ್ಲೇಶ ಮಾಡಿಕೊಳ್ಳಬೇಡಿರಿ. ಜಗತ್ತಿನೊಳಗಿನ ಎಲ್ಲ ಸ್ಥಿತಿ ರೀತಿಗಳು ಇರತಕ್ಕಂತಿದ್ದರೆ, ಇದಕ್ಕೆ ಕಲಿಯುಗವೆನ್ನುತ್ತಿದ್ದಿಲ್ಲ. ಕಲಿಕಾಲ ಮಹಿಮೆಯು ಅಗಾಧವಾದದ್ದು. ಸುಳ್ಳಿದ್ದದ್ದು ನಿಜ; ನಿಜವಿದ್ದದ್ದು ಸುಳ್ಳು. ಕೀಳುತನದ್ದು ಉಚ್ಚ, ಉಚ್ಚತನದ್ದು ಕೀಳು ಹೀಗಾಗುವ ಸಂಭವವೇ ಈ ಯುಗದಲ್ಲಿ ಹೆಚ್ಚು. ಶಿಕ್ಷಣಸಂಸ್ಥೆಯೆಂದರೆ ಸಂತತಿಯನ್ನು ಭಾವೀಪ್ರಜೆಗಳನ್ನಾಗಿ ಮಾಡುವ ಪವಿತ್ರವಾದ ಸಂಸ್ಥೆಯು. ಇಂತಹ ಸಂಸ್ಥೆಯಲ್ಲಿ ಎಂತಹ ಶಿಕ್ಷಕ-ಶಿಕ್ಷಕಿಯರಿರಬೇಕು, ಎಂತಹ ಶಿಕ್ಷಣಾಧಿಕಾರಿಗಳಿರಬೇಕು, ಶಿಕ್ಷಕರಿಗೆ ಹೊಟ್ಟೆಸಹ ನಡೆಯದಂತಹ ವೇತನ ಕೊಟ್ಟ ಮಾತ್ರಕ್ಕೆ ಶಿಕ್ಷಣಕಾರ್ಯವು ಸುರಕ್ಷಿತವಾಗಿ ನಡೆಯುವದೇ ಹೇಗೆ? ಮೊದಲಾದ ವಿಚಾರಗಳನ್ನು ರಾಜ್ಯಸೂತ್ರಚಾಲಕರು ಮಾಡುತ್ತಿರುವದಿಲ್ಲ. ಒಂದು ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಓದು-ಬರೆಹ ಕಲಿಸಲಿಕ್ಕೆ ಬಂದ ಕೂಡಲೆ ಅವನು ಶಿಕ್ಷಣ ವ್ಯವಸಾಯವನ್ನು ನಡೆಯಿಸಲಿಕ್ಕೆ ಅರ್ಹನೆಂದೇ ಅವರಿಗೆ ತೋರುವನು. ಅಂತಹ ಜನರು ಹೇರಳವಾಗಿ, ಸ್ವಲ್ಪ ವೇತನಕ್ಕೆ ದೊರೆಯತೊಡಗಿರುವದರಿಂದ ನಿಜವಾದ ಶಿಕ್ಷಕರಿಗೆ ಬೆಲೆಯೇ ಇಲ್ಲದಂತಾಗಿದೆ. ಸರಕಾರದ ಈ ಧೋರಣದಿಂದ ಎಂಥ ಎಂಥ ಶಿಕ್ಷಕ-ಶಿಕ್ಷಕಿಯರು ಶಿಕ್ಷಣಸಂಸ್ಥೆಯಲ್ಲಿ ಸೇರ್ಪಡೆಯಾಗಿರುವರೆಂಬದನ್ನು ನಿರೀಕ್ಷಿಸಿದರೆ, ಸಖೇದಾಶ್ಚರ್ಯವಾಗುವದು. ವಿಜಯನಗರದ ಮುಖ್ಯ ಶಿಕ್ಷಕಿಯಾದ ರಾಧಾದೇವಿಯ ಚರಿತ್ರವನ್ನು ಕೇಳಿದರೆ ಮೈಗೆ ಮುಳ್ಳೇ ಬರುತ್ತದೆ. ಪೇಟೆಯೊಳಗಿನ ಒಬ್ಬ ವಾರವನಿತೆಗಾದರೂ ಬೆಲೆಯುಂಟು; ಈ ರಾಧಾದೇವಿಗೆ ಅವಳಷ್ಟು ಸಹ ಬೆಲೆ

ಯಿಲ್ಲ. ಇಂತಹಳಿಗೆ ಸಂಸ್ಥಾನದೊಳಗಿನ ಎಲ್ಲ ಶಿಕ್ಷಕ-ಶಿಕ್ಷಕಿಯರಿಗಿಂತ ಹೆಚ್ಚಿನ ಮಾನ ಸನ್ಮಾನ, ಹೆಚ್ಚಿನ ವೇತನ! ಮುಖ್ಯಾಧಿಕಾರಿಗಳಾದ ಕೃಷ್ಣ ರಾಯರಂತೂ ರಾಧಾದೇವಿಯೆಂದರೆ ಬಿದ್ದು ಜೀವಾ ಕಳೆಕೊಳ್ಳುವರು. ಆನಂದರಾಯ-ಗೋವಿಂದರಾಯರೆಂದರೆ, ಹಗಲು-ರಾತ್ರಿ ಬಸವೀ-ಬಾಜಾರ ದಲ್ಲಿ ಅಂಡಲೆಯುವ ಜಾರರಾಯರಿಗಿಂತಲೂ ಕಡಿಮೆ ಯೋಗ್ಯತೆಯವರು. ಇಂತಹ ಜನರಿಗೇ ಸುಖ ಸೌಕರ್ಯ. ಸದಾಚರಣಿಗಳಾದ ಶಿಕ್ಷಕರ ಸುಖ-ದುಃಖಗಳನ್ನು ಕೇಳುವವರು ಈ ಸಂಸ್ಥಾನದಲ್ಲೇ ಇಲ್ಲ; ಸುಖ-ದುಃಖಗಳನ್ನು ಕೇಳದಿದ್ದರಿಲ್ಲ; ಅವರ ಸದಾಚರಣೆಗೆ ಭಂಗಬರದಂತಿದ್ದರೆ ಅದೊಂದು ಸುಖ ವೆಂದೇ ತಿಳಿಯಬೇಕು. ಈಗ ಸುರೇಂದ್ರರಾಯ-ರದೂದೇವಿಯವರಂತಹ ಸದ್ಗುಣಿಗಳಾದ ದಂಪತಿಗಳು ಅನುಭವಿಸುವ ಕಷ್ಟವನ್ನೂ, ಯಾತನೆಗಳನ್ನೂ ಒಂದು ಪಶುವೂ ಕೂಚ ಸಹಿಸದು. ಶಿಕ್ಷಣಸಂಸ್ಥೆಯಲ್ಲಿ ಉತ್ತಮರಾದ ಅಧಿ ಕಾರಿಗಳಿಲ್ಲದ್ದಕ್ಕಾಗಿ ಇಷ್ಟು ಅವ್ಯವಸ್ಥೆಯುಂಟಾಗಿದೆ. ಶಿಕ್ಷಕ-ಶಿಕ್ಷಕಿಯರ ಹಿತಾ ಹಿತದ ಕಡೆಗೂ, ಅವರ ಕಾರ್ಯಾಕಾರ್ಯಗಳ ಕಡೆಗೂ ಲಕ್ಷ್ಯಗೊಡುವಂ ತಹ ಶಿಕ್ಷಣಪ್ರೇಮಿಯಾದ ಘನವಂತ ಶಿಕ್ಷಣಾಧಿಕಾರಿಯಿದ್ದರೆ, ವಿಜಯನಗ ರದ ಶಿಕ್ಷಣಸಂಸ್ಥೆಯು ಕೃಷ್ಣನ ಗೋಕುಲವಾಗುತ್ತಿದ್ದಿಲ್ಲ. ರಾಧೆ, ಚಂಪಾವತಿ, ಕುಸುಮಾವತಿ, ವನಿತೆ, ಆನಂದ ಗೋವಿಂದ ಮೊದಲಾದವರ ಹಾವಳಿಯು ಹೆಚ್ಚಾಗಿ, ವಿದ್ಯಾಮಂದಿರಗಳು ವಿಲಾಸಮಂದಿರಗಳಾಗುತ್ತಿದ್ದಿಲ್ಲ. ಅಪ್ಪಾ, ಏನು ಮಾಡುವದಿದೆ! ನಮ್ಮಂತಹ ಮಾತಿಗೆ ಬಾರದ ಜನರು ಎಷ್ಟು ಹಲು ಬಿದರೇನಾಗಬೇಕು? ನೆಲುವಿಗೆ ಹಾರದ ಬೆಕ್ಕು ಸ್ವರ್ಗಕ್ಕೆ ಹಾರಿತೆಂಬಂತೆ ನಮ್ಮ ಅವಸ್ಥೆಯುಂಟು. ಸದ್ಯಕ್ಕೆ ವಿದ್ಯಾಧಿಕಾರಿಗಳು ತಮ್ಮ ಕಾಮದೇವನ ಕಾರಭಾರವನ್ನು ನನ್ನ ಮೇಲೆ ನಡೆಯಿಸಲಿಕ್ಕೆ ಹಾತೊರೆಯುತ್ತಿರುವರು. ಅದ ರಿಂದ ಪಾರಾಗುವ ಹಂಚಿಕೆಯನ್ನು ತೆಗೆಯಲಿಕ್ಕೆಬೇಕು. ಕೊನೆಗೆ ನೌಕರಿಗೆ ನೀರು ಬಿಡಬೇಕಾಗುವ ಪ್ರಸಂಗ ಒದಗಬಹುದೆಂಬ ಭಯವೂ ಇರುವದು. ಬಂದದ್ದೆಲ್ಲ ಬರಲಿ, ಪರಮಾತ್ಮನ ದಯವೊಂದಿರಲಿ!'

'ಮಗೂ ಉಷೆ!' ಉಷೆಯ ಮಾತುಗಳಿಂದ ದಿವಾಕರರಾಯನು ಆನಂದಭರಿತನಾಗಿ—'ನೀನು ಚಿಕ್ಕವಳಾದರೂ ಬುದ್ಧಿವಂತೆಯೂ ಸುಶೀಲೆ ಯೂ ಇರುವೆಯಮ್ಮಾ! ನಿನ್ನ ವಿಚಾರಗಳು ಇಷ್ಟು ಉದಾತ್ತವಾದವುಗಳಿ ರುವವೆಂಬದನ್ನು ನಾನು ಇಂದೇ ಮೊದಲನೇ ಸಾರೆ ಕಂಡೆನು. ನಿನ್ನ ವಿಚಾರ ಗಳಲ್ಲಿಯ ಕೆಲವಂಶವಾದರೂ ನಮ್ಮ ಅಧಿಕಾರಿಗಳಲ್ಲಿದ್ದರೆ ಶಿಕ್ಷಣಸಂಸ್ಥೆಯು ಇಂದಿನ ಪರಿಸ್ಥಿತಿಗೆ ಬರುತ್ತಿದ್ದಿಲ್ಲ. ರಾಧಾದೇವಿಯ ಮೇಲೆ ಯಾರೋ

ಹೊಟ್ಟೆಯುರುಕರು ಅತ್ಯಾಚಾರ ಮಾಡಿದಾಗಿನಿಂದ ಕೃಷ್ಣರಾಯರ ಮನಃಸ್ಥಿತಿಯು ಸಮಾಧಾನಕರವಿಲ್ಲ. ಇಂತಹ ಅವಸ್ಥೆಯಲ್ಲಿ ಸಹ ಅವರು ತಮ್ಮ ಕಾಯಕವನ್ನು ಬಿಡಲೊಲ್ಲರು. ಈಗ ಅವರ ಪಾತಕೀ ದೃಷ್ಟಿಯು ನಿನ್ನ ಮೇಲೆ ಬಿದ್ದಿರುವದೆಂದು ಸ್ಪಷ್ಟವಾಗುತ್ತದೆ. ಅವರ ದೃಷ್ಟಿಗೆ ಅಂಜಿದರೆ ನಿನ್ನ ನೌಕರಿಯೂ ಹೋಗುವದು, ನನ್ನ ವೇತನವೂ ಕಟ್ಟಾಗುವದು. ಇಷ್ಟೇ ಅಲ್ಲ; ನನ್ನ ನೌಕರಿಯೂ ಹೋಗುವದು! ನೌಕರಿಯೂ ಉಳಿಯಬೇಕು; ಶೀಲವೂ ಉಳಿಯಬೇಕು-ಹೀಗೇನಾದರೂ ಹಂಚಿಕೆಯಿದ್ದರೆ ನೀನೇ ಹುಡುಕು.'

'ಅಪ್ಪಾ, ನಾನು ಸವಿನಯತೆಯಿಂದ ಸಾಹೇಬರನ್ನು ಸಮಾಧಾನಗೊಳಿಸಿ ನೌಕರಿಯನ್ನೂ ಪಾವಿತ್ರ್ಯವನ್ನೂ ಕಾಯ್ದುಕೊಳ್ಳುವೆನು. ನೀವು ಯೋಚಿಸಬೇಡಿರಿ.'

'ಬಡತನದ ಬಾಳು ಕೆಟ್ಟದು! ಉಪಾಯವಿಲ್ಲ!' ಎಂದು ದಿವಾಕರರಾಯನು ನುಡಿದು ನಿಟ್ಟುಸಿರ್ಗರೆದನು.

ಅಷ್ಟರಲ್ಲಿ:—'ಅಕ್ಕಾ ಅವರೆ!' ಎಂದು ಕೂಗುತ್ತ ಸಾಹೇಬರ ಶಿಪಾಯಿಯು ಬಂದನು.

'ಯಾಕೆ?' ಎಂದು ಉಷೆಯು ಅವನನ್ನು ವಿಚಾರಿಸಿದಳು 'ನಾಳೆ ಮುಂಜಾನೆ ಏಳು ಗಂಟೆಗೆ ಸರಿಯಾಗಿ ನೀವು ಬಂಗಲೆಗೆ ಬರಬೇಕೆಂದು ಸಾಹೇಬರ ಆಜ್ಞೆಯಾಗಿದೆ. ನಿಮ್ಮೊಡನೆ ಕೆಲವು ಸರಕಾರೀ ಕೆಲಸಗಳ ಬಗ್ಗೆ ಮಾತಾಡುವದಿರುವದಂತೆ.'

ಉಷೆಯು ವಿಚಾರಕ್ಕೊಳಗಾದಳು! ಅವಳು ಕೆಲವೇಳೆ ವಿಚಾರ ಮಾಡಿ ಏನನ್ನೋ ನಿರ್ಧರಿಸಿಕೊಂಡು:-'ಬರುವೆನೆಂದು ಸಾಹೇಬರಿಗೆ ಹೇಳು,' ಎಂದು ತಿಳಿಸಿದಳು.

'ಬಡತನದ ಬಾಳು! ಉಪಾಯವಿಲ್ಲ!' ಎಂದು ನುಡಿದು, ದಿವಾಕರರಾಯನು—'ತಂಗೀ, ಉಷೆ, ನಿನ್ನ ಬುದ್ಧಿಯು ನಿನ್ನ ಸ್ವಾಧೀನವಿದೆ. ಮನೆತನದ ಗೌರವವನ್ನು ಕಾಯುವೆಯೋ ಕಳೆಯುವೆಯೋ ನೋಡೋಣ. ಸತ್ವಪರೀಕ್ಷೆಯ ಕಾಲವಂತು ಬಂದಿದೆ.'

'ಅಪ್ಪಾ, ಉಳಿದು ಸತ್ತಿರಬಾರದು; ಸತ್ತು ಉಳಿಯಬೇಕು. ಎಂತಹ ಬಡತನವಿದ್ದರೇನಾಯಿತು? ಸ್ವತ್ತಿಗಾಗಿ ಸತ್ವಗೇಡಾಗುವವಳು ನಿಮ್ಮ ಕುಮಾರಿಯಲ್ಲವೆಂಬದನ್ನು ನಿಮ್ಮ ನಿದರ್ಶನಕ್ಕೆ ತಂದು ಕೊಡುವೆನು.'

ಉಷೆಯ ಮಾತುಗಳನ್ನು ಕೇಳಿ ದಿವಾಕರರಾಯನಿಗೆ ಆನಂದವಾಯಿತು. ಅವನ ಒಳಸೇರಿದ ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿದವು.

## ಕರಿಗಾಲಿನ ಗಿರಿಮಾಜಿ.

ರುಗ್ಣಾಲಯದಲ್ಲಿ ರುಗ್ಣಶಯ್ಯಾಶಾಯಿಯಾಗಿದ್ದ ರಾಧಾದೇವಿಯ ಪ್ರಕೃತಿಯು ದಿನದಿನಕ್ಕೆ ಸುಧಾರಿಸುತ್ತ ನಡೆದಿತ್ತು. ಇನ್ನು ಕೆಲವು ದಿನಗಳಲ್ಲಿ ಅವಳ ಗಾಯ ಗಳೆಲ್ಲ ಪೂರಾ ಮಾಯುವವೆಂದು ಡಾಕ್ಟರರ ಅಭಿಪ್ರಾಯವಿತ್ತು. ಅವಳ ಜೀವದ ಮೇಲಿನ ಗಂಡಾಂತರವು ದೂರವಾದದ್ದರಿಂದ ಕೃಷ್ಣರಾಯರು ಊರೊಳಗಿನ ದೇವರಿಗೆ ಅಭಿಷೇಕ ಮಾಡಿಸಿ ಕಾಯಿ-ಕರ್ಪೂರಗಳನ್ನು ಕೊಟ್ಟಿದ್ದರು. ಮನೆಯಲ್ಲಿ ಎರಡು ಸಾರೆ ಸತ್ಯನಾರಾಯಣ ವ್ರತ ಮಾಡಿದ್ದರು. ರುಗ್ಣಾಲಯದಿಂದ ರಾಧಾದೇವಿಯ ಹೆತ್ತ ನಿಬ್ಬಣವು ಬಂದ ಮೇಲೆ ಅವರು ಮತ್ತೊಮ್ಮೆ ಸತ್ಯನಾರಾಯಣ ವ್ರತವನ್ನು ಅತ್ಯಂತ ವಿಜೃಂಭಣೆಯಿಂದ ನೆರವೇರಿಸುವವರಿದ್ದರು. ಆನಂದದ ವಿಷಯ. ಸಂಕಟ ನಿವಾರಣೆಯಾದ ಮೇಲೆ ದೇವರ ಹರಕೆಗಳನ್ನು ಮುಟ್ಟಿಸದಿದ್ದರೆ ಹೇಗೆ?

ಕೃಷ್ಣರಾಯರು ಬಹುತರವಾಗಿ ಎಲ್ಲ ಅಧಿಕಾರಿಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಂಡಿದ್ದರು. ಡಾಕ್ಟರ, ನರ್ಸ, ಕೊತವಾಲ, ಮುಖ್ಯ ಶಾಂತಿರಕ್ಷಕ ಮೊದಲಾದವರಂತು ಅವರ ಸೂತ್ರದ ಗೊಂಬೆಗಳಾಗಿ ಹೋಗಿದ್ದರು. ಕೃಷ್ಣರಾಯರೆಂದರೆ ದೊಡ್ಡ ಆಫೀಸರರು, ಶ್ರೀಮಂತರು, ಸಂಸ್ಥಾನಿಕರ ಆಪ್ತರು. ಮೇಲಾಗಿ ಬೇಕಾದ ಹಾಗೆ ತಿನಿಸು ಕೊಟ್ಟು ತಮ್ಮ ಮಾನವನ್ನು ಇದ್ದಕ್ಕಿದ್ದ ಹಾಗೆ ಇಟ್ಟುಕೊಳ್ಳುವ ಸಾಹಸ ಮಾಡುವದರಲ್ಲಿ ಅದ್ವಿತೀಯರು ಅಂದ ಮೇಲೆ ತಿನಿಸುಬುಕ್ಕ ಅಧಿಕಾರಿಗಳು ಅವರ ಸೂತ್ರದ ಗೊಂಬೆಗಳಾದದ್ದರಲ್ಲಿ ವಿಸ್ಮಯವೇನು? ರಾಧಾದೇವಿಯು ರುಗ್ಣಾಲಯದಲ್ಲಿ ಕಾಲಿಟ್ಟಾಗಿನಿಂದ ಕೃಷ್ಣರಾಯರ ಕಾಲು ಅಲ್ಲಿ ಒಂದು ದಿನವಾದರೂ ಬೀಳದಿಲ್ಲ. ಇತ್ತೀಚೆಗಂತು ಅವರು ಅಲ್ಲಿ ಹೋಗಿ, ಬೇಕಾದಷ್ಟು ವೇಳೆ ರಾಧಾದೇವಿಯೊಡನೆ ಮಾತಾಡುತ್ತ ಕುಳಿತುಕೊಳ್ಳುತ್ತಿದ್ದರು.

ರಾಧಾದೇವಿಯು ರುಗ್ಣಾಲಯದೊಳಗಿನ ಕೋಣೆಯಲ್ಲಿ ವ ಗುವನ್ನೆತ್ತಿಕೊಂಡು ಕುಳಿತಿದ್ದಳು. ಅವಳು ಮಗುವಿನ ಮುಖವನ್ನೂ, ಬಲಗೈಯನ್ನೂ ಎಡಭುಜವನ್ನೂ ನಿರೀಕ್ಷಿಸುತ್ತಿದ್ದಳು. ಕೆಲವು ವೇಳೆ ನಿರೀಕ್ಷಿಸಿದ ಮೇಲೆ ನಿಟ್ಟುಸಿರ್ಗರೆದಳು. ಪುತ್ರನನ್ನು ನೋಡಿ ಆನಂದಹೊಂದುವದನ್ನು ಬಿಟ್ಟು, ಯಾಕೆ ಬಿಸಿಯುಸಿರ್ಗರೆದಳೆಂಬದು ಅವಳಿಗೇ ಗೊತ್ತು. ಅಷ್ಟರಲ್ಲಿ- ರಾಧೇ' ಎಂಬ ಕೂಗು ಕೇಳಿತು. ಅಲ್ಲಿ ಮತ್ತಾರಾದರೂ ಇದ್ದರೆ ವಿಸ್ಮಯವೆನಿಸಬಹುದಾಗಿತ್ತು ನರ್ಸಳೂ, ಡಾಕ್ಟರರೂ ಹೊರಗೆ ಆಫೀಸಿನಲ್ಲಿದ್ದರು. ರಾಧಾದೇವಿಗೆ

ಆ ಕೂಗು ನಿತ್ಯಪರಿಚಯದ್ದಾಗಿತ್ತು. ಅದು ಕೃಷ್ಣರಾಯ ರಾವಸಾಹೇಬರ ಕೂಗೆಂಬದನ್ನು ಅವಳು ಆ ಕ್ಷಣದಲ್ಲಿಯೆ ಗುರತಿಸಿದಳು. ಅವಳು ರಾವ ಸಾಹೇಬರಿಗೆ ಬಹಿರಂಗದಲ್ಲಿ ರಾಧಾದೇವಿಯವರಾಗಿದ್ದರೂ, ಅಂತರಂಗದಲ್ಲಿ ರಾಧೆಯೇ ಆಗಿದ್ದಳು. ಅಷ್ಟು ಸ್ನೇಹ, ಅಂತಹ ಬಾಂಧವ್ಯ! ಅವಳ ಮದು ವೆಯ ಗಂಡನಾದ ಅಡವೀರಾಯನು ತನ್ನ ಆಯುಷ್ಯದಲ್ಲಿ ಅವಳನ್ನು ನೀನು-ತಾನೆಂದು ಕರೆದಿದ್ದಿಲ್ಲ. ಅವಳು ಮಾತ್ರ ಪತಿಯನ್ನು ಅಡವಿಯೆಂದೇ ಸಂಬೋಧಿಸುತ್ತಿದ್ದಳು! ಹೀಗೆ ತನ್ನ ಮುಖದಿಂದ ಏಕವಚನದ ಸಂಬೋಧ ನವು ಹೊರಡಲಿಕ್ಕೆ ಪತಿಯ ಮೇಲಿನ ಮಿತಿಮೀರಿದ ವಾತ್ಸಲ್ಯವೆಂಬ ಕಾರ ಣವು ರಾಧಾದೇವಿಯಿಂದ ಮುಂದೆ ಮಾಡಲ್ಪಡುತ್ತಿತ್ತು. ಅಡವೀರಾಯನಿ ಗಾದರೂ ಈ ಸಂಬೋಧನೆಯು ಪ್ರಿಯವಾಗಿತ್ತು. ರಾಧೆಯು ತನ್ನ ರಾಧೆ ಯಾಗಿರದೆ, ಕೃಷ್ಣನ ರಾಧೆಯೆಂದು ಅವನು ಎಂದೋ ತಿಳಿದಿದ್ದನು. ರಾಧಾ ದೇವಿಯು ಅಡವೀರಾಯನನ್ನು ತನ್ನ ಕುಂಕುಮ-ಮಾಂಗಲ್ಯದ ಆಧಾರವೆಂದು ತಿಳಿಯುವದಕ್ಕಿಂತ ಹೆಚ್ಚಿಗೆ ಮಾನ್ಯತೆ ಕೊಟ್ಟದ್ದಿಲ್ಲ. ಅವಳಲ್ಲಿದ್ದ ಪತಿಪ್ರೇಮ ವೆಂಬ ವಸ್ತುವು ಅಡವಿರಾಯನಿಗೆ ಸಮರ್ಪಿಸಲ್ಪಟ್ಟದ್ದಿಲ್ಲ; ಅದು ಬೇರೆ ಯವರ ಸಲುವಾಗಿ ಮನಃಪೂರ್ವಕವಾಗಿ ಅರ್ಪಣೆಯಾಗಿತ್ತು.

ಕೃಷ್ಣರಾಯರು 'ರಾಧೆ!' ಎಂದು ಸಂಬೋಧಿಸಿದ ಕೂಡಲೆ ಅದು ಯಾರ ಧ್ವನಿಯೆಂಬದನ್ನು ರಾಧಾದೇವಿಯು ಗುರತಿಸಿ-'ಬನ್ನಿರಿ, ರಾಯರೆ!' ಎಂದು ಕರೆದಳು.

ಕೃಷ್ಣರಾಯರು ಬಹಿರಂಗದಲ್ಲಿ ರಾಧಾದೇವಿಗೆ ರಾವಸಾಹೇಬರಾಗಿದ್ದ ರೂ ಅಂತರಂಗದಲ್ಲಿ ರಾಯರಾಗಿದ್ದರು. ರಾಯಶಬ್ದದ ಹಿಂದಿನ ಪತಿ, ಕಾಂತ ಮೊದಲಾದ ಶಬ್ದಗಳು ಅಧ್ಯಾಹೃತವಾಗಿರುತ್ತಿದ್ದವೋ ಏನೋ!

ಕೃಷ್ಣರಾಯರು ಒಳಗೆ ಹೋಗಿ, ರಾಧಾದೇವಿಯು ಕುಳಿತ ಮಂಚದ ಮೇಲೆಯೆ ಕುಳಿತುಕೊಂಡರು. ಅನಂತರದಲ್ಲಿ ಕೃಷ್ಣರಾಯರು—'ರಾಧೇ, ಪೋಲೀಸರ ಸ್ವಾಧೀನವಾಗಿದ್ದ ವಸ್ತುಗಳನ್ನಂತು ಯುಕ್ತಿ-ಪ್ರಯುಕ್ತಿಗಳಿಂದ ಸ್ವಾಧೀನಕ್ಕೆ ತೆಗೆದುಕೊಂಡೆನು. ನಿನ್ನ ಪುಸ್ತಕ-ಪತ್ರಗಳು, ಇಲ್ಲದ ಸಂಶಯ ವನ್ನುಂಟು ಮಾಡುವ ಕರವಸ್ತ್ರವು ಮೊದಲಾದವುಗಳೆಲ್ಲ ನನ್ನ ಮನೆಯಲ್ಲಿ ಭದ್ರವಾಗಿರುವವು. ಕರವಸ್ತ್ರವೊಂದೇ ನನ್ನ-ನಿನ್ನ ಸ್ನೇಹದ ದೃಢಸಂಬಂಧ ವನ್ನು ಚನ್ನಾಗಿ ವ್ಯಕ್ತಪಡಿಸುತ್ತಿತ್ತು. ಅದರಲ್ಲಿ ಒಂದು ಕಡೆಗೆ ರಾಧಾ ದೇವಿ, ಮತ್ತೊಂದು ಕಡೆಗೆ ಕೃಷ್ಣರಾಯ ಈ ಹೆಸರುಗಳು ಹಾಕಲ್ಪಟ್ಟಿದ್ದವು. ನೀನು ಇಂತಹ ವಸ್ತ್ರವನ್ನು ಚಂಪಾವತಿಯ ಕಡೆಗೆ ಕೊಡಬಹುದೆ?'

'ಅವಳೂ ನಾನೂ ಮೊದಲು ಏಕಜೀವವಾಗಿದ್ದೆವು. ಆಗ ಅವಳಿಗೆ ಆ ವಸ್ತ್ರವನ್ನು ತೋರಿಸಿದ್ದೆನು. ತಾನೂ ಅಂತಹ ವಸ್ತ್ರವನ್ನು ಹೆಣೆಯುವೆನೆಂದು ಹೇಳಿ ಆಕೆ ಅದನ್ನು ನೋಡಲಿಕ್ಕೆಂದು ನನ್ನಿಂದ ತೆಗೆದುಕೊಂಡಳು. ಮುಂದೆ ಇಂತಹ ಪ್ರಸಂಗವೊದಗುವದೆಂಬುದು ಆಗ ಹೇಗೆ ಗೊತ್ತಾಗಬೇಕು?'

'ದೇವರು ಎಲ್ಲ ವಿಪತ್ತಿನಿಂದ ಪಾರು ಮಾಡಿದನು; ಆದರೆ ಜನರಲ್ಲಿಯ ಬೊಬ್ಬಾಟವು ಹೆಚ್ಚಾಗತೊಡಗಿದೆ ಜನರಲ್ಲಿಯ ಅಸಂತೋಷಾಗ್ನಿಯು ಪ್ರಜ್ವಲಿತವಾಗಿ, ನಿಜಸ್ಥಿತಿಯು ಮತ್ತೆಲ್ಲಿ ಬೈಲಿಗೆ ಬರುವದೋ? ಎಂಬ ಅಂಜಿಕೆ.'

'ಜನರ ಕೂಗು ನಮ್ಮನ್ನೇನು ಮಾಡುವದು?'

'ಅದಕ್ಕೇನೂ ನಾನು ಅಷ್ಟು ಅಂಜುವದಿಲ್ಲ.' ಎಂದು ಕೃಷ್ಣರಾಯನು ನುಡಿದು, 'ನೀನು ಮಾತ್ರ ಮೊದಲು ಜಬಾನಿ ಕೊಟ್ಟದ್ದನ್ನು ನೆನಪಿನಲ್ಲಿಟ್ಟುಕೊಂಡು ಆದರಂತೆಯೆ ನ್ಯಾಯಾಧೀಶನ ಮುಂದೆ ಹೇಳಬೇಕು.'

'ನೀವು ಚಿಂತೆ ಬಿಡಿರಿ.' ಎಂದು ರಾಧಾದೇವಿಯು ನುಡಿದು, ಸ್ವಲ್ಪ ಯೋಚಿಸಿ—'ನನಗೆ ಇನ್ನೊಂದು ಹಂಚಿಕೆ ತೋಚುತ್ತದೆ.'

'ಅದೇನು?'

'ರಮೆಯು ಈಗ ಅತ್ಯಂತ ವಿಪನ್ನಾವಸ್ಥೆಗೀಡಾಗಿರುವಳು. ಅವಳು ಗೋವರ್ಧನರಾಯ ವಕೀಲನಲ್ಲಿರುವಳೆಂದೂ, ಅವಳಮೇಲೆ ವಕೀಲನ ಪಾಪ ದೃಷ್ಟಿಯು ಬಿದ್ದಿರುವದೆಂದೂ ನೀವೇ ಹೇಳಿರುವಿರಿ. ಅವಳು ಪತಿಯ ಪ್ರಾಣವನ್ನೇ ತನ್ನ ಪ್ರಾಣವೆಂದು ತಿಳಿದುಕೊಂಡಿರುವಳು. ಆದ್ದರಿಂದ ಸುರೇಂದ್ರರಾಯನನ್ನು ಬಿಡುಗಡೆ ಮಾಡಿಸುವೆನೆಂದು ಅಭಯ ಕೊಟ್ಟರೆ, ಅವಳು ಕೈವಶಳಾಗುವಳು. ಚಂಪಾವತಿಯ ಮುಖಾಂತರವಾಗಿ ಈ ಕಾರ್ಯವನ್ನು ನೆರವೇರಿಸಿರಿ. ಪಾತಿವ್ರತ್ಯದ ಆಡಂಬರವನ್ನು ತೋರಿಸುತ್ತ ಬೇರೆಯವರಿಗೆ ಹೆಸರಿಡುವ ಆ ರಮೆಗೆ ಪ್ರಾಯಶ್ಚಿತ್ತ ವಿಧಿಸಲಿಕ್ಕೆ ಈಗ ಒಳ್ಳೇ ಸಮಯವಿದೆ. ಅವಳೇ ಬಂದು ನಿಮ್ಮನ್ನು ಭೆಟ್ಟಿಯಾಗದಿದ್ದರೂ, ನೀವಾದರೂ ಅವಳನ್ನು ಕಂಡು ಅವಳ ಪತಿಯ ಮುಕ್ತತೆಯ ಬಗ್ಗೆ ಅಭಯ ಕೊಡಿರಿ. ಹೀಗೆ ಮಾಡಿದರೆ ಅವಳು ನಿಶ್ಚಯವಾಗಿಯೂ ನಿಮಗೆ ವಶಳಾಗುವಳು. ನೀವು ಇನ್ನೊಂದು ಕೆಲಸ ಮಾಡಿರಿ. ರಮೆಯು ಗೋವರ್ಧನರಾಯನಲ್ಲಿ ಅನುರಕ್ತಳಾಗಿರುವಳೆಂಬ ಸುದ್ದಿಯನ್ನು ಸುರೇಂದ್ರನ ಕಿವಿಯ ಮೇಲೆ ಹಾಕುವದಕ್ಕಾಗಿ ಸೆರೆಮನೆಯ ಕಾವಲುಗಾರರಿಗೆ ಹೇಳಿರಿ.'

ರಾಧಾದೇವಿಯ ಯುಕ್ತಿವಾದವನ್ನು ಕೇಳಿ ಕೃಷ್ಣರಾಯನು ಬೆರಗಾದನು. ಆಗ ಅವನು—'ರಾಧೇ! ನಿನ್ನ ಬುದ್ಧಿ ಕುಶಲತೆಗೆ ಬೆಲೆಯಿಲ್ಲ, ಬೆಲೆ

ಯಿಲ್ಲ! ಅಂತೆಯೇ ನೀನು ನನ್ನ ಅನುಗ್ರಹಕ್ಕೆ ಪಾತ್ರಳಾಗಿರುವೆ. ನೀನು ರುಗ್ಣಾಲಯದಲ್ಲಿರದೆ ಮನೆಯಲ್ಲಿದ್ದರೆ, ಇನ್ನೊಂದು ಬೇಟೆಯು ಇಷ್ಟು ಹೊತ್ತಿಗೆ ಸ್ವಾಧೀನವಾಗುತ್ತಿತ್ತು. ಕುಸುಮಾವತಿಯೂ, ಸೌಭಾಗ್ಯವತಿಯೂ ನಿನ್ನಂತೆ ಅಂತಃಕರಣಪೂರ್ವಕವಾಗಿ ಕೆಲಸ ಮಾಡುವವರಲ್ಲ. ಅವರಲ್ಲಿ ನಿನ್ನಷ್ಟು ಮೇಧಾಶಕ್ತಿಯೂ ಇಲ್ಲ.'

'ರಾಯರೇ, ನೀವು ನನ್ನ ರಾಯರಿಷ್ಟೇ ಅಲ್ಲ, ವರಿಷ್ಟ ಅಧಿಕಾರಿಗಳಿರುವಿರಿ. ನನ್ನ ಭಾಗ್ಯವಿಧಾತರು ನೀವೇ ಅಂದಮೇಲೆ ನಿಮ್ಮ ಸಲುವಾಗಿ ಕೈಲಾದಷ್ಟು ಕೆಲಸ ಮಾಡದಿರುವದು ನನ್ನ ಶೀಲವೇ? ನಿಮ್ಮ ಬಲೆಯಲ್ಲಿರುವ ಹೊಸ ಬೇಟೆ ಯಾವದು?'

'ಜವುಳಕೇದಗಿಹಳ್ಳಿಯಲ್ಲಿಯ ಶಿಕ್ಷಕನಾದ ದಿವಾಕರರಾಯನ ಕುವರಿ ಉಷೆಯು. ಆ ಉಷೆಯು ನಿಜವಾಗಿಯೂ ಉಷೆಯಂತಿರುವಳು. ಅವಳನ್ನು ನಿನ್ನ ಸ್ಥಳದಲ್ಲಿ ನಿಯಮಿಸಿರುವೆನು. ರಮೆಯಂತೆ ಅವಳೂ ಚಂಡಿಸ್ವಭಾವದವಳಾಗಿ ಕಾಣುತ್ತಾಳೆ.'

'ದಿವಾಕರರಾಯನ ಸ್ಥಿತಿಯು ತೀರ ಕೀಳುತರದ್ದಿರುವದೆಂದು ಕೇಳಿದ್ದೇನೆ. ಅವನು ಈಗ ಬೇನೆ ಬಿದ್ದಿರುವನೆಂಬದನ್ನೂ ಕೇಳಿರುವೆನು. ಇಂತಹ ದೈನಾವಸ್ಥೆಯಲ್ಲಿದ್ದ ಅವನು ಸ್ವಸಂತೋಷದಿಂದ ತನ್ನ ಕುಮಾರಿಯನ್ನು ನಿಮ್ಮ ಕೊರಳಿಗೆ ಕಟ್ಟಬಹುದು. ನೌಕರಿಯ ಆಶೆಯಿಂದ ಉಷೆಯಾದರೂ ಸ್ವಸಂತೋಷದಿಂದ ನಿಮ್ಮ ಕೈಗೆ ಬರಬಹುದು. ನಾನು ರುಗ್ಣಾಲಯದಿಂದ ಬೇಗನೆ ಹೊರಬೀಳಬಹುದು. ಆ ಮೇಲೆ ಉಷೆಯನ್ನೂ, ರಮೆಯನ್ನೂ ನಿಮ್ಮ ಹೇಳಿಕೆಯ ಮೇರೆಗೆ ನಡೆಯುಹಚ್ಚುವೆನು.'

'ರಾಧೆ! ನೀನು ಚತುರಳಿರುವೆ. ನಿನ್ನ ಚಾತುರ್ಯವು ಯಾರಿಗೂ ಸಾಧಿಸದು ನಿನ್ನ ಚಾತುರ್ಯದಿಂದ ಎಷ್ಟೋ ರೂಪವತಿಯರು ನನ್ನ ದಾಸಿಯರಾದರು; ಕುಲಕಾಮಿನಿಯರೆಂದು ಜಂಭ ಬಡೆಯುವವರು ಸಹ ನನ್ನ ಸೇವೆಗೆ ಸಿದ್ಧರಾದರು. ನಿನ್ನ ಯೋಗ್ಯತೆಯು ಘನವಾದದ್ದೆಂದು ಗೊತ್ತಾದುದರಿಂದಲೆ, ಒಮ್ಮೆಲೆ ದೊಡ್ಡ ಶಾಲೆಯ ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳಾದೆ. ನೀನು ರುಗ್ಣಾಲಯದಿಂದ ಹೊರಬಿದ್ದೊಡನೆಯೇ ನಿನ್ನನ್ನು ಹೆಣ್ಣು ಹುಡಿಗೆಯರ ಕನ್ನಡ ಶಾಲೆಗಳ ಮೇಲೆ ಉಪಪರೀಕ್ಷಕಳನ್ನಾಗಿ ನಿಯಮಿಸಬೇಕೆಂದುನಿರ್ಧರಿಸಿರುವೆನು. ಬದ್ರುದ್ದೀನಖಾನರು ಸದ್ಯದ ಪ್ರಕರಣದಲ್ಲಿ ನನ್ನ ಮೇಲೆ ಬಹಳೇ ಉಪಕಾರ ಮಾಡಿದ್ದರಿಂದ ಅವರ ತಂಗಿಯಾದ ಸೋಫಿಯಾ ಬೇಗಮಳನ್ನು ಹೆಣ್ಣು ಹುಡುಗೆಯರ ಉರ್ದೂ ಶಾಲೆಗಳ ಮೇಲೆ ಉಪಪರೀಕ್ಷಕ

ಳನ್ನಾಗಿ ನಿಯಮಿಸಿರುವೆನು.

'ವರಿಷ್ಠರ ಮನಸ್ಸು ಸಂತುಷ್ಟವಾಗುವಂತೆ ವರ್ತಿಸಿದರೆ ಯಾವದು ತಾನೇ ಅಸಾಧ್ಯವು! ಅರಸುಮೆಚ್ಚಿದರೆ ಅರ್ಧರಾಜ್ಯವೆಂಬದು ಸುಳ್ಳಲ್ಲ.' ರಾಧಾದೇವಿಯು ತಾನು ಉಪಪರೀಕ್ಷಕಳಾಗುವೆನೆಂಬ ಆನಂದದಿಂದ ನುಡಿದಳು.

ಅಷ್ಟರಲ್ಲಿ 'ರಾಧಾದೇವಿ!' ಎಂದು ನುಡಿಯುತ್ತ ನರ್ಸ ಗುಲಾಬಿಯು ಅಲ್ಲಿಗೆ ಬಂದಳು. ಕೂಡಲೆ ಕೃಷ್ಣರಾಯನು ಮಂಚಬಿಟ್ಟೆದ್ದು ಕುರ್ಚಿಯ ಮೇಲೆ ಕುಳಿತು—'ಬನ್ನಿರಿ, ಗುಲಾಬಿ ದೇವಿ!' ಎಂದು ನುಡಿದನು.

ಗುಲಾಬಿಯು ಅಲ್ಲಿಯೇ ಇದ್ದ ಮತ್ತೊಂದು ಕುರ್ಚಿಯ ಮೇಲೆ ಕುಳಿತು—'ನೀವು ಯಾವಾಗ ಬಂದಿರಿ ರಾವಸಾಹೇಬರೆ? ನಿಮ್ಮ ಬರು-ಹೋಗುವಿಕೆಯು ಸದ್ದಿಲ್ಲದೆ ನೆರವೇರತೊಡಗಿರುವದು. ನಿಮ್ಮೊಡನೆ ಒಂದು ವಿಷಯವಾಗಿ ಎರಡು ಮಾತಾಡಬೇಕಾಗಿದೆ.'

'ಗುಲಾಬಿದೇವಿ, ಯಾವ ವಿಷಯವದು?'

'ನಮ್ಮ ಕುಸುಮಾವತಿಯ ವಿಷಯ.'

'ಕುಸುಮಾವತಿದೇವಿಯವರ ವಿಷಯಕ್ಕೆ ನಿಮಗೆ ಏನು ಹೇಳುವದಿದೆ?'

'ರಾಧಾದೇವಿಯವರ ರಜೆಯಲ್ಲಿ ನೀವು ನಿನ್ನೆ-ಮೊನ್ನೆನವಳೂ ಹೆಚ್ಚು ಶಿಕ್ಷಣ ಹೊಂದದವಳೂ ಆದ ಸೌಭಾಗ್ಯವತಿ ವನಿತೆಯನ್ನು ಮುಖ್ಯ ಸ್ಕೂಲ ಮಿಸ್ಟ್ರೆಸ್ ಸ್ಥಳದ ಮೇಲೆ ನಿಯಮಿಸಿದ್ದಿರಿ. ಈಗ ಅವಳನ್ನು ಮತ್ತೆ ಉಪ ಶಿಕ್ಷಕಿಯನ್ನಾಗಿ ಮಾಡಿ, ಉಷೆಯೆಂಬ ಹದಿನಾರು ವರ್ಷದ ತರುಣಿಯನ್ನು ನಿಯಮಿಸಿರುವಿರೆಂದು ಕೇಳುತ್ತೇನೆ. ನಮ್ಮ ಕುಸುಮಾವತಿಯು ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳಾಗಲು ಅನರ್ಹಳೇ ಹೇಗೆ? ನಾವು ಮಾಡಿದ ಉಪಕಾರವು ನಿಮ್ಮ ಸ್ಮರಣೆಯಲ್ಲಿದ್ದಂತೆ ತೋರಲಿಲ್ಲ. ನೀವು ಉಪಕಾರಗೇಡಿಗಳಾಗಿ ವರ್ತಿಸಿದರೆ ಸದ್ಯದ ಪ್ರಕರಣವನ್ನು ಕೆಡಿಸುವದು ನಮ್ಮ ಕೈಯಲ್ಲಿದೆ.'

'ಗುಲಾಬಿದೇವಿ!' ಕೃಷ್ಣರಾಯರು ಗಾಬರಿಗೊಂಡು-'ನೀವು ಹೀಗೇಕೆ ಅಜ್ಞರಂತೆ ಮಾತಾಡುವಿರಿ? ರಾಧಾದೇವಿಯವರ ರಜೆಯ ಅವಧಿಯೇನು ಪರಮಾವಧಿಯಾಗಿರುವದು? ಅಲ್ಪದಿನದ ಮುಖ್ಯ ಸ್ಕೂಲ ಮಿಸ್ಟ್ರೆಸ್ ಪದವಿಯಲ್ಲಿ ಯಾವ ಲಾಭವಿದೆ? ಬೇಗನೆ ರಾಧಾದೇವಿಯವರು ಉಪಪರೀಕ್ಷಕಿಯರಾಗುವವರಿರುವರು. ಆಗ ಮುಖ್ಯ ಸ್ಕೂಲ ಮಿಸ್ಟ್ರೆಸ್ ಸ್ಥಳವನ್ನು ಕುಮಾರಿ ಕುಸುಮಾವತಿದೇವಿಯವರಿಗೇ ಕೊಡಬೇಕೆಂದು ಈಗಾಗಲೆ ಸಂಕಲ್ಪ ಮಾಡಿಕೊಂಡಿದ್ದೇನೆ. ಸ್ಥಿರವಾದ ಲಾಭ ಮಾಡಿಕೊಟ್ಟರೆ ಪ್ರಯೋಜನವಾಗುವದು. ನೀವು ನನಗೆ ಎಂಥ ಪ್ರಸಂಗದಲ್ಲಿ ನೆರವಾಗಿರುವಿರೆಂಬದನ್ನು ನಾನು ಜನ್ಮ-

ಜನ್ಮಾಂತರದಲ್ಲಿಯೂ ಮರೆಯುವಂತಿಲ್ಲ. ನೀವು ಮನಸ್ಸಿನಲ್ಲಿ ವಿಕಲ್ಪ ಭಾವನೆಗೆ ಆಸ್ಪದ ಕೊಡಬೇಡಿರಿ. ಈಗ ಉಷೆಯನ್ನು ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳನ್ನಾಗಿ ನಿಯಮಿಸಿದ್ದರಲ್ಲಿ ಒಂದು ರಹಸ್ಯವುಂಟು. ಆ ಕಾರ್ಯಕ್ಕೆ ನೀವು ಅಡ್ಡಾಗಬೇಡಿರಿ. ಸ್ತ್ರೀಯರಿಗೆ ಉತ್ತೇಜನವು ದೊರೆಯಬೇಕೆಂಬ ಉದ್ದೇಶದಿಂದ ಅವಳನ್ನು ಒಮ್ಮೆಲೆ ಮುಖ್ಯ ಸ್ಕೂಲ ಮಿಸ್ಟ್ರೆಸ್ಸಳನ್ನು ಮಾಡಿರುವೆನು. ಗುಲಾಬಿದೇವಿ, ಈಗಾದರೂ ನಿಮ್ಮ ಮನಸ್ಸು ಸಮಾಧಾನಗೊಂಡಿತೆ?'

'ನೋಡಿರಿ, ನೀವು ದೊಡ್ಡ ಅಧಿಕಾರಿಗಳು. ಈ ಕೆಲಸದಲ್ಲಿ ನೀವು ನಂಬಿಗೆಗೇಡಿತನ ಮಾಡಿದಿರೆಂದರೆ, ಮುಂದಾದರೂ ಸೇಡು ತೀರಿಸಿಕೊಳ್ಳುವ ಭಾವನೆಯು ನನ್ನಲ್ಲಿ ಹುಟ್ಟದಿರಲಾರದೆಂದು ಖಂಡಿತವಾಗಿ ಹೇಳುವೆನು.'

'ಗುಲಾಬಿದೇವಿ!' ಕೃಷ್ಣರಾಯರು ವಿನಯ-ಭಯಗಳಿಂದ—'ನೀವು ಒಮ್ಮೆಲೆ ಹೀಗೇಕೆ ಮಾತಾಡುವಿರಿ? ನಂಬಿದವರ ಕತ್ತು ಕೊಯ್ಯುವಂಥ ಕಟುಕನು ನಾನಲ್ಲ. ಕುಮಾರಿ ಕುಸುಮಾವತಿಯವರ ಚಿಂತೆಯನ್ನು ನೀವು ಬಿಡಿರಿ.'

ಕೃಷ್ಣರಾಯರ ಆಶ್ವಾಸನೆಯಿಂದ ಗುಲಾಬಿಯ ಮನಸ್ಸು ಸಮಾಧಾನವಾಯಿತೋ-ಇಲ್ಲವೋ ತಿಳಿಯಲಿಲ್ಲ. ಆಗ ರಾಧಾದೇವಿಯು—'ಗುಲಾಬಿದೇವಿ, ನನ್ನನ್ನಾದರೂ ನಂಬುವಿರೋ-ಇಲ್ಲವೋ? ನಾನು ಇವರಿಂದ ನಿಮ್ಮ ಭಗಿನಿಯವರ ಕೆಲಸ ಮಾಡಿಸುವೆನು. ನೀವು ಮಾಡಿದ ಉಪಕಾರವನ್ನು ರಾವಸಾಹೇಬರು ಒಂದು ವೇಳೆ ಮರೆತರೂ ನಾನು ಮರೆಯುವಂತಿಲ್ಲ.'

'ಆಗಲಿ ನೋಡೋಣ!' ಎಂದು ಗುಲಾಬಿಯು ನುಡಿದು—'ರಾಧಾದೇವಿ, ಕೃಷ್ಣರಾಯ ರಾವಸಾಹೇಬರೆ, ನಿಮ್ಮ ವಿಚಾರ-ವಿನಿಮಯವು ಸಾಗಲಿ. ನಿಮ್ಮ ಕಾರ್ಯಕ್ಕೆ ನನ್ನಿಂದ ಅಡ್ಡಿ ಬೇಡ.'

'ಛೇ! ಅಡ್ಡಿ ಏತರದು! ನೀವಿದ್ದರೆ ನಾಲ್ಕು ಆಪ್ತಾಲೋಚನೆಯ ಮಾತಾಡಲಿಕ್ಕೆ ಅಡ್ಡಿಯೇನಾಗುವದು? ನೀವೇನು ಪರಕೀಯರೆ?' ಎಂದ ಕೃಷ್ಣರಾಯರು ಉಪಚಾರಕ್ಕಾಗಿ ಆಡಿದರು.

'ಎದ್ದಿರೇಕೆ? ಕುಳಿತುಕೊಳ್ಳಿರಿ ಗುಲಾಬಿದೇವಿ!' ರಾಧಾದೇವಿಯು ಆಗ್ರಹದಿಂದ ಹೇಳಿದಳು.

'ಈಗ ಬರುವೆನು' ಎಂದು ನುಡಿದು ಗುಲಾಬಿಯು ಅಲ್ಲಿಂದ ಎದ್ದು ಆಫೀಸಿಗೆ ತೆರಳಿದಳು.

'ನೋಡಿದೆಯಾ ರಾಧೆ? ಈ ನರ್ಸಳಂತಹಳು ಸಹ ನನಗೆ ಬೆದರಿಸಹತ್ತಿರುವಳು. ಮಾನವು ಮಾರಾಟವಾಗಬಾರದೆಂದು ಎಷ್ಟು ಜನರ ಮುರವತ್ತು

ಕಾಯಬೇಕಾಗುವದೋ ಕಾಣೆ. ನಿನ್ನ ಮೇಲಿನ ಪ್ರಕರಣವು ನನಗೇನೂ ಸಂಬಂಧವಿಲ್ಲದಿದ್ದರೂ ನನ್ನ ಮನಸ್ಸು ಒಂದೇಸವನೆ ಕುದಿಯತೊಡಗಿದೆ.'

'ನನ್ನ ಸ್ಥಿತಿಯೂ ಹಾಗೆಯೇ ಆಗಿದೆ. ನನಗೆ ಒಂದು ವಿಧದ ಸಂಶಯವು ಬಂದಿದೆ. ಅದೇನಂದರೆ, ನಮ್ಮ ಮಗುವಾದ ಈ ಗಿರಿಮಾಜಿಯ ಕಾಲಗುಣವೇ ಕೆಟ್ಟದೆಂದು ನನಗೆ ತೋರತೊಡಗಿದೆ. ಪುತ್ರಲಾಭವಾದ ಬಗ್ಗೆ



ನಿಮಗೂ ನನಗೂ ಆನಂದವು ಇಲ್ಲವೇ ಇಲ್ಲ. ಈ ಹುಡುಗನು ಕರಿಗಾಲವನೆಂದು ಸಂಶಯವುಂಟಾಗಿದೆ. ಎಷ್ಟು ಔಷಧ ತೆಗೆದುಕೊಂಡರೂ ಇವನು ಗರ್ಭದಲ್ಲಿ ನಾಶವಾಗಲಿಲ್ಲ. ಹೊರಗೆ ಬಂದ ಮೇಲಾದರೂ ನಾಶವಾಗಬೇಕೆಂಬ ಇಚ್ಛೆಯಿಂದ ಔಷಧ ತೆಗೆದುಕೊಂಡೆನು. ಔಷಧ ತೆಗೆದುಕೊಂಡ ದಿನವೆ ನನ್ನ ಮೇಲೆ ಗಂಡಾಂತರವು ಒದಗಿತು. ಅಂತಹ ಗಂಡಾಂತರದಲ್ಲಿ ಸಹ ಇವನು ಪಾರಾಗಿ ಜೀವಂತನಾಗಿಯೇ ಜನಿಸಿದನು. ಹುಟ್ಟಿದ ಶಿಶುವಿನ ಕತ್ತು ಮುರಿದೊಗೆಯುವದಾಗದೆ ಇಟ್ಟಿರುವೆನು. ಕತ್ತು ಮುರಿದರೆ ಸರಕಾರದ ಭಯವೊಂದು! ನೋಡಿದಿರಾ, ಇವನ ಎಡಗಾಲ ಮೇಲೆ ನಿಮ್ಮ ಎಡಗಾಲ ಮೇಲಿನಂತೆಯೆ ಮತ್ಸ್ಯಾಕೃತಿಯ ಕಪ್ಪು ಚಿಹ್ನವಿದೆ. ಬಲಗೈಯಲ್ಲಿ ನಿಮಗಿದ್ದಂತೆಯೆ ಆರು ಬೆರಳುಗಳುಂಟು. ಮುಖವಂತೂ ನಿಮ್ಮ ಮುಖವನ್ನೇ ಅಚ್ಚಳಿಯದೆ ಹೋಲುತ್ತದೆ. ಈಗ ರುಗ್ಣಾಲಯದಲ್ಲಿರುವೆವೆಂದು ಒಳಿತಾಗಿದೆ. ನಾಳೆ ಮನೆಗೆ ಬಂದ ಮೇಲೆ ಈ ಶಿಶುವನ್ನು ನೋಡಿ ಜನರು ಏನೆನ್ನಬಹುದು?

ಇವನು ನಿಮ್ಮ ಮಗನೆಂದೇ ತಿಳಿಯಲಿಕ್ಕೆ ಅವರಿಗೆ ಇನ್ನೂ ಎಷ್ಟು ಆಧಾರ ಗಳು ಬೇಕು?'

'ನಿನ್ನ ಮಾತು ನಿಜವು; ಆದರೆ ಈಗ ಏನು ಮಾಡಬೇಕೆನ್ನುವೆ? ನೀನು ಹೇಳುತ್ತಿರುವಂತೆ ಈ ಶಿಶುವನ್ನು ನೋಡಿದರೆ ಜನರು ಕುಚೋದ್ಯ ಮಾಡು ವರು. ಈಗಲೆ ಅವರು ಇಲ್ಲದ ಗಲಭೆಯನ್ನೆಬ್ಬಿಸಿ ಬಿಟ್ಟಿರುವರು. ನಮ್ಮ ಗಿರಿ ರಾಜಿಯು ಅವರ ಗಲಭೆಯನ್ನು ಹೆಚ್ಚುಮಾಡುವನೆಂಬದರಲ್ಲಿ ಸಂದೇಹವಿಲ್ಲ'

'ರಾಯರೇ!' ರಾಧಾದೇವಿಯು ಮೆಲ್ಲನೆ—'ನನಗೊಂದು ಹಂಚಿಕೆಯು ತೋರುವದು.'

'ಅದೇನು?'

'ನಾನು ಈಗ ಹೇಗಾದರೂ ರುಗ್ಣಾಲಯದಲ್ಲಿರುವೆನು. ಡಾಕ್ಟರರಿಗೆ ಹೇಳಿ ಈ ಹುಡುಗನ ಹೆಚ್ಚಿನ ಬೆರಳೊಂದನ್ನು ಕೊಯ್ಸಿರಿ; ಹಾಗು ಎಡ ಗಾದದ ಮೇಲಿನ ಚರ್ಮವನ್ನು ಸುಲಿಸಿ ಬಿಡಿರಿ ಹೀಗಾದರೆ ಇದ್ದದ್ದರಲ್ಲಿಯೇ ಒಳಿತಾಗುವದು.'

'ನಿನ್ನ ಯುಕ್ತಿಯು ಸಮಂಜಸವಾಗಿ ತೋರುವದು; ಆದರೆ ಡಾಕ್ಟ ರು ಈ ಕೆಲಸ ಮಾಡಲಿಕ್ಕೆ ಒಪ್ಪಲಿಕ್ಕಿಲ್ಲ. ನಿಷ್ಕಾರಣವಾಗಿ ಕೊಯ್ಯುವ ಕೆಲಸ ಮಾಡಲಿಕ್ಕೆ ಅವರು ಬಹಳಮಾಡಿ ಸಿದ್ಧರಾಗುವದಿಲ್ಲ.'

'ಈ ಡಾಕ್ಟರರು ಒಪ್ಪದಿದ್ದರೆ ಬಿಡಲಿ. ನನ್ನ ಪ್ರಕೃತಿಯು ಗುಣವಾದ ಮೇಲೆ ಮತ್ತೊಬ್ಬ ಸರ್ಜನರ ಕಡೆಗೆ ಹೋಗೋಣ ಹೇಗಾದರೂ ಕರಿಗಾಲ ಗಿರಿರಾಜಿಯೆಂದೆನಿಸಿಕೊಳ್ಳುವದು ನನ್ನ ಮಗುವಿಗೆ ತಪ್ಪಿದರೆ ಸಾಕು.'

'ಅದರಲ್ಲೇನು? ನನಗೆ ಚಿಕ್ಕಂದಿನಲ್ಲಿ ಎಷ್ಟೋ ಜನರು ಕರಿಗಾಲ ಕೃಷ್ಣ ನೆಂದೆನ್ನುತ್ತಿದ್ದರು; ಆದರೆ ಈಗ ಹಾಗೆ ಅನ್ನುವ ಎದೆ ಯಾವನದು?'

'ನೀವು ದೊಡ್ಡ ಅಧಿಕಾರಿಗಳಿರುವಿರಿ. ಹಾಗೆಯೇ ನಿಮ್ಮ ಮಗನೂ ಆಗುವನೆಂದು ಹೇಳಲಿಕ್ಕೆ ನಿಮಗೆ ಜ್ಯೋತಿಷವು ಅವಗತವಿಲ್ಲ.'

'ನಾನು ಜೀವದಿಂದಿರಬೇಕು; ಅಂದರೆ ಗಿರಿರಾಜಿಯು ದೊಡ್ಡ ಕೆಲಸ ಮಾಡುವನೋ-ಇಲ್ಲವೋ ಎಂಬದನ್ನು ನಿದರ್ಶನಕ್ಕೆ ತಂದುಕೊಡುವೆನು.'

'ಜೀವದಿಂದಿರಲಿಕ್ಕೇನಾಗಿದೆ? ನೀವು ಐವತ್ತು ವರ್ಷದವರಾಗಿದ್ದರೂ ಹದಿನಾರು ವರ್ಷದ ಕನ್ಯೆಯನ್ನು ವಿವಾಹವಾಗಲಿಕ್ಕೆ ತಕ್ಕವರಿದ್ದಂತೆ ತೋರು ವಿ. ಹೆಸರಿಗೆ ತಕ್ಕಂತೆ ಹದಿನಾರು ಸಾಸಿರ ಸ್ತ್ರೀಯರನ್ನು ಆಳುವಂತಹ ಸಾಮರ್ಥ್ಯವೂ ನಿಮ್ಮಲ್ಲಿದೆ. ಇಂತಹರು ನಮ್ಮ ಗಿರಿರಾಜಿಯು ಪ್ರೌಢ ನಾಗುವವರೆಗೆ ಜೀವಿಸಿರುವದಿಲ್ಲವೆ?'

'ರಾಧೇ, ನೀನು ನಿನ್ನ ಕುಮಾರನಲ್ಲಿ ಇಷ್ಟು ವಾತ್ಸಲ್ಯವುಳ್ಳವಳಾಗಿ ರುವೆ; ಆದರೆ ಅವನ ಜನನದಿಂದ ದುಃಖಿತಳಾಗಿರುವೆ, ಇದರ ಇಂಗಿತವೇನು?'

'ಗಿರಿವಾಜಿಯು ಬೇರೆ ರೂಪದಿಂದ ಹುಟ್ಟಿದ್ದರೆ ನನಗೆ ಅಷ್ಟೊಂದು ಖೇದವಾಗುತ್ತಿದ್ದಿಲ್ಲ. ನೋಡಿರಿ ಇವನು ಮರಿ ಕೃಷ್ಣನೇ ಆಗಿರುವನು. ಕಾಲು-ಕೈ-ಮುಖ-ತಲೆ-ಬೆರಳು ಎಲ್ಲವೂ ನಿಮ್ಮಂತೆಯೇ ಇರುವವು. ಎಲ್ಲಕ್ಕೂ ನಿಚ್ಚಳ ಕಾಣುವದೆಂದರೆ, ಎಡಗಾಲಮೇಲಿನ ಕೃಷ್ಣವರ್ಣದ ಕಲೆಯು! ಗಿರಿವಾಜಿಯು ಕರಿಗಾಲಿನವನಾದುದರಿಂದಲೇ ನನ್ನ ಮನಸ್ಸಿನ ಸಮಾಧಾನವು ತೊಡೆದು ಹೋಗಿದೆ.'

'ರಾಧೇ, ನೀನು ಹೀಗೆ ಭಾವನಾಪ್ರಧಾನಳಾಗಬೇಡ. ಕಲೆಯೂ ಬೆರಳೂ ನಾಶವಾಗಲಿಕ್ಕೆ ಬರುವಂತಿದ್ದರೆ ಮಾಡಿಸುವೆನು. ಕುಚೋದ್ಯರಾದ ಜನರಿಗೆ ನಿನ್ನಂತೆ ನಾನೂ ಹೆದರುತ್ತಿರುವೆನು' ಎಂದು ನುಡಿದು, ಕೃಷ್ಣರಾಯರು ಆವಳ ಅನುಮತಿ ಪಡೆದು, ಡಾಕ್ಟರರ ಬಳಿಗೆ ಹೋದರು.

---

## ದುರ್ದೈವದ ಕೆಲವು ಆಟಗಳು.

**

ರಾಧಾದೇವಿಯ ಕೊಲೆಯ ಪ್ರಯತ್ನ ಸಂಬಂಧದ ಪ್ರಕರಣವಿನ್ನೂ ನ್ಯಾಯ ಸಭೆಯನ್ನು ಕಂಡಿದ್ದಿಲ್ಲ. ಪ್ರಕರಣದ ಸಾಕ್ಷಿ-ಪಟ್ಟಿಗಳನ್ನು ಸಿದ್ಧಪಡಿಸಿ ಕೊಳ್ಳಲಿಕ್ಕೆ ಫಿರ್ಯಾದೀ ಪಕ್ಷಕ್ಕೆ ಅವಧಿಯು ದೊರೆತಿತ್ತು. ತಮ್ಮ ಮನಸ್ಸಿನಂತೆ ಅನುಕೂಲವಾದ ಒಪ್ಪಿಗೆ ಕೊಡಬೇಕೆಂದು ಪೋಲೀಸರು ಸುರೇಂದ್ರ ರಾಯನ ಮೇಲೆ ಅತ್ಯಾಚಾರಗಳನ್ನು ನಡೆಯಿಸಿದ್ದರು. ಆ ಅತ್ಯಾಚಾರಗಳನ್ನು ಅನುಭವಿಸುವಾಗ ಅವನಿಗೆ ತನ್ನ ಜೀವವು ಸಹ ಬೇಸರಾಗಿ ಹೋಗುತ್ತಿತ್ತು. ಅವನು ಅತ್ಯಾಚಾರಗಳನ್ನು ಅನುಭವಿಸದ ವಿನಃ ಒಂದು ದಿನವಾದರೂ ಹುಸಿ ಹೋಗುತ್ತಿದ್ದಿಲ್ಲ. ಮರಣಕ್ಕಿಂತಲೂ ಹೆಚ್ಚಿನ ಯಾತನೆಗಳನ್ನನುಭವಿಸುವದಕ್ಕಿಂತ, ಅಪರಾಧವನ್ನು ಮೈ ಮೇಲೆ ತೆಗೆದುಕೊಂಡು ಒಮ್ಮೆಲೆ ಮರಣ ಹೊಂದುವದು ಲೇಸೆಂದು ಅವನಿಗೆ ತೋರತೊಡಗಿತ್ತು; ಆದರೆ ಅವನು ಅಪರಾಧವನ್ನು ಮೈಮೇಲೆ ತೆಗೆದುಕೊಂಡು ಮರಣದಂಡನೆಹೊಂದದಿರಲಿಕ್ಕೆ ಒಂದೇ ಒಂದು ಕಾರಣವಿತ್ತು. ಅದೇನಂದರೆ, ಅವನು ತನ್ನ ಹೆಂಡತಿಯ ಹಾಗು ಮಗನಲ್ಲಿರಿಸಿದ ಮಮತೆಯು. ತನ್ನ ಮರಣಾನಂತರದಲ್ಲಿ ಸಾಧ್ವೀಮಣಿಯಾದ ರಮೆಗೂ, ಬಾಲಕನಾದ ವಸಂತನಿಗೂ

ಆಧಾರವಿಲ್ಲದಂತಾಗುವದೆಂದು, ಅವನು ಎಷ್ಟಾದರೂ ಅತ್ಯಾಚಾರಗಳನ್ನನು ಭವಿಸತೊಡಗಿದ್ದನು. ದೇವರು ಅಂಥನಿಲ್ಲ. ದೇವರು ನಿರಪರಾಧಿಯಾದ ತನ್ನ ಮೇಲೆ ದಯೆದೋರದಿರಲಾರನೆಂದು ಅವನ ದೃಢತರವಾದ ಭಾವನೆಯಿತ್ತು. ತನ್ನ ಮೇಲಿನ ಅಪರಾಧವು ತೊಡೆದು ಹೋಗುವಂತೆ ಪ್ರಯತ್ನಿಸಬೇಕೆಂದು ಅವನು ದಿನಾಲು ಗೋವರ್ಧನರಾಯನ ಪಾದಗಳನ್ನು ತನ್ನ ಕಣ್ಣೀರಿನಿಂದ ತೊಳೆಯುತ್ತಿದ್ದನು. ತಾನು ಸತ್ತರೂ ಚಿಂತೆಯಿಲ್ಲ. ನಿರಪರಾಧಿಯಾಗಿ ಸಾಯುವಂತೆ ಮಾಡಿರಿ. ಇಂಥವಳು ಇಂಥ ಕೊಲೆಗಡಕನ ಹೆಂಡತಿಯು, ಇಂಥವನು ಇಂಥ ಕೊಲೆಗಡಕನ ಮಗನು ಎಂದು ಜನರಿಂದ ಅನ್ನಿಸಿಕೊಳ್ಳುವ ಪ್ರಸಂಗವು ತಪ್ಪಿದರೆ ಸಾಕೆಂದು ಅವನು ಗೋವರ್ಧನರಾಯನ ಮುಂದೆ ಎಷ್ಟೋ ಸಾರೆ ಅಂದಿದ್ದನು. ಗೋವರ್ಧನರಾಯನಾದರೂ ಅವನ ಮನಸ್ಸು ಸಮಾಧಾನಗೊಳ್ಳುವಂತೆ ನಾಲ್ಕು ಮಾತುಗಳನ್ನಾಡುವದಕ್ಕೇನೂ ಕಡಿಮೆ ಮಾಡಿದ್ದಿಲ್ಲ.

ರಮಾ-ವಸಂತರ ಮೇಲೆ ಸುರೇಂದ್ರರಾಯನ ಪ್ರೇಮವು ಎಷ್ಟಿತ್ತೆಂಬದನ್ನು ಹೇಳಲಸಾಧ್ಯವು ಕುಮಾರನಾದ ವಸಂತನಿಗೆ ದಿನಾಲು ಎರಡುತುತ್ತು ಉಣಿಸದೆ ಅವನು ಎಂದೂ ಉಣ್ಣುತ್ತಿದ್ದಿಲ್ಲ. ರಮಾದೇವಿಯು ಕೈ ಮುಟ್ಟಿ ಬಡಿಸದಿದ್ದರೆ ಅವನ ಹೊಟ್ಟೆಯೇ ತುಂಬುತ್ತಿದ್ದಿಲ್ಲ ಅವಳಾದರೂ ಪತಿಯನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಆ ದಂಪತಿಗಳನ್ನು ನೋಡಿದರೆ ಅವರಿಗೆ ಸಾವಿತ್ರಿ-ಸತ್ಯವಾನರೆಂದುಯಾರಾದರೂಅನ್ನುವಂತಿತ್ತು! ಪತಿಗೆ ಪ್ರಿಯಕರವಾದ ಕೆಲವು ಊಟದ ಒಡವೆಗಳನ್ನು ರಮಾದೇವಿಯು ಒಂದು ಎಲೆಯ ಮುಟ್ಟಿಗೆ ಸಿದ್ಧಪಡಿಸುತ್ತಿದ್ದಳು. ಬಡತನದಸಂಸಾರದಲ್ಲಿ ಹಿಡಿತದಿಂದ ನಡೆಯುವದು ಅವಳ ಸ್ವಭಾವವೇ ಆಗಿತ್ತು. ಹೆಂಡತಿಯ ಈ ಹಿಡಿತದ ವ್ಯವಹಾರವು ಅವಳ ಬಾಯಿಗೆ ಗಡ್ಡೆಕೊಡುವಂಥದೆಂದು ತಿಳಿದು, ಸುರೇಂದ್ರರಾಯನು ಅಂತಹ ಒಡವೆಗಳಲ್ಲಿ ಅರ್ಧವನ್ನು ಸೇವಿಸಿ, ಉಳಿದ ಅರ್ಧವನ್ನು ಹೆಂಡತಿಯ ಸಲುವಾಗಿ ಕಾಯ್ದಿಡುತ್ತಿದ್ದನು. ಪತಿಯುಂಡ ಎಲೆಯಲ್ಲಿ ಊಟ ಮಾಡದಿದ್ದರೆ ರಮಾದೇವಿಯ ಹೊಟ್ಟೆಯೇ ತುಂಬುತ್ತಿದ್ದಿಲ್ಲ. ಇಂತಹ ರಮಾ-ಸುರೇಂದ್ರರ ಅವಸ್ಥೆಯು ಅಚಿಂತ್ಯನೀಯವಾದ ಗಂಡಾಂತರದಿಂದ ಎಂತಹದಾಗಿತ್ತೆಂಬದನ್ನು ಯೋಚಿಸದಿರುವದೇ ಮೇಲು!

ಸುಮಾರು ನಾಲ್ಕುತಾಸು ರಾತ್ರಿಯಾಗಿತ್ತು. ಸುರೇಂದ್ರರಾಯನು ಸೆರೆಮನೆಯಲ್ಲಿ ಮಲಗಿದ್ದನು. ಅವನಿಗೆ ಅದೇ ನಿದ್ದೆ ಹತ್ತುತ್ತಿತ್ತೋ-ಇಲ್ಲವೋ ಅಷ್ಟರಲ್ಲಿ—'ರಮೆ! ವಸಂತ, ವಸಂತ!' ಎಂದು ಕೂಗಿ ಎದ್ದು ಕುಳಿತನು.

ಅಲ್ಲಿ ರಮೆಯೆಲ್ಲಿ ಬರಬೇಕು? ವಸಂತನೆಲ್ಲಿಂದ ಬರಬೇಕು? ಅದು ಅವನ ಮನೆ ಯಿದ್ದಿಲ್ಲ, ಸೆರೆಮನೆಯಾಗಿತ್ತು. ಬಳಿಕ ಅವನು ನಿಟ್ಟುಸಿರು ಬಿಟ್ಟು, ಕಣ್ಣೀರುದುರಿಸುತ್ತ ಕುಳಿತುಕೊಂಡನು. ಆಗ ಸೆರೆಮನೆಯ ಹೊರಗೆ ಕಾವಲುಗಾರರ ನಾಯಕನೂ ಒಬ್ಬ ಸಿಪಾಯಿಯೂ ಏನೇನೋ ಮಾತಾಡುತ್ತಿದ್ದರು. ಅವರ ಮಾತುಗಳು ಸುರೇಂದ್ರರಾಯನಿಗೆ ಸ್ಪಷ್ಟವಾಗಿ ಕೇಳುತ್ತಿದ್ದವು.

'ನಮ್ಮ ಸೆರೆಯಾಳು ಸುರೇಂದ್ರನ ಹೆಂಡತಿ ರಾಮವ್ವಾ ಗೋವರ್ಧನ ರಾಯ ವಕೀಲನ ಕೈ ಹಿಡಿದುಕೊಂಡು ಹೋದಳಂತೆ. ಸಾಲೀ ಸಾಬ್ರು ನೌಕರಿ ಕೊಡ್ತೇವಿ ಬಾ ಅಂದ್ರಂತೆ, ಗಂಡ ಸತ್ತಮ್ಯಾಗ ನೌಕ್ರೀಗೆ ಬರ್‍ತೀನಿ, ಅಂತಾ ಅಂದಳಂತೆ. ನಾ ಇರಾತಂಕಾ ನಿಂಗ ನೌಕ್ರಿಯಾಕ್ಬೇಕ? ಹೆಂಡ್ತೀಕಿಂತಾ ಬೇಶಿ ನೋಡಿಕೊಂಡೋಗ್ತೀನಿ ಅಂತಾ ವಕೀಲರು ಅವಳಿಗೆ ಅಂತಾರಂತೆ. ಏನ್ಮಾಡ್ತಾಳಾ ನೋಡ್ಬೇಕು ಆ ಹೊಯ್ಯಾಲಿ. ವಕೀಲರ ಪಾಲಾಗ್ತಾಳೋ, ಸಾಲೀ ಸಾಬ್ರ ಪಾಲಾಗ್ತಾಳೋ?' ಎಂದು ಸಿಪಾಯಿಯು ನಾಯಕನಿಗೆ ಹೇಳಿದನು.

'ನಿನಗ್ಯಾರು ಹೇಳಿದ್ರೋ?' ಎಂದು ನಾಯಕನು ಕೇಳಿದನು.

'ನಮ್ಮ ಕೊತವಾಲ ಸಾಬ್ರ ತಂಗಿ ಸೋಪಿಯಾ ಬೇಗಮ್ಮನವರು ದೊಡ್ಡ ಹಾಫೀಸರರಾಗಿಲ್ಲಿವೆ? ಅವರು ನನ್ನ ಹೆಂಡ್ತೀಮುಂದ ಹೇಳಿದ್ರಂತೆ. ಚಂಪವ್ವನೆಂಬಾಕಿ ನಮ್ಮ ಸೆರೆಮನ್ಯಾಗ ಒಂದು ದಿವ್ಸ ಬಂದಿದ್ದಿಲ್ಲ? ಅವಳು ಇನಸ್ಪೆಕ್ಟರ ಸಾಬ್ರ ಕೂಡಾ ಒಳನೆಂಟಸ್ತನಾ ಮಾಡ್ತಾಳಂತೆ'

'ಅಲ್ಲಿ ರಾಮವ್ವಾ ಬೇಕಾದಾಂಗ ಚಕ್ಕಂದಾ ಹೊಡೂತಾಳ, ಇಂವಾ ರಾಮಪ್ಪ 'ರಮಾ ವಸಂತಾ' ಅಂತಾ ಬಡಬಡಸ್ತಾನ'

'ಹ್ಯಾಂಗರ ಮಾಡಿ ಗಂಡನ್ನ ಕೊಲ್ರಿ ಅಂತಾ ರಾಮವ್ವಾ ಇನಸ್ಪೆಕ್ಟರ ಸಾಬ್ರ ಮುಂದೆ ಹೇಳ್ತಾಳಂತ."

'ಭಲೆ! ಎಂತಾ ರಕ್ಕಸ ಹೆಣ್ಣದು! ಗಂಡನ್ನ ಕೊಂದು ರಂಡೆಯಾಗ ಬೇಕಂತಾಳಲ್ಲ ಆ ಭಂಡ ಮುಂಡೆ!'

'ಇಂತಾ ಗಂಡ್ರು ಆಕೆಗೆ ಏಸ ಮಂದ್ಯೋ ಏನೋ!'

'ಆಗ್ಲಿ ಬಿಡು. ಮಾಡಿದಾವ ಉಣತಾನ ಮಣಿ ಅಂತಾ ಕಡಬು. ರಾದ ವ್ವನ ಮೇಲೆ ಕೈ ಮಾಡಾಕ ಹೋದಾವನ ಹೆಂಡ್ತಿ ಮ್ಯಾಗ ಮಂದಿ ಕೈ ಮಾಡ್ದ ಯಾಕೆ ಬಿಟ್ಟಾರು? ರಾದವ್ವಾ ಚಲೋ ಹೆಂಗ್ಸು. ಹ್ಯಾಂಗರ ಸತ್ತ ಕೆಟ್ಟು ಪಾರಾದ್ಲು. ಇವನ ಹೆಂಡ್ತಿ ಊರ ಹೊಯ್ಯಾಲಿ. ತಾನಾಗಿ ವಕೀಲ್ರು, ಸಾಹೆಬ್ರು ಇಂತಾ ದೊಡ್ಡ ದೊಡ್ಡ ಜನರ ಕೈ ಹಿಡಿದುಕೊಂಡು ಅಡ್ಡಾಡ್ಲಾಕ ಹತ್ತೀದಾಳ.'

'ರಾದವ್ವನಂತಾ ಗರ್ತಿಗಂಗವ್ವನ ವ್ಯಾಗ ಕೈ ಮಾಡಿದ ಪಾಪ ಎಲ್ಲಿ ಗೋದ್ರ ಬಿಟ್ಟೇತು? ಅದಕ್ಕ ಈ ಸುರೇಂದ್ರನ ಹೆಂಡ್ತಿ ಕಂಡ ಕಂಡವ್ರ ಕೈ ಹಿಡಿಲಾಕ ಹತ್ತಿದಾಳ.'

ಶಿಪಾಯಿಯ ಹಾಗು ನಾಯಕರ ಭಾಷಣಗಳು ಸುರೇಂದ್ರರಾಯನ ಕಿವಿಯಲ್ಲಿ ಕಾದೆಣ್ಣೆ ಸುರವಿದಕ್ಕಿಂತಲೂ ಹೆಚ್ಚಾಗಿ ವೇದನೆಯನ್ನುಂಟು ಮಾಡಿದವು. ರಾಧಾದೇವಿಯ ಪ್ರೇರಣೆಯಿಂದ ಕೃಷ್ಣರಾಯನು ಕೊತವಾಲನಿಗೆ ಹೇಳಿ, ಶಿಪಾಯಿ-ನಾಯಕರಿಂದ ಈ ರೀತಿ ಮಾತಾಡತೊಡಗಿಸಿರುವನೆಂಬದು ಪಾಪ! ಅವನಿಗೆ ಹೇಗೆ ಗೊತ್ತಾಗಬೇಕು? ಕೊತವಾಲನು ಒಂದು ಹೇಳಿದ್ದರೆ, ಅದಕ್ಕೆ ಉಪ್ಪು ಕಾರ ಹಚ್ಚಿ, ಅದರ ಜೊತೆಗೆ ಮತ್ತೊಂದು-ಮಗದೊಂದು ಸುದ್ದಿಯನ್ನು ಮಾತಾಡಲಿಕ್ಕೆ ಶಿಪಾಯಿಗಳಿಗೆ ಬರುತ್ತಿದ್ದಿಲ್ಲವೆಂಬಂತಿದ್ದಿಲ್ಲ. ರಾಧಾದೇವಿಯು ಒಂದು ಹೇಳಿದ್ದರೆ, ಕೃಷ್ಣರಾಯನು ಕೊತವಾಲನಿಗೆ ಎರಡು ಹೇಳಿದ್ದನು. ಕೊತವಾಲನು ಎರಡು ಆಡಿದ್ದರೆ, ಶಿಪಾಯಿ-ನಾಯಕರು ನಾಲ್ಕಾಡತೊಡಗಿದ್ದರು. ಸುರೇಂದ್ರರಾಯನು ಎಂಥವನಿದ್ದರೂ ಸೆರೆಯಾಳಾಗಿದ್ದನು. ಅವನು ನೊಂದಾನು-ಬೆಂದಾನೆಂಬ ಪರಿವೆಯು ಪೋಲೀಸರಿಗೆಲ್ಲಿಂದ ಬರಬೇಕು?

'ಪೋಲೀಸದಾದಾಶನವರೆ, ನೀವು ಆಡಿದ ಸಂಗತಿಗಳೆಲ್ಲ ನಿಜವೇನು?'

'ಎಲಾ ಇವನ!' ಶಿಪಾಯಿಯು ಬೆದರಿದವನಂತೆ ನಟಿಸಿ-"ನಿದ್ದಿ ಹತ್ತೇತಂತ ಮಾತಾಡಿದ್ವಿ. ಇನ್ನೂ ಎಚ್ಚಾರ ಅದಾನಲ್ಲಪಾ! ಎಲ್ಲಾ ಕೇಳ್ದೇನೋ ಮಾರಾಯಾ!"

'ಎಲ್ಲಾ ಕೇಳಿರುವೆನು. ನೀವು ಹುಡುಗಾಟಿಕೆ ಮಾಡುವಿರೊ? ನಿಜವಾದ ಸುದ್ದಿಯನ್ನೇ ಆಡುವಿರೊ?'

'ಹೊತ್ತ ಹೋಗ್ಲಾರದ ಮಾತಾಡ್ತೇವೇಳಪಾ! ನಿನ್ನ ಹೇಣ್ತಿ ಗರ್ತಿ ಗಂಗವ್ವ. ಆಕಿ ಒಮ್ಮ್ಯಾಕ ಈಸ್ಮಂದೀ ಕೈ ಯಾಕ ಹಿಡ್ಯಾಳು?'

'ಕರೆ ಸಂಗ್ತೀ ಅನ್ಲಾಕ ಇಷ್ಟ ಬೆದರತೀ ಯಾಕೋ? ನಮಗೇನ ಇವಾ ಸಂಬಳಾ ಕೊಡ್ತಾನ?' ಎಂದು ನಾಯಕನು ನುಡಿದನು.

'ಹೇಳಬ್ಯಾಡಪಾ! ನಾಳೆ ಬಾಳೇವ ಕೆಟ್ಟೇತು!'

'ಇವಾ ಜೀವದಿಂದ ಉಳದ್ರ ಬಾಳೇವ ಕೆಡೋದಲ್ಲ? ಇವನ ಬಾಳೇವ ಕೇಟ್ಹೋಗೈತಿ. ಆಕಿ ಬಾಳೇವ ಚಂದಾಗಾಕ ಹತ್ತೇತಿ. ಮಂದೀ ಬಾಳೇವ ಕೆಡ್ಸಾಕ ಹೋದ್ರ ಹೀಗ ಸೈ ಆಗೋದು! ರಾದವ್ವನಂತಾ ಹೆಣ್ಣು ಮಗಳು ಬೂಮಿಮ್ಯಾಗ ದೀಪಾಹಚ್ಚಿ ಹುಡುಕಿದ್ರೂ ಕಾಣಲಿಲ್ಲ. ಅಂತಾಕೀ ಮ್ಯಾಗ

ಕೈ ಮಾಡಿದ್ರ ಆ ಪಾಪ ಎಲ್ಲಿಗೋದ್ರ ಬಿಟ್ಟೀತು!'

'ನಾನು ರಾಧಾದೇವಿಯವರ ಮೇಲೆ ಕೈ ಮಾಡಿಲ್ಲ ನಾಯಕರೆ!' ಎಂದು ಸುರೇಂದ್ರನು ಗದ್ಗದ ಕಂಠದಿಂದ ನುಡಿದನು.

'ಹಾ! ಹ್ಯಾಗ ಮಾಡತಾನ ನೋಡ! ಮೈಯಾಗಿನ ಎಲಬು ಪುಡಿ ಆದ್ರು ಇನ್ನೂ ತಪ್ಪು ಒಪ್ಪಾಣಿಲ್ಲ. ಬಿಳೀ ಕುಲದಾಗ ಇಂತಾ ಕಟಗನ್ನ ಎಂದೂ ಕಂಡಿದ್ದಿಲ್ಲ ಮಾರಾಯಾ! ನಮ್ಮ ದೈವ ಚಲೋದಂತಾ ಸೀನೊ ಬ್ಬಾವ ಕಂಡಿ. ಇಷ್ಟರಾಗ ನೀ ಏಸ ಹೆಣ್ಣ ಕೊಂದು ಏಸ ಹೆಣ್ಣ ಬಾಳೀಗೇಡ ಮಾಡೀದೆಪಾ ಬಂಟಾ! ನೀನೇ ಗಂಡ್ಸು. ಬೂವ್ಯಾಗ ಮತ್ಯಾರೂ ಮೀಸೀ ಹೊತ್ತಗೊಂಡ ಗಂಡಸ್ರುಇಲ್ಲೇ ಇಲ್ಲ ನೋಡು! ನಿನ್ಹ ಸರಿ ಹೆಸ್ತೀ ಕೂಡ್ಯಾಳ! ಈಂಡ ಸಾವುತಾನ ಉಳ್ಯಾಣಿಲ್ಲ ಅಂತಾ ತಿಳದ ಕೂಡ್ಲೆ, ಊರಾಗ ಅಂಗ್ಡೀನ ಹಾಕಿ ಬಿಟ್ಲ ಬಾದ್ದೂರ!' ಎಂದು ನಾಯಕನು ಗಂಭೀರತೆಯಿಂದಾಡಿದನು.

ಸುರೇಂದ್ರರಾಯನು ಕಿವಿಗಳ ಮೇಲೆ ಕೈಯಿಟ್ಟುಕೊಂಡನು. ಅವನ ಹೃದಯದಲ್ಲಿ ಒಂದು ವಿಧವಾದ ಜ್ವಾಲೆಯು ಪ್ರಜ್ವಲಿತವಾಯಿತು. ಸಂತಾಪಾತಿಶಯದಿಂದಲೂ ದುಃಖಾವೇಗದಿಂದಲೂ ಅವನ ಬುದ್ಧಿಯೇ ಭ್ರಮಿಸಿದಂತಾಯಿತು. ತನ್ನ ಕಣ್ಣಿಗೆ ಸೀತಾ-ಸಾವಿತ್ರಿಯಂತೆ ಕಾಣುತ್ತಿದ್ದ ರಮೆಯು ಒಮ್ಮೆಲೆ ಹೀಗೆ ವಿಶ್ವಾಸಘಾತ ಮಾಡಿ, ಹೇಗೆ ಅಡ್ಡದಾರೀ ಬಿದ್ದಳೆಂದು ಅವನು ಬಹು ಪರಿಯಾಗಿ ವಿಚಾರಿಸಿದನು. ಅತ್ತತ್ತ ಅವನ ಕಣ್ಣುಗಳು ಕೆಂಪಗಾದವು. ಮೇಲೆ ಮೇಲೆ ಸಾಧ್ವಿಯಂತೆ ನಟಿಸುತ್ತ ಹೆಂಡತಿಯು ತನ್ನ ಕೊರಳು ಕೊಯ್ದಳೆಂದು ಅವನು ತಿಳಿದನು. ಅದೇ ವೇಳೆಯಲ್ಲಿ ಅವನಿಗೆ ಭರ್ತೃಹರಿಯ ಛಿನಾಲ ರಾಣಿಯ ನೆನಪಾಯಿತು. ಹಗಲು ಕಾಗೆಗಳ ಕೂಗಿಗಂಜಿ ಯಾವ ರಾಣಿಯು ಪತಿಯನ್ನು ಅಪ್ಪಿಕೊಳ್ಳುತ್ತಿದ್ದಳೋ, ಅದೇ ಕುಲಟೆಯು ರಾತ್ರಿಯಲ್ಲಿ ಪ್ರೇತದ ನೌಕೆಯಲ್ಲಿ ಕುಳಿತು ನರ್ಮದೆಯನ್ನು ದಾಟಿ ಜಾರನೊಡನೆ ಜಾರಕರ್ಮ ಮಾಡುತ್ತಿದ್ದ ಸಂಗತಿಯು ಅವನ ನೆನಪಿಗೆ ಬಂದೊಡನೆಯೆ ತನ್ನ ಪತ್ನಿಯೂ ಛಿನಾಲ ರಾಣಿಯ ಮಾಲಿಕೆಯೊಳಗಿನ ಮಣಿಯೇ ಆಗಿರುವಳೆಂದು ಭಾವಿಸಿದನು. ದ್ವಿರಂಗೀ ಜಗದ ತಂತ್ರಗಳು ಆ ಸುಶೀಲನಾದ ಸಾಧು ಸುರೇಂದ್ರನಿಗೆ ಹೇಗೆ ತಿಳಿಯಬೇಕು?

ವ್ಯಭಿಚಾರಣಿಯಾದ ಭಾರ್ಯೆಯ ಸಲುವಾಗಿ ಎಷ್ಟು ಕಷ್ಟಬಡುತ್ತಿದ್ದೆನಲ್ಲ! ನೌಕರಿ ಮಾಡುವದೂ, ವರಿಷ್ಠರ ಬಿರಿನುಡಿಗಳನ್ನು ತಾಳಿಕೊಂಡು ಅದನ್ನು ಕಾಯ್ದುಕೊಳ್ಳುವದೂ ರಮೆಗಾಗಿಯೇ ಅಲ್ಲವೆ? ರಾಧಾದೇವಿಯ ಪ್ರಕರಣದಲ್ಲಿಜೀವವನ್ನುಳಿಸಿಕೊಳ್ಳಬೇಕೆಂದು ಚಡಪಡಿಸುವದಾದರೂ ಅವಳ

ಗಾಗಿಯೇ! ಆದರೆ ರಮೆಯು ಈಗ ಗೋವರ್ಧನನ ರಮೆಯು! ಕೃಷ್ಣನ ರಮೆಯು! ಮೊದಲಾದ ವಿಚಾರಗಳು ಹೃದಯದಲ್ಲಿ ಹುಟ್ಟಿ ಅವನು ಹತಾಶ ನಾದನು. ಬೆಳಗಾಗುವ ವರೆಗೆ ಅವನ ಮನಸ್ಸಿನಲ್ಲಿ ಇವೇ ವಿಚಾರಗಳು ನಡೆ ದಿದ್ದವು. ಒಮ್ಮೆ ಬೆಳಗಾಯಿತು. ಸುಪರಿಂಟೆಂಡೆಂಟ ಸಾಹೇಬರು ಅಪ ರಾಧಿಯ ವಿಚಾರಣೆಗಾಗಿ ಸ್ವಂತ ಬರುವವರಿರುವರೆಂದು ಪೋಲೀಸರುಮಾತಾ ಡುತ್ತಿದ್ದುದನ್ನು ಅವನು ಕೇಳಿದನು. ಕೂಡಲೆ ಅವನು ಮನಸ್ಸಿನಲ್ಲಿ ಏನೋ ನಿರ್ಧರಿಸಿಕೊಂಡನು.

ಪೋಲೀಸ ಸುಪರಿಂಟೆಂಡೆಂಟರು ಸತ್ಯನಿಷ್ಠರೂ, ದಯಾವಂತರೂ ಆಗಿದ್ದರು. ಇಂತಹ ಪ್ರಕರಣದಲ್ಲಿ ವಿಚಾರಣೆಗಾಗಿ ಅವರು ಬರುತ್ತಿರಲಿಲ್ಲ; ಆದರೆ ಸದ್ಯದ ಪ್ರಕರಣವು ಅತ್ಯಂತ ಮಹತ್ವದ್ದಿರುವುದೆಂದೂ, ದೊಡ್ಡ ದೊಡ್ಡ ಅಧಿಕಾರಿಗಳು ಮುರವತ್ತಿಗೊಳಗಾಗಿರುವದರಿಂದ ಅಪರಾಧಿಗಳು ಒತ್ತಟ್ಟಿಗುಳಿದು, ನಿರಪರಾಧಿಗಳು ಸಾಯತೊಡಗಿರುವರೆಂದೂ, ಈ ಪ್ರಕರಣ ದಲ್ಲಿ ಪೋಲೀಸ ಸುಪರಿಟೆಂಡೆಂಟ ಸಾಹೇಬರು ವಿಚಾರಣೆ ಮಾಡದಿದ್ದರೆ, ಸುಳ್ಳು ಸಾಕ್ಷಿಗಳು ನಿರ್ಮಾಣವಾಗಿ,ನ್ಯಾಯಾಸ್ಥಾನದ ಮುಂದೆ ನಿಲ್ಲಿಸಲ್ಪಟ್ಟು ನ್ಯಾಯದೇವತೆಯ ಕೊಲೆಯಾಗುವದೆಂದೂ, ಊರೊಳಗಿನ ಪ್ರಮುಖ ಜನರು ಸಾಹೇಬರ ಕಡೆಗೆ ವಿನಂತಿ ಪತ್ರ ಕಳುಹಿಸಿದ್ದರು. ಸಾಹೇಬರು ಆ ವಿನಂತಿ ಪತ್ರಿಕೆಯ ಸುದ್ದಿಯನ್ನು ಬೈಲಿಗೆಳೆಯದೆ, ಪ್ರಕರಣದ ಸೂಕ್ಷ್ಮನಿರೀ ಕ್ಷಣೆ ಮಾಡಬೇಕೆಂದು ನಿಶ್ಚಯಿಸಿ, ಸೆರೆಮನೆಗೆ ಬಂದರು.

ಸೆರೆಯಾಳುವಾದ ಸುರೇಂದ್ರನು ಪೋಲೀಸ ಸಾಹೇಬರ ಮುಂದೆ ನಿಲ್ಲಿ ಸಲ್ಪಟ್ಟನು. ಆಗ ಅವರು ಶಾಂತಸ್ವರದಿಂದ—'ನಿನ್ನ ಹೆಸರೇನು?'

'ಸುರೇಂದ್ರ!'

'ಉದ್ಯೋಗವೇನು?'

'ಕನ್ನಡ ಶಾಲೆಯಲ್ಲಿ ಶಿಕ್ಷಕನಿರುವೆನು

'ಶಿಕ್ಷಣ ಖಾತೆಯಲ್ಲಿರುವವನಾದ ನೀನು ಕೊಲೆಯಂತಹ ಅಘೋರ ಕೃತ್ಯಮಾಡಲಿಕ್ಕೆರಾಧಾದೇವಿಯಿಂದ ಅಂತಹ ಅಪರಾಧವೇನು ಘಟಿಸಿತ್ತು?'

'ಈ ಸಂಗತಿಯು ಕೊಲೆಗಡಕನಿಗೆ ಗೊತ್ತಿರಬ—' ಸುರೇಂದ್ರನು ನಾಲಿಗೆಯನ್ನು ಕಚ್ಚಿಕೊಂಡು—'ಸಾಹೇಬರೆ, ಅವಳು ನನ್ನ ಮನಸ್ಸಿನಂತೆ ನಡೆಯಲಿಲ್ಲ ಅದಕ್ಕಾಗಿ ಕೊಲೆಮಾಡಹೋದೆನು.'

'ನೀನು ಅವಳನ್ನು ಯಾವ ವಿಧದ ಶಸ್ತ್ರದಿಂದ ಗಾಯ ಪಡಿಸಿದೆ?'

'ನನ್ನಲ್ಲಿ ಹದನವಾದ ಚಾಕು ಇತ್ತು.'

'ಅದು ಈಗ ಎಲ್ಲಿ ಅದೆ?'

'ತುಂಗಭದ್ರೆಯಲ್ಲಿ ಬಿಸುಟಿದೆನು.'

'ನೀನು ಅವಳ ಮೈ ಮೇಲೆ ಒಂದು ವಿಧದ ಎಣ್ಣೆಯನ್ನು ಸುರುವಿದೆ. ಅದು ಯಾವ ಎಣ್ಣೆಯು?'

'ಕಲ್ಲೆಣ್ಣೆಯು! ಕಲ್ಲೆಣ್ಣೆಯನ್ನು ಅವಳ ಮೇಲೆ ಹಾಕಿ ಬೆಂಕೀಹಚ್ಚ ಬೇಕೆಂದು ಮಾಡಿದ್ದೆನು.'

'ಕಲ್ಲೆಣ್ಣೆಯನ್ನು ಏತರದಲ್ಲಿ ತಂದಿದ್ದೆ?'

'ಒಂದು ಕಾಜಿನ ಸೀಸೆಯಲ್ಲಿ ತಂದಿದ್ದೆನು.'

'ಅದು ಎಲ್ಲಿ ಇರುವದು?'

'ಅದನ್ನು ದಾರಿಯಲ್ಲಿ ಒಡೆದು ಚಲ್ಲಿದೆನು.'

'ಅದು ಎಷ್ಟು ಸೇರಿನದಿತ್ತು?'

'ಮೂರು ಸೇರಿನದು.'

'ಕೊನೆಯ ಕೆಲಸವನ್ನು ಪೂರೈಸದೆ ಹಾಗೆಯೇ ಹೊರಟು ಹೋದ ದ್ಯೇಕೆ?'

'ಅವಳು ಸತ್ತಳೆಂದು ತಿಳಿದು ಓಡಿದೆನು.'

'ನೀನು ಹೊಡೆಯಲಿಕ್ಕೆ ಬಂದಾಗ ರಾಧಾದೇವಿಯು ಗದ್ದಲವನ್ನು ಮಾಡಲಿಲ್ಲವೆ?'

'ಇಲ್ಲ.'

'ಹೊಡೆದ ಮೇಲೆ?'

'ಇಲ್ಲ.'

'ಹೋಗು ನಿನ್ನ ಸ್ಥಳಕ್ಕೆ.'

ಸುರೇಂದ್ರನು ಹೊರಟು ಹೋದನು. ಸುಪರಿಂಟೆಂಡೆಂಟ ಸಾಹೇಬರು ಅಲ್ಲಿಂದ ಎದ್ದರು. ಆಗ ಕೊತವಾಲನು—'ಕೊಲೆಗಡಕನಾದ ಇವನು ದಿಙ್ಮೂಢನಾಗಿರುವನು. ಅಂತೆಯೆ ಕೊಲೆಯ ಸಂಗತಿಯನ್ನು ವಿಸಂಗತವಾಗಿ ಹೇಳಿದನು. ಏನೇ ಹೇಳಲಿ, ಇಷ್ಟು ದಿನಗಳ ವರೆಗೆ ಎಷ್ಟು ಸಾಹಸ ಮಾಡಿದರೂ, ಅವನು ಕೊಲೆಯ ಪ್ರಯತ್ನ ಮಾಡಿದೆನೆಂದು ಒಪ್ಪಿದ್ದಿಲ್ಲ; ಆದರೆ ದೊಡ್ಡ ಅಧಿಕಾರಿಗಳ ವರ್ಚಸ್ಸಿನ ಮುಂದೆ ಇವನ ಅಪರಾಧವು ಹೇಗೆ ಮುಚ್ಚುವದು? ಇವನು ಕಠಾರಿಯಿಂದ ಕೊಲೆ ಮಾಡಬಂದಿದ್ದನು. ಅದು ಜಪ್ತಮಾಡಲ್ಪಟ್ಟಿದೆ. ಇವನು ಕಲ್ಲೆಣ್ಣೆ ತಂದದ್ದು ಸುಳ್ಳು; ದ್ರಾವಕವನ್ನು ರಾಧಾದೇವಿಯವರ ಮೇಲೆ ಸುರುವಿ ಅವರನ್ನು ವಿದ್ರೂಪಗೊಳಿಸಬೇಕೆಂದಿ

ದ್ದನು. ದ್ರಾವಕದ ತೆರವಾದ ಸೀಸೆಯೂ ಜಪ್ತಮಾಡಲ್ಪಟ್ಟಿದೆ. ಅದು ಒಂದು ಸೇರು ಎಣ್ಣೆ ಹಿಡಿಯುವದು.'

'ನೀನು ಏನನ್ನೂ ಹೇಳುವ ಅವಶ್ಯಕತೆಯಿಲ್ಲ. ಕಾಗದ-ಪತ್ರಗಳನ್ನು ನೋಡಿದರೆ ತಾನೆ ತಿಳಿಯುವದು.' ಎಂದು ಸಾಹೇಬರು ನುಡಿದು—"ಈ ಪ್ರಕರಣದಲ್ಲಿ ಮೋಸಗಾರಿಕೆಯು ತುಂಬಿ ತುಳುಕುವಂತೆ ತೋರುವದು. ಜಾಗ್ರತೆಯಿಂದ ಮಾತ್ರ ಕೆಲಸ ಮಾಡಿರಿ. ಇಲ್ಲದಿದ್ದರೆ ಪ್ರಸಂಗವು ನೈ ಮೇಲೆ ಬಂದೀತು!"

ಕೊತವಾಲನು ಬೆದರಿದನು. ಅವನು ಮರುಮಾತನಾಡದೆ ಸಾಹೇಬ ರನ್ನು ಮೊಟಾರಿನ ವರೆಗೆ ಕಳಿಸಿ, ತನ್ನ ಕಚೇರಿಗೆ ಹೋಗಿ ತಲೆ ಹಿಡಿದು ಕೊಂಡು ಕುಳಿತನು.

ಇತ್ತ ಸೆರೆಮನೆಯಲ್ಲಿ ಶಿಪಾಯಿಗಳೊಳಗೆ ಬಹಳೇ ವಿನೋದವು ನಡೆ ದಿತ್ತು. ದೊಡ್ಡ ಸಾಹೇಬರು ಬಂದ ಕೂಡಲೆ ಕೊಲೆಗಡಕನು ಅಪರಾಧವನ್ನು ಸದ್ದಿಲ್ಲದೆ ಒಪ್ಪಿದನೆಂದೂ ಮೊದಲು ಒಪ್ಪಿದ್ದರೆ ಇಷ್ಟು ನೈ ನುಗ್ಗಾಗುತ್ತಿ ದ್ದಿಲ್ಲವೆಂದೂ ಅವರು ಮಾತಾಡುತ್ತಿದ್ದರು.

ಸುಪರಿಂಟೆಂಡೆಂಟ ಸಾಹೇಬರು ದಯಾಳುಗಳೂ, ಸತ್ಯನಿಷ್ಠರೂ ಇದ್ದು ದರಿಂದ ಕೈಕೆಗಿನ ಅಧಿಕಾರಿಗಳೂ, ಕೆಲಸಗಾರರೂ ತಮ್ಮ ಕೆಲಸಗಳ ಕಡೆಗೆ ಚನ್ನಾಗಿ ಲಕ್ಷ್ಯಗೊಡುತ್ತಿದ್ದರು. ಹೊಸದಾಗಿ ಬಂದುದರಿಂದ ಇವರ ನಿಜವಾದ ಕರ್ತವ್ಯಪ್ರಭಾವವು ಜನರಿಗಿನ್ನೂ ಗೊತ್ತಾಗಿದ್ದಿಲ್ಲ. ನಿಜವಾದ ಅಪರಾಧಿ ಗಳಿದ್ದರೆ ಅವರ ಮನಸ್ಸು ಕಲ್ಲಿಗಿಂತಲೂ ಕಲ್ಲಾಗುತ್ತಿತ್ತು. ನಿರಪರಾಧಿ ಗಳೆಂದು ನಂಬಿಗೆಯಾದ ಮೇಲೆ, ಅವನ ಮೇಲಿನ ಸುಳ್ಳು ಸಾಕ್ಷಿಗಳನ್ನು ಅವಲಂಬಿಸದೆ, ತಮ್ಮ ಮತಪ್ರದರ್ಶನ ಮಾಡುತ್ತಿದ್ದರು. ಕರ್ತವ್ಯವನ್ನು ಯೋಗ್ಯ ರೀತಿಯಿಂದ ನೆರವೇರಿಸದಿದ್ದರೆ ಸರಕಾರವು ಒಂದು ವೇಳೆ ದಂಡನೆ ಯನ್ನು ವಿಧಿಸದಿದ್ದರೂ, ದೇವರು ತಪ್ಪದೆ ಶಿಕ್ಷಿಸುವನೆಂದು ಅವರು ನಂಬಿ ದ್ದರು. ಇವರ ಆಡಳಿತವು ಜನತೆಗೆ ಸೌಖ್ಯಪ್ರದವಾಗುವದೆಂದು ಒಡೆದು ಕಾಣುತ್ತಿತ್ತು; ಆದರೆ ಕೈಕೆಳಗಿನ ಅಧಿಕಾರಿಗಳಿಗೂ, ಶಿಪಾಯಿಗಳಿಗೂ ಅವರ ವೃತ್ತಿಯು ದುಃಖಕಾರಕವಾಗಿತ್ತು. ಯಾಕಂದರೆ, ಅವರ ಧೋರಣವು ಕೆಳ ಗಿನವರ ಹೊಟ್ಟೆಯ ಮೇಲೆ ಕಾಲು ಕೊಡುವಂಥದಾಗಿತ್ತು. ಲಂಚ-ಬಕ್ಷೀಸು ಮೊದಲಾದ ಲಾಭಗಳಿಗೆ ಅವರು ಎರವಾಗಬೇಕಾದ ಪ್ರಸಂಗವಿತ್ತು. ಕೊತ ವಾಲ ಸಾಹೇಬರ ವೇತನ ತಿಂಗಳೊಂದಕ್ಕೆ ಬರಿಯ ನೂರು-ನೂರಾಇಪ್ಪತ್ತ ರಷ್ಟು! ನಾಯಕಸಾಹೇಬರಿಗೆ ಬರಿಯ ಮೂವತ್ತು. ಶಿಪಾಯಿದಾದಾರಿಗೆ

ಇಪ್ಪತ್ತು-ಇಪ್ಪತ್ತೈದು! ಇಷ್ಟರಿಂದ ಅವರ ಸಂಸಾರವು ಹೇಗೆ ನಡೆಯು ಬೇಕು? ಕೆಲವು ಕೊತವಾಲರು ಒನಪು-ಒಯ್ಯಾರದ ವಾರಂಗನೆಯರನ್ನು ರಕ್ಷಿಸಬೇಕಾಗುವದು. ಕೆಲವು ನಾಯಕ ಸಾಹೇಬರಿಗೂ, ಶಿಪಾಯಿದಾದಾ ಗಳಿಗೂ ತಿಂಗಳೊಂದಕ್ಕೆ ಹತ್ತಿಪ್ಪತ್ತು ರೂಪಾಯಿಯ ಸಾರಾಯಿ ಬೇಕಾಗು ವದು. ಅವರನ್ನಾದರೂ ವಾರಕಾಮಿನಿ ಲೋಭವು ಬಿಟ್ಟಿದ್ದಲ್ಲ. ಜನಕಿ ಯಿಂದ ಅಲ್ಲಲ್ಲಿ ನಡೆಯುವ ಕಾನೂನಿನ ವಿರುದ್ಧವಾದ ಸಂಗತಿಗಳನ್ನು ಹಣ ತೆಗೆದುಕೊಂಡು ದೊಡ್ಡ ಮನಸ್ಸಿನಿಂದ ಸಹಿಸುವರೆಂದೇ ಅವರ ಇಷ್ಟೆಲ್ಲ ಅಟ್ಟ ಹಾಸಗಳು ನಡೆಯುತ್ತಿದ್ದವು. ವೇಳೆಯ ನಿರ್ಬಂಧನೆಯನ್ನು ಮುಂದೆ ಮಾಡಿದರೆ ವಾರಕ್ಕೆ ಒಂದೆರಡು ಸಾರೆಯಾದರೂ ಅವರಿಗೆ ಹೇಗೆ ಸಾರಾಯಿ ದೊರೆಯಬೇಕು? ಮೋಟರು ಬಂಡಿಗಳಲ್ಲಿ ನೆರೆಯುವ ಜಾತ್ರೆಗೆ ಪ್ರತಿಬಂಧ ಮಾಡಿದರೆ ಒಂದು ದುಡ್ಡು ಸಹ ವೆಚ್ಚವಿಲ್ಲದೆ ಕಾಶಿ-ರಾಮೇಶ್ವರದ ವರೆಗಿನ ಅವರ ಪ್ರವಾಸವು ಹೇಗೆ ನೆರವೇರಬೇಕು? ಇಂದು ಗೋಕರ್ಣಕ್ಕೆ ಹೋದರೆ, ನಾಳೆ ಗೆರಸಪ್ಪೆಗೆ; ನಾಡಿದ್ದು ತಿರುಪತಿಗೆ. ಹೀಗೆ ಕುಟುಂಬಯಾತ್ರೆಯು ನಿರಾತಂಕವಾಗಿ ಹೇಗೆ ನೆರವೇರಬೇಕು? ಕಳವು ಮಾಡಿದವನು ದುಡ್ಡು ಕೈ ಬಿಡಲಿಕ್ಕೆ ಸಿದ್ಧನಾದರೆ ಅವನನ್ನು ಕಳ್ಳನೆಂದು ಕರೆಯುವ ಎದೆ ಯಾರದು? ಕೊಲೆಗಡಕನು ಚೀಲ ಚೀಲ ರೂಪಾಯಿಗಳನ್ನು ಸುರುವತೊಡಗಿದರೆ,ಅವನು ನಿರಪರಾಧಿಯೆಂದು ನಿರ್ಣಯವಾಗುವದಕ್ಕೆ ತಡವೇನು? ಇಂತಹ ವೃತ್ತಿಗಳ ನ್ನವಲಂಬಿಸಿದ್ದ ಕೈಕೆಳಗಿನ ಅಧಿಕಾರಿಗಳ ಹಾಗು ಕೆಲಸಗಾರರಿಗೆ ಸಾಧ್ಯವಾದ ಮಟ್ಟಿಗೆ ಬಿಗಿ ಮಾಡಬೇಕೆಂದು ಹೊಸದಾಗಿ ಬಂದ ಪೋಲೀಸ ಸುಪರಿಂಟೆಂ ಡೆಂಟರ ಮನಸ್ಸಿನಲ್ಲಿತ್ತು. ಇವರು ಹೊಸದಾಗಿ ಬಂದವರಿದ್ದುದರಿಂದ, ಇವರ ಸ್ವಭಾವಪರಿಚಯವು ಯಾರಿಗೂ ಇನ್ನೂ ಚನ್ನಾಗಿ ಆಗಿದ್ದಿಲ್ಲ. ಪ್ರಜಾ ಜನರಲ್ಲಿ ಕೆಲವರು ಅವರ ಸ್ವಭಾವಪರಿಚಯವನ್ನು ಕೇಳಿ ಅರಿತದ್ದರಿಂದ, ಕೊಲೆಯ ಪ್ರಯತ್ನದ ಪ್ರಕರಣದಲ್ಲಿ ಸೂಕ್ಷ್ಮವಿಚಾರವಾಗಬೇಕೆಂದು ಅವರಿಗೆ ವಿನಂತಿ ಪತ್ರಿಕೆ ಕಳಿಸಿದ್ದರು. ವೃತ್ತಪತ್ರಗಳಲ್ಲಾದರೂ ಇದೇ ವಿಧದ ಧ್ವನಿ ಯು ಕೇಳಹತ್ತಿತ್ತು.

ಸುರೇಂದ್ರರಾಯನು ಪೋಲೀಸ ಸುಪರಿಂಟೆಂಡೆಂಟರೆದುರಿಗೆ ಅಪರಾಧ ವನ್ನು ಒಪ್ಪಿದ ಸುದ್ದಿಯು ಹಾ-ಹಾ ಅನ್ನುವಷ್ಟರಲ್ಲಿ ವಿಜಯನಗರದ ತುಂಬ ಪಸರಿಸಿತು. ಈ ಸುದ್ದಿಯನ್ನು ಕೇಳಿದೊಡನೆಯೆ ರಮೆಯು ಹೌಹಾರಿದಳು! ಅವಳು ರೋದಿಸುತ್ತ ಗೋವರ್ಧನರಾಯನ ಬಳಿಗೆ ಬಂದು ಕೈಜೋಡಿಸಿ, ತನಗೆ ಸೌಭಾಗ್ಯ ದಾನಮಾಡಬೇಕೆಂದು ಬೇಡಿಕೊಂಡಳು. ಅವಳ ದೀನವಾಣಿ

ಯನ್ನು ಕೇಳಿ ಗೋವರ್ಧನರಾಯನ ಅಂತಃಕರಣದಲ್ಲಾದ ಪ್ರಕಾರವು ಸ್ಪಷ್ಟವಾಗದಿದ್ದರೂ, ಆತನ ಬಾಹ್ಯಪ್ರಕಾರವು ಮಾತ್ರ ಆಗಿನವುಟ್ಟಿಗೆ ಚನ್ನಾಗಿಯೇ ತೋರುತ್ತಿತ್ತು. ಅವನು ನೊಂದವನಂತಹ ಧ್ವನಿಯಿಂದ—'ರಮಾದೇವಿ, ನಿಮ್ಮ ಪತಿಯವರ ವರ್ತನವನ್ನು ನೋಡಿದರೆ ನನಗೆ ಅಳು ಬರುತ್ತದೆ. ಅಪರಾಧವನ್ನೊಪ್ಪದಿದ್ದರೆ ನಾನು ಅವರನ್ನು ನಿಶ್ಚಯವಾಗಿಯೂ ಪಾರು ಮಾಡುತ್ತಿದ್ದೆನು. ಅಯ್ಯೋ! ಏನು ಮಾಡುವದು! ತಾನು ಹೋಗುವದು ಒತ್ತಟ್ಟಿಗಿರಲಿ, ನಿಮಗೆ ಬಡಿಗಲ್ಲು ತಂದನು!' ಎಂದು ನುಡಿದು ಅವನು ದೋತರ ಸೆರಗಿನಿಂದ ಕಣ್ಣುಗಳನ್ನೊರೆಸಿಕೊಂಡನು.

'ಗೋವರ್ಧನರಾಯರೆ, ನೀವು ಹೆಸರುಗೊಂಡ ವಕೀಲರು. ಪ್ರಯತ್ನ ಮಾಡಿ ನನ್ನ ಪತಿಯನ್ನು ಮುಕ್ತಗೊಳಿಸಿರಿ. ನಿಮ್ಮಿಂದಾದ ಉಪಕಾರವನ್ನು ತೀರಿಸದೆ ಇರುವದಿಲ್ಲ.'

'ಛೀ! ನಿಮ್ಮಿಂದ ಪ್ರತ್ಯುಪ್ರಕಾರ ಹೊಂದುವ ಯೋಚನೆಯಿಂದ ನಾನು ಈ ಪ್ರಕರಣದಲ್ಲಿ ಸಾಹಸ ಮಾಡತೊಡಗಿರುವೆನೆಂದು ತಿಳಿದಿರುವಿರಾ? ದೀನರೂ ಅನಾಥರೂ ಆದ ಜನರು ಜನಸಹಾಯವಿಲ್ಲದೆ ಹಾಗೆಯೇ ಸತ್ತು ಹೋಗಬೇಕೆಂದು ದೇವರ ಸಂಕಲ್ಪವಿರುವದಿಲ್ಲ. ನಾನು ಈ ಪ್ರಕರಣವನ್ನು ಒಳ್ಳೇ ಸ್ಥಿತಿಗೆ ತಂದು ಮುಟ್ಟಿಸಿದ್ದೆನು. ಸುರೇಂದ್ರರಾಯರು ತಪ್ಪು ಒಪ್ಪಿ ಹಾಳು ಮಾಡಿಬಿಟ್ಟರು! ಇನ್ನೇನು ಮಾಡಲಿ? ತಮ್ಮ ವೈಸೊಕ್ಕಿನ ಫಲವನ್ನು ಉಣ್ಣುತ್ತಾರೆ. ರಮಾದೇವಿ, ಅವಿವೇಕಿಗಳಾದ ಗಂಡರು ಗಂಟುಬಿದ್ದರೆ ಹೀಗೆಯೇ ಸರಿ. ಹಾಳಾಗಿ ಹೋಗಲೊಲ್ಲರೇಕೆ ಬಿಡಿರಿ. ನಾನು ನಿಮ್ಮ ಕೂದಲಿಗೆ ಧಕ್ಕೆ ಹತ್ತದಂತೆ ಕಾಪಾಡುವೆನು. ತುಂಬಿದ ಆಯುಷ್ಯವನ್ನು ಹೆಚ್ಚು ಮಾಡುವವರಾರು?'

ಗೋವರ್ಧನರಾಯನ ಈ ಅಭದ್ರವಾದ ಮಾತುಗಳನ್ನು ಕೇಳಿ ರಮಾದೇವಿಯು ಹತಾಶಳಾದಳು. ಆಗ ಅವಳು—'ನಿಮ್ಮಿಂದ ಕೆಲಸ ಮಾಡುವದಾಗುವದೋ-ಇಲ್ಲವೋ ಸ್ಪಷ್ಟವಾಗಿ ಹೇಳಿರಿ. ನಾನು ಮತ್ತೊಬ್ಬ ಪುಣ್ಯಾತ್ಮನ ಕೈಕಾಲು ಕಟ್ಟಿಕೊಂಡಾದರೂ ನನ್ನ ಪತಿರಾಯರ ರಕ್ಷಣೆಯ ಪ್ರಯತ್ನ ಮಾಡುವೆನು.'

'ರಮಾದೇವಿ, ಹೀಗೇಕೆ ಹುಚ್ಚರಂತೆ ಮಾತಾಡುವಿರಿ? ನಾನು ನಿಮಗೆ ಪರಕೀಯನೇ ಹೇಗೆ? ದುಡ್ಡಿನ ಕಡೆಗೆ ನೋಡುವ ವಕೀಲನು ನಾನಲ್ಲ; ಋಣಾನುಬಂಧದ ಕಡೆಗೆ ನನ್ನ ಲಕ್ಷ್ಯವುಂಟು. ಅಂತೆಯೆ ಈ ಪ್ರಕರಣದಲ್ಲಿ ನಿಮ್ಮ ವಕೀಲಿಯನ್ನು ಹಿಡಿದಿರುವೆನು.'

'ಹಾಗಾದರೆ ಈಗಲೇ ಹೋಗಿ ಅವರಿಗೆ ಭೆಟ್ಟಿಯಾಗಿ ಬರ್ರಿ. ಅವರು ಸೆರೆಮನೆಯ ಕಷ್ಟಗಳನ್ನೂ ಯಾತನೆಗಳನ್ನೂ ಸಹಿಸಲಾರದೆ, ಅಪರಾಧವನ್ನು ಮೈ ಮೇಲೆ ತೆಗೆದುಕೊಂಡಿರುವರು. ಅವರಿಗೆ ಚನ್ನಾಗಿ ಬುದ್ಧೀ ಹೇಳಿ ಬರ್ರಿ. ನಿಮ್ಮಿಂದ ಅವರ ರಕ್ಷಣೆಯ ಕೆಲಸವು ನೆರವೇರದಂತಿದ್ದರೆ ಹಾಗೆ ತಿಳಿಸಿಬಿಡಿರಿ. ಅಂದರೆ ಮುಂದಿನ ಹಾದಿಯನ್ನು ಕಂಡುಕೊಳ್ಳಲಿಕ್ಕೆ ಸಟ್ಟಗಾಗುವದು.'

ರಮಾದೇವಿಯ ಒತ್ತಾಯದಿಂದ ಗೋವರ್ಧನರಾಯನು ಸುರೇಂದ್ರ ರಾಯನ ಭೆಟ್ಟಿಗೆ ಹೋದನು. ಮುಂದೆ ಒಂದೆರಡು ಗಳಿಗೆಯಲ್ಲಿ ತಿರುಗಿ ಬಂದು, ಅವನು ರಮಾದೇವಿಯ ಭೆಟ್ಟಿಯಾಗದೆ, ಅವಳಿಗೆ ಕೇಳುವಂತೆ 'ಉಶ್' ಎಂದು ಉಸಿರ್ಗರೆದು ತನ್ನ ಕೋಣೆಯಲ್ಲಿ ಹೋಗಿ ಕುಳಿತನು. ಕೂಡಲೆ ರಮಾದೇವಿಯು ಅವನ ಬಳಿಗೆ ಹೋಗಿ—'ಗೋವರ್ಧನರಾಯರೆ, ಅತ್ತಣ ಸಮಾಚಾರವೇನು?'

'ಅತ್ತಣ ಸಮಾಚಾರವನ್ನೇನು ಸುಡುವಿರಿ?' ಸಂತಾಪದಿಂದ ಗೋವರ್ಧನರಾಯನು ನುಡಿದು—'ಕೆಟ್ಟ ಗಂಡನ ಕೈ ಹಿಡಿದು ನೀವೂ ಕೆಟ್ಟಿರಿ!'

'ಗೋವರ್ಧನರಾಯರೇ, ನೀವು ಹೀಗೇಕೆ ಮಾತಾಡುವಿರಿ? ಹೋದ ಕೆಲಸವೇನಾಯಿತು?'

'ಮುಖಭಂಗವಾಯಿತು!'

'ಸ್ಪಷ್ಟವಾಗಿ ಹೇಳದಿದ್ದರೆ ಹೇಗೆ ತಿಳಿಯಬೇಕು?'

'ನೀವು ಸೊಟ್ಟ ಹೆಜ್ಜೆಯಿಡತೊಡಗಿರುವಿರೆಂದು ಯಾರೋ ಸುರೇಂದ್ರ ರಾಯನಿಗೆ ಹೇಳಿರುವರು. ಅದಕ್ಕಾಗಿಯೇ ಜೀವನದಲ್ಲಿ ಬೇಸರಗೊಂಡು ಅವನು ಅಪರಾಧವನ್ನು ಮೈ ಮೇಲೆ ತೆಗೆದುಕೊಂಡಿರುವನಂತೆ.'

'ನೀವು ಅವರ ಸಂಶಯ ನಿವಾರಣೆ ಮಾಡಲಿಲ್ಲವೇನು?'

'ನನ್ನ ಮೇಲೆಯೇ ಅವರ ಬಲವಾದ ಸಂಶಯ. ನೀವು ನನ್ನ ಮೇಲೆ ಪ್ರಣಯವುಳ್ಳವರಾಗಿರುವಿರಂತೆ. ಕೃಷ್ಣರಾಯರು ನೌಕರಿಯ ಆಶೆ ಹಚ್ಚಿ ನಿಮ್ಮನ್ನು ತಮ್ಮ ಕೈಯಲ್ಲಿ ತೆಗೆದುಕೊಳ್ಳುವವರಿರುವರಂತೆ. ಗಂಡನಿಗೆ ಮರಣ ದಂಡನೆ ವಿಧಿಸಲ್ಪಡಬೇಕೆಂದು ನೀವು ದೇವರಿಗೆ ಹರಕೆ ಹೊತ್ತಿರುವಿರಂತೆ. ಇಂತಹ ಮೂರ್ಖ ಗಂಡನನ್ನು ನಚ್ಚಿದ ಹೆಂಡತಿಯೂ ಮೂರ್ಖಳೇ. ನಿಮಗೆ ಸುಖವೆಂಬದು ಸ್ವಪ್ನದಲ್ಲಾದರೂ ಗೊತ್ತಿದೆಯೆ? ನೀವು ಜಾರಿಣಿಯರಂತೆ, ಕುಲಟೆಯರಂತೆ! ಏನು ಮಾಡುವದಿದೆ? ಕೊಲೆಗಡಕನಿಂದ ಅಲ್ಲದ-ಸಲ್ಲದ ಮಾತಾಡಿಸಿಕೊಳ್ಳುವದರಲ್ಲಿಯೇ ನಿಮಗೆ ಭೂಷಣವೆನಿಸುವದೋ ಹೇಗೋ ಕಾಣೆನು. ನೀವು ಹುಚ್ಚುತನದವರಿರುವಿರಿ. ನಿಮ್ಮ ಸ್ಥಳದಲ್ಲಿ

ಮತ್ತೊಬ್ಬಳಿದ್ದರೆ, ನಿಂತ ಕಾಲಮೇಲೆ ಪತಿಯ ಹೆಸರಿನಿಂದ ಮೆರೆಯುವ ಮಾಂಗಲ್ಯ-ತಿಲಕಗಳನ್ನು ತೊಡೆದು ಹಾಕುತ್ತಿದ್ದಳು. ಅನ್ನಬೇಕು, ರಾಧಾ ಬೇವಿಗೆ ವಸ್ತ್ರಾದಿಯೆಂದು ! ನಿಮಗೆಲ್ಲಿದೆ ಅಷ್ಟು ಸ್ವಾಭಿಮಾನ! ನಾನಿರುವ ವರೆಗೆ ಚಿಂತಿಸಬೇಡಿರೆಂದು ಹೇಳಿದರೂ, ನನ್ನನ್ನು ನಂಬಿಕೊಂಡಿರಲಿಕ್ಕೆ ನಿಮಗೆ ಧೈರ್ಯವಿಲ್ಲ. ಹೇಳುವವರು ಎಷ್ಟು ಹೇಳುತ್ತಾರೆ? ನಿಮ್ಮ ಬುದ್ಧಿ ಯು ನಿಮ್ಮ ಕೈಯಲ್ಲಿದೆ. ನಾನು ಹೇಳಿದಂತೆ ಕೇಳಿದರೆ ಸುಖಬಡುವಿರಿ; ಇಲ್ಲ ದಿದ್ದರೆ ಒರಲಿ-ಒರಲಿ ಸಾಯುವ ಪ್ರಸಂಗವು ನಿಮಗೆ ಬರುವದು. ಸದ್ಯದಪ್ರಕ ರಣದಲ್ಲಿ ನೀವೂ ಒಬ್ಬ ಅಪರಾಧಿನಿಯಿರುವಿರೆಂಬದನ್ನು ಮರೆತರೆ ಸಾಗು ವಂತಿಲ್ಲ. ಒಟ್ಟಿನ ಮೇಲೆ ನಾನು ಹೇಳುವದೇನಂದರೆ, ಜೀವನವು ಸುಖ ಮಯವಾಗಬೇಕೆಂದು ನಿಮ್ಮ ಇಚ್ಛೆಯಿದ್ದರೆ, ನೀವು ನನ್ನ ಆಜ್ಞೆಯನ್ನು ಮನ್ನಿಸಲೇ ಬೇಕು.' ಗೋವರ್ಧನರಾಯನು ಹೀಗೆ ವ್ಯಾಖ್ಯಾನ ಕೊಟ್ಟು, ರಮಾದೇವಿಯ ಮುಖದಿಂದ ಏನು ಉತ್ತರ ಹೊರಡುವದೋ ಎಂಬದನ್ನು ಆತುರದಿಂದ ನಿರೀಕ್ಷಿಸಹತ್ತಿದನು. ಅವನ ಎರಡೂ ಕಣ್ಣುಗಳು ರಮೆಯ ಮುಖದಲ್ಲಿ ನಟ್ಟಿದ್ದವು.

ಗೋವರ್ಧನರಾಯನು ಹೇಳಿದ ಸಂಗತಿಯನ್ನು ಕೇಳಿ ರಮೆಯ ಮೇಲೆ ವಿದ್ಯುತ್ಪಾತವಾದಂತಾಯಿತು. ಅವಳು ನಿಂತ ಸ್ಥಳದಲ್ಲಿಯೇ ಕುಸಿಬಿದ್ದು ಭೋರಾಡಿ ರೋದಿಸತೊಡಗಿದಳು. ತನ್ನ ಪತಿಯ ಮನಸ್ಸಿನಲ್ಲಿ ವಿಕಲ್ಪದ ಬೀಜಗಳನ್ನು ಯಾವನೋ ದುಷ್ಟನು ಬಿತ್ತಿರುವನೆಂದು ಅವಳಿಗೆ ತಿಳಿಯಿತು. ಆಗ ಅವಳು ಗೋವರ್ಧನರಾಯನನ್ನು ಕುರಿತು—'ವಕೀಲಸಾಹೇಬರೆ, ನೀವು ಅವರ ಮನಸ್ಸಿನೊಳಗಿನ ವಿಕಲ್ಪ ಭಾವನೆಗಳನ್ನು ದೂರ ಮಾಡಲಿಕ್ಕೆ ಏಕೆ ಯತ್ನಿಸಲಿಲ್ಲ? ಪುರುಷರ ಸ್ವಭಾವವು ತೀವ್ರ ಸಂತಾಪಗೊಳ್ಳುವಂತಹ ದಿರುವದು. ಇಂತಹ ವಿಷಯವನ್ನು ಕೇಳಿ ಅವರು ಕ್ರುದ್ಧರೂ, ಜೀವನದಲ್ಲಿ ತಿರಸ್ಕಾರವುಳ್ಳವರೂ ಆಗಿರುವದೇನೂ ತಪ್ಪಲ್ಲ. ನಿಮ್ಮ ಹೆಂಡತಿಯ ವಿಷ ಯವಾಗಿ ಯಾರಾದರೂ ಇಂತಹ ಸುದ್ದಿಯನ್ನು ಹೇಳಿದರೆ, ಆಗ ನಿಮ್ಮಮನ ಸ್ಸಿನ ಮೇಲೆ ಯಾವ ಪರಿಣಾಮವಾಗುವದು? ಪತಿಯು ಸಿಟ್ಟಿಗೆದ್ದ ಸಮಯ ವನ್ನು ಸಾಧಿಸಿ, ಹೆಂಡತಿಗೆ ದುರುಪದೇಶಮಾಡುವ ವೃತ್ತಿಯು ತಿರಸ್ಕರ ಣೀಯವಲ್ಲವೆ?'

ರಮಾದೇವಿಯ ಮಾತಿನ ಗುರಿಯು ತನ್ನ ಮೇಲಿರುವದೆಂಬದನ್ನು ಗೋವರ್ಧನರಾಯನು ತಿಳಿದನು. ಅಂಥ ನಿರಾಧಾರಿಯಾದ ಅಬಲೆಗೆ ಸೊಪ್ಪುಹಾಕಲಿಕ್ಕೆ ಅವನು ಅಳುಕಿದೆಯವನಿದ್ದಿಲ್ಲ. ಆಗ ಅವನು ನಿಷ್ಠುರತನ

ದಿಂದ-'ನೀವು ಆ ನೀಚ ಸುರೇಂದ್ರನನ್ನು ನಂಬಿದರೆ ನಿಶ್ಚಯವಾಗಿ ಕೆಡು ವಿರಿ. ಸೆರೆಮನೆಯನ್ನು ಕಾಣಬೇಕೆಂದು ನಿಮ್ಮ ಇಚ್ಛೆಯಿದ್ದರೆ ನನ್ನದೇನೂ ಅಡ್ಡಿಯಿಲ್ಲ. ಅವನು ನಿಮಗೆ ಜಾರಿಣಿ, ಕುಲಟೆ, ಸ್ವೈರಿಣಿ ಮೊದಲಾಗಿ ಹೆಸ ರಿಡುತ್ತಿರುವಾಗ, ನೀವು ಪಾತಿವ್ರತ್ಯದ ಆಡಂಬರ ಮೆರೆಯಿಸುವಿರಿ ನನಗೆ ಈ ರೀತಿ ಸೇರುವದಿಲ್ಲ. ನೀವು ನಿಮ್ಮ ಸದ್ಯದ ವರ್ತನದಲ್ಲಿ ಸ್ಥಿತ್ಯಂತರ ಮಾಡು ವಂತಿದ್ದರೆ ಹೇಳಿರಿ; ಇಲ್ಲದಿದ್ದರೆ ನಿಮ್ಮ ಹಾದಿಯನ್ನು ನೀವು ಕಂಡುಕೊಳ್ಳಿರಿ'

'ದುರ್ದೈವದ ಆಟಗಳಿವು!' ಎಂದು ದುಃಖೋದ್ಗಾರ ತೆಗೆದು, ರಮೆ-ಯು ಕಲ್ಲು ಕರಗುವಂತೆ ರೋದಿಸತೊಡಗಿದಳು.

---

## ನೀನೇ ಡಿಸ್‌ಮಿಸ್!

ರಾವಸಾಹೇಬ ಕೃಷ್ಣರಾಯರು ತಮ್ಮ ದಿವಾಣಖಾನೆಯಲ್ಲಿ ಕುಳಿತು ಉಷೆಯ ಮಾರ್ಗ ಪ್ರತೀಕ್ಷೆ ಮಾಡತೊಡಗಿದ್ದರು. ಅವರು ಇಂದು ತಮ್ಮ ನಿತ್ಯದ ವೇಷ ಭೂಷಣಗಳಲ್ಲಿ ಎಷ್ಟೋ ಸ್ಥಿತ್ಯಂತರಗೊಳಿಸಿದ್ದರು. ನವತರುಣಿ ಯರು ತಮ್ಮನ್ನು ವಯಾತೀತರೆಂದು ಭಾವಿಸಿ, ತಿರಸ್ಕಾರಗೊಳ್ಳಬಾರ ದೆಂದು ಅವರು ಬಿದ್ದುಳಿದ ಕೆಲವು ಗಟ್ಟಿಯಾದ ಹಲ್ಲುಗಳನ್ನು ಕಿತ್ತಿ ಚಲ್ಲಿಸಿ, ಅವುಗಳ ಸ್ಥಳದಲ್ಲಿ ಉತ್ತಮವಾದ ದಾಳಿಂಬರ ಬೀಜದಂತಹ ಕೃತ್ರಿಮಹಲ್ಲು ಗಳನ್ನು ಬಹಳ ದಿನಗಳ ಹಿಂದೆಯೇ ಕುಳ್ಳಿರಿಸಿಕೊಂಡಿದ್ದರು. ಉಷೆಯ ಪರಿ ಚಯವಾದಂದಿನಿಂದ ಅವರು ತಮ್ಮ ನೆರಗೂದಲುಗಳಿಗೆ ಕಪ್ಪು ಹಚ್ಚತೊಡ ಗಿದ್ದರು. ಬಿಳಿಯ ಕಪ್ಪಿನ ಮಿಶ್ರಣದಿಂದಾದ ನರೇ ಬಣ್ಣದ ಕೂದಲುಗಳಿಂದ ಅವರ ಮುಖವು ರಾವಿಟ್ಟು ಬಡಿಯತೊಡಗಿದ್ದರೂ, ತಾವು ಏರಿಕೆಯ ವಯ ಸ್ಸಿನ ಸುಂದರ ತರುಣರಂತೆ ಕಾಣುವೆವೆಂದೇ ಕೃಷ್ಣರಾಯರು ಹಿರಿಹಿರಿ ಹಿಗ್ಗ ತೊಡಗಿದ್ದರು. ಅವರು ಇಂದು ಜರತಾರೀ ರುಮಾಲ ಸುತ್ತಿ, ಜರದ ಸೆಲ್ಲೆ ಹೊದ್ದುಕೊಂಡಿದ್ದರು. ಅವರು ಇಂದು ಕೊರಳಲ್ಲಿ ರತ್ನ ಖಚಿತ ಕಂಠಿಯನ್ನು ಹಾಕಿಕೊಂಡಿದ್ದರು. ಇಂದು ಯಾರಾದರೂ ಅವರನ್ನು ನೋಡಿದ್ದರೆ, ಮದು ವೆಗೆ ಸಿದ್ಧನಾದ ಮದುವಣಿಗನೆಂದು ಅನ್ನಬಹುದಾಗಿತ್ತು. ಕೃಷ್ಣರಾಯರು ಅಂದು ಪಂಚಪಂಚ ಉಷಃಕಾಲದಲ್ಲೆದ್ದು, ಉಷೆಯ ಸ್ವಾಗತದ ಸಿದ್ಧತೆ ಯನ್ನು ನಡೆಯಿಸಿದ್ದರು. ಇಷ್ಟೆಲ್ಲ ಸಿಂಗಾರಾಗಿದ್ದ ಅವರು ಉಷೆಯನ್ನು ವಿವಾಹವಾಗಬೇಕೆಂದು ಇಚ್ಛಿಸಿರದಿದ್ದರೂ ರಾಧಾದೇವಿ, ವಸಂತೆ ಮೊದಲಾ ದವರ ನೂಲಿಕೆಯಲ್ಲಿ ಅವಳನ್ನು ಸೇರಿಸಬೇಕೆಂದು ಹವಣಿಸಿದ್ದರು. ಅದಕ್ಕಾ ಗಿಯೆ ಇಷ್ಟು ಅವರ ಅಟ್ಟಹಾಸವು.

ಅವರ ಕೈ ಕೆಳಗಿನ ನೌಕರರಾದರೂ ಬಹಳೇ ಚಾಣಾಕ್ಷರು. ಅವರು ಚಾಣಾಕ್ಷರಾಗಲಿಕ್ಕೆ ಕೃಷ್ಣರಾಯರ ಶಿಕ್ಷಣವೇ ಕಾರಣವಾಗಿತ್ತು. ಯಾವಳೊಬ್ಬ ಸುಂದರ ತರುಣ ಶಿಕ್ಷಕಿಯ ಆಗಮನವಾಯಿತೆಂದರೆ ಇಲ್ಲವೆ ಆಗಮನವಿರುವದೆಂಬ ಸುದ್ದಿಗೊತ್ತಾಯಿತೆಂದರೆ ಅವರು ಉಪಾಹಾರ-ಮೇಜವಾನಿಗಳ ಸಿದ್ಧತೆಗೆ ತೊಡಗುತ್ತಿದ್ದರು. ಕೃಷ್ಣರಾಯರ ಕಡೆಗೆ ನೌಕರಿಗಾಗಿ ಇಲ್ಲವೆ ಬೇರೆ ಕೆಲಸಕ್ಕಾಗಿ ಬರುವ ತರುಣಿಯರು ಸ್ವಶೀಲ ದಾನ ಮಾಡಲಿಕ್ಕೆ ಸಿದ್ಧರಾದವರೇ ಇರುವರೆಂದು ಅವರ ತಿಳುವಳಿಕೆಯಾಗಿ ಹೋಗಿತ್ತು. ಯಾಕೆಂದರೆ ಒಂದಲ್ಲ-ಎರಡಲ್ಲವೆಂದರೆ, ಇಂತಹ ನೂರಾರು ಪ್ರಸಂಗಗಳು ಅವರ ದೃಷ್ಟಿಗೆ ಬಿದ್ದುದರಿಂದ, ತರುಣ ಶಿಕ್ಷಕಿಯರು ಬಂದರೆ ಇಲ್ಲವೆ ಬರುವವರಿರುವರೆಂಬ ವಾರ್ತೆ ತಿಳಿದರೆ, ಉಪಾಹಾರ-ಮೇಜವಾನಿಗಳ ಸಿದ್ಧತೆಯನ್ನು ಅವರು ಮಾಡಿಯೇ ಮಾಡುತ್ತಿದ್ದರು. ಯಾವದೊಂದು ಕಾರ್ಯಕ್ಕಾಗಿ ಬಂದ ತರುಣಿಯು ಕುರೂಪಿಯಾಗಿದ್ದರೆ, ಆವಳ ಆದರಾತಿಥ್ಯವೇನೂ ನಡೆಯುತ್ತಿದ್ದಿಲ್ಲ; ಬಹುತರವಾಗಿ ಆವಳ ಕಾರ್ಯವೂ ಈಡೇರುತ್ತಿದ್ದಿಲ್ಲ. ಚಲುವೆಯರಲ್ಲದಂತಹ ತರುಣಿಯರ ಬೇಡಿಕೆಗಳನ್ನು ಪೂರೈಸಲಿಕ್ಕೆ ಕೃಷ್ಣರಾಯರು ಜನ್ಮವೆತ್ತಿದ್ದಿಲ್ಲ. ಕೃಷ್ಣಾವತಾರದ ಉದ್ದೇಶವು ಬೇರೊಂದು ಗುಹ್ಯತಮವಾದ ವಿಷಯವಾಗಿತ್ತು. ಹೊರಗೆ ಕಂಕಣನಿನಾದವಾದ ಕೂಡಲೆ ಇಲ್ಲವೆ ಸುರೂಪಿಗಳಾದ ತರುಣಿಯರು ಬರುತ್ತಿರುವದು ಕಣ್ಣಿಗೆ ಬಿದ್ದ ಕೂಡಲೆ, ಕೃಷ್ಣರಾಯರ ಸ್ವೈರ ಮನೋವೃತ್ತಿಯು ಥೈ ಥೈ ಕುಣಿಯುತ್ತಿತ್ತು. ಕೂಡಲೆ ಅವರು ಕುಡುಕರಂತೆ ಆಚರಿಸತೊಡಗುತ್ತಿದ್ದರು. ಸಾಹೇಬರ ಈ ವಿಧದ ವರ್ತನವನ್ನು ನೋಡಿದ ಕೂಡಲೆ, ನೌಕರರು ಅವರ ರಹಸ್ಯವನ್ನು ತಿಳಿದು ಅವರ ಮನೋವೃತ್ತಿಯು ನೇರೆಗೆ ಸಿದ್ಧತೆ ಮಾಡುತ್ತಿದ್ದರು. ಅಂದು ಸಾಹೇಬರು ನಭೂತಪೂರ್ವವಾಗಿ ಸಿಂಗಾರಾದದ್ದನ್ನು ನೋಡಿದ ಕೂಡಲೆ ಯಾವಳೋ ಒಬ್ಬ ದೇವ ರಮಣಿಯ ಆಗಮನವಾಗುವದೆಂದು ಅವರ ನೌಕರರು ತಿಳಿದರು. ಅಂತೆಯೆ ಒಳ್ಳೆಯ ಅಟ್ಟಹಾಸದ ಉಪಾಹಾರ-ಮೇಜವಾನಿಗಳ ಸಿದ್ಧತೆಯಲ್ಲಿ ಅವರು ತೊಡಗಿದರು.

ಕೃಷ್ಣರಾಯರು ವಿಶ್ರಾಂತಿಯ ಕುರ್ಚಿಯಲ್ಲಿ ಕುಳಿತು, ಎವೆಯಿಕ್ಕದೆ ಉಷೆಯ ಮಾರ್ಗಪ್ರತೀಕ್ಷೆ ಮಾಡತೊಡಗಿದ್ದರು. ಅಷ್ಟರಲ್ಲಿ ಒಬ್ಬ ನೌಕರನು ಅಲ್ಲಿಗೆ ಬಂದು: 'ರಾವಸಾಬ ಬಂದರು-ಬಂದರು!' ಎಂದು ಹೇಳಿದನು.

'ಯಾರು? ಯಾರು?' ಆತುರದಿಂದ ಸಾಹೇಬರು ಕೇಳಿದರು.

'ಅವರೇ ಅವರು!'

'ಅವರೆಂದರಾರು?'

'ನೀವು ಯಾರ ದಾರೀ ನೋಡುತ್ತಿರುವಿರೋ ಅವರು! ಅಂದು ತಂದೆಯೊಡನೆ ಬಂದಿದ್ದರಲ್ಲ, ಅವರೇ!'

'ನಾಕರರಾಯ ಮಾಸ್ತರರ ಕುಮಾರಿ ಉಷಾದೇವಿಯವರೇನು?'

'ಹೌದು ಸರಕಾರ, ಹೆಸರು ಮರೆತಿತ್ತು. ಅದೇ ಉಷೆಯೇ ಬಂದಿರುವಳು.'

'ಮೂರ್ಖ! ಶಿಕ್ಷಣ ಸಂಸ್ಥೆಯಂತಹ ಪವಿತ್ರವಾದ ಸಂಸ್ಥೆಯಲ್ಲಿ ಕೆಲಸ ಮಾಡುವ ಗೌರವಾನ್ವಿತ ಶಿಕ್ಷಕಿಯರಿಗೆ ಏಕ ವಚನದಿಂದ ಸಂಬೋಧಿಸುವೆಯಾ? ಶಿಕ್ಷಕರಿಗೆ ಬೇಕಾದಂತಹ ದುಶ್ಶಬ್ದಗಳನ್ನಾಡಿದರೂ ಸಹಿಸೇನು; ಆದರೆ ಶಿಕ್ಷಕಿಯರಿಗೆ, ಅದರಲ್ಲಿ ಉಷಾದೇವಿಯವರಂತಹ ಸರ್ವಾಂಗಸುಂದರ ಶಿಕ್ಷಕಿಯರಿಗೆ ಕೆಟ್ಟ ಮಾತಾಡಿದರೆ ನನಗೆ ಸಹನವಾಗುವದಿಲ್ಲ.'

'ಖಾವಿಂದ, ನನ್ನಿಂದ ತಪ್ಪಾಯಿತು. ಕ್ಷಮಿಸಿರಿ' ಎಂದು ಆ ನೌಕರನು ಕೈ ಜೋಡಿಸಿ ಬೇಡಿಕೊಂಡನು.

'ಇನ್ನೊಮ್ಮೆ ಇಂತಹ ವರ್ತನವು ನಿನ್ನಿಂದ ಘಟಿಸಿದರೆ ನೌಕರಿಗೆ ಎರವಾದೀ! ಎಚ್ಚರದಿಂದಿರು!' ಎಂದು ಕೃಷ್ಣರಾಯರು ಗರ್ಜಿಸಿ—'ಅವರನ್ನು ಸನ್ಮಾನಪೂರ್ವಕವಾಗಿ ಒಳಗೆ ಕಳುಹಿಸು.'

ನೌಕರನು 'ಮಹಾದಾಜ್ಞೆಯೆ'ಂದು ಹೊರಟು ಹೋದನು. ಮುಂದೆ ಕೆಲವು ಕ್ಷಣಗಳಲ್ಲಿ ಉಷಾದೇವಿಯು ಒಳಗೆ ಬಂದು ಸಾಹೇಬರಿಗೆ ವಂದಿಸಿದಳು. ಸಾಹೇಬರು ಅವಳ ವಂದನೆಯನ್ನು ಪ್ರೇಮಪೂರ್ವಕವಾಗಿ ಸ್ವೀಕರಿಸಿ, ಬಳಿಯಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಳ್ಳಹೇಳಿದರು.

ಉಷೆಯು ಹಿಂದಿನಂತೆ ನಾಚಲಿಲ್ಲ. ಅವಳು ಸಾಹೇಬರ ಆಜ್ಞೆಯಾದೊಡನೆ ಅವರ ಬಳಿಯಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡಳು. ಇಂದು ಉಷೆಯು ನ್ಯೆ ಬಿಟ್ಟು ವರ್ತಿಸತೊಡಗಿದ್ದನ್ನು ನೋಡಿ, ಸಾಹೇಬರ ಮನಸ್ಸು ಸಂಭ್ರಮಗೊಂಡಿತು. ಅವಳು ಮೊದಲಿನಂತೆ ಹಟಮಾರಿಯಾಗಿರದೆ, ಇಂದು ಒಳ್ಳೆಯ ಅನುಕೂಲೆಯಾಗಿರುವಳೆಂದು ಸಾಹೇಬರ ಗ್ರಹಿಕೆಯಾಯಿತು. ಕೂಡಲೆ ಅವರು ವಿಶ್ರಾಂತಿ ಕುರ್ಚಿಯನ್ನು ಬಿಟ್ಟು ಅಲ್ಲಿದ್ದ ಮತ್ತೊಂದು ಕುರ್ಚಿಯನ್ನು ಉಷೆಯ ಕುರ್ಚಿಯ ಸಮೀಪದಲ್ಲಿಯೆ ಎಳೆದು ಅದರ ಮೇಲೆ ಕುಳಿತರು. ಅನಂತರದಲ್ಲಿ ಅವರು ಉಷೆಯನ್ನು ಕುರಿತು—'ನನ್ನ ವಿನಂತಿಗೆ ಮನ್ನಣೆಯಿತ್ತು ಬಂದದ್ದನ್ನು ನೋಡಿ ಆನಂದವಾಯಿತು.'

'ಮಾಸ್ತರ ಆಜ್ಞೆಯಂತೆ ನಡೆಯಲಿಕ್ಕೇ ಬೇಕು.'

'ಉಷಾದೇವಿ, ಆಜ್ಞೆಯಲ್ಲ. ಬಿನ್ನಹ ಸ್ವಂತದ ವಿಷಯದಲ್ಲಿ ನಾನು ಆಜ್ಞೆ ಮಾಡುವ ಹವ್ಯಾಸಕ್ಕೆ ಬೀಳುವದಿಲ್ಲ, ಎಂದು ಕೃಷ್ಣರಾಯರು ನುಡಿದು 'ನಿಮ್ಮ ತಂದೆಯವರಿಗೆ ಪೂರ್ಣ ವೇತನದ ರಜೆಯನ್ನು ಕೊಡಬೇಕೆಂದು ಯೋಚಿಸಿರುವೆನು. ನಿಮ್ಮನ್ನು ಶಿಕ್ಷಕಿಯರನ್ನಾಗಿ ನಿಯಮಿಸಿರುವೆನು. ಆ ಸ್ಥಳದಲ್ಲಿ ನಿಮ್ಮನ್ನು ಸ್ಥಿರಪಡಿಸಬೇಕೆಂದೇ ನಾನು ನಿಶ್ಚಯಿಸಿರುವೆನು. ನಿಮ್ಮ ಇಚ್ಛೆಯಿದ್ದರೆ ಇದೇ ವರ್ಷ ಟ್ರೇನಿಂಗಿಗೆ ಕಳುಹಿಸುವೆನು. ಉಷಾದೇವಿ, ದೀನರ ದೈನ್ಯಾವಸ್ಥೆಯನ್ನು ನೋಡಿದರೆ, ನನ್ನ ಹೃದಯವು ಬೆಣ್ಣೆಯಂತೆ ಕರಗುತ್ತದೆ.'

'ಘನವಂತರ ಹೃದಯವು ಘನವಾದದ್ದೇ ಇರುತ್ತದೆ'

'ಹೀಗಿದ್ದರೂ ಜನರು ನನ್ನಮೇಲೆ ನಿಷ್ಕಾರಣವಾಗಿ ಅಪಕೀರ್ತಿ ಹೊರಿಸುತ್ತಾರೆ; ಮನಬಂದಂತೆ ನಿಂದೆಮಾಡುತ್ತಾರೆ.'

'ಇದೊಂದು ಖೇದದ ಸಂಗತಿಯು. ನಿಷ್ಕಲಂಕಿಗಳೆಂದು ಹೇಳಿಕೊಳ್ಳುವ ತಮ್ಮನ್ನು ಜನರು ನಿಂದಿಸುವದನ್ನು ನೋಡಿದರೆ ವಿಸ್ಮಯವಾಗುವದು.'

'ಜನವೋ,-ದನವೋ! ಗಂಡಸಿನ ಜನ್ಮ ಜಾರಿದ್ದರೆ ತಪ್ಪಲ್ಲ ನಾನೇನು ಒತ್ತಾಯ ಮಾಡಿ ಸ್ತ್ರೀಯರನ್ನು ವಶಪಡಿಸಿಕೊಂಡಿಲ್ಲ. ಕೆಲವರು ತಮ್ಮ ಲಾಭಕ್ಕಾಗಿ ತಾವಾಗಿ ನನ್ನ ವಶವಾಗಿರುವರು. ಕೆಲವು ಹಟಮಾರಿ ಜನರು ನನ್ನಿಂದ ಹೇರಳವಾಗಿ ಲಾಭಹೊಂದಿ ವಶರಾಗುವರು. ಈಗ ನೋಡಿರಿ, ನಾನು ನಿಮಗೆ ಮಾಡಬೇಕೆಂದಿರುವ ಉಪಕಾರವೇನು ಸಣ್ಣದೆ? ನಿಮ್ಮ ಆಯುಷ್ಯದ ಕಲ್ಯಾಣ ಮಾಡುವದು ನನ್ನ ಕೈಯಲ್ಲಿದೆ. ಇಷ್ಟು ಉಪಕಾರ ಮಾಡುತ್ತಿದ್ದರೂ, ನಾನೇನು ನಿಮ್ಮಂತಹ ಎಳೆಯರನ್ನು ನನ್ನ ಗೃಹಿಣಿಯನ್ನಾಗಿ ಮಾಡಿಕೊಳ್ಳುವದಿಲ್ಲ. ಇದು ನನ್ನ ದೊಡ್ಡಿಸ್ತನವಲ್ಲವೆ? ಪ್ರಣಯ ವ್ಯವಹಾರವು ಗುಪ್ತವಾಗಿ ಉಳಿಯುವ ಬಗ್ಗೆ ನಾನು ಎಷ್ಟು ಜಾಗ್ರತೆಗೊಳ್ಳುತ್ತಿರುವೆನೆಂಬದನ್ನು ನೋಡಿದರೆ ನೀವು ಬೆರಗಾಗಬಹುದು.'

'ಇದೊಂದು ನಿಮ್ಮ ಘನವಂತಿಕೆಯ ಚಿಹ್ನವೇ ಸರಿ!' ಎಂದು ಉಷೆಯು ನುಡಿದು, ತನ್ನ ಮೇಲೆ ಯಾವ ಪ್ರಸಂಗವೊದಗುವದೋ, ಎಂದು ಯೋಚಿಸುತ್ತ ಕುಳಿತಳು.

ಅಷ್ಟರಲ್ಲಿ ಕಾಫಿ-ಉಪಾಹಾರಗಳು ಅಲ್ಲಿಗೆ ತರಲ್ಪಟ್ಟವು. ನೌಕರನು ಸಾಹೇಬರಿಗೂ ಉಷೆಗೂ ಉಪಾಹಾರದ ಸಾಮಗ್ರಿಗಳನ್ನು ಬಡಿಸಿ, ಎದುರಿಗಿದ್ದ ಚೌಕಿಯ ಮೇಲೆ ಕಾಫಿಯ ಪೇಲೆಗಳನ್ನಿರಿಸಿದನು. ಉಷೆಗೆ ಕಾಫಿ-ಉಪಾಹಾರಗಳು ಬೇಕಾಗಿದ್ದಿಲ್ಲ; ಆದರೂ ವರಿಷ್ಟರ ಆಗ್ರಹಕ್ಕಾಗಿ ತೆಗೆದು

ಕೊಳ್ಳಬೇಕಾಯಿತು. ಉಪಾಹಾರವಾದ ಬಳಿಕ ನೌಕರನು ತೆರವಾದ ಪಾತ್ರೆ ಗಳನ್ನು ತೆಗೆದುಕೊಂಡು ಹೊರಟು ಹೋದನು. ಹೋಗುವಾಗ ಅವನು ದಿವಾಣಖಾನೆಯ ಬಾಗಿಲನ್ನು ಮುಂದೆ ಮಾಡಿಕೊಂಡು ಹೊರಟು ಹೋದನು ಉಷೆಯು ಗಾಬರಿಗೊಂಡಳು. ತಾನು ಹುಲಿಯ ದವಡೆಯಲ್ಲಿ ಸಿಲುಕಿದೆನೆಂದು ಅವಳು ತಿಳಿದಳು. ಶೀಲರಕ್ಷಣೆಗಾಗಿ ಹೇಗೆ ಉಪಾಯ ಮಾಡಬೇಕೆಂದು ಅವಳು ಯೋಚಿಸತೊಡಗಿದಳು.

ಕೃಷ್ಣರಾಯರು ಎದುರಿಗಿದ್ದ ತಬಕದೊಳಗಿನ ವೀಳ್ಯವನ್ನು ಉಷೆಯ ಕೈಯಲ್ಲಿ ಕೊಡಹೋದರು. 'ನಾನು ತಾಂಬೂಲ ತಿನ್ನುವ ರೂಢಿಯನ್ನಿಟ್ಟಿ ಲ್ಲವೆ'ಂದು ಉಷೆಯು ಹೇಳಿದರೂ, ಅವರು ಕೇಳಲಿಲ್ಲ. ಅವರು ತಾಂಬೂಲ ವನ್ನು ಉಷೆಯ ಬಾಯಲ್ಲಿ ಕೊಡಹೋದರು. ಪ್ರಸಂಗವು ಮೈ ಮೇಲೆ ಬಂದ ದ್ದನ್ನು ನೋಡಿ ಉಷೆಯು ಮುಖವನ್ನು ಹಿಂದಕ್ಕೆ ಮಾಡಿ, ಆ ತಾಂಬೂಲ ವನ್ನು ಕೈಯಲ್ಲಿ ತೆಗೆದುಕೊಂಡು ಬಾಯಲ್ಲಿ ಹಾಕಿಕೊಂಡಳು.

'ನೀವು ಒಳ್ಳೇ ದಾಕ್ಷಿಣ್ಯದವರಾಗಿ ಕಾಣುತ್ತೀರಿ.'

'ನೀವು ದಾಕ್ಷಿಣ್ಯವೆಂದು ಏತಕ್ಕೆ ಅನ್ನುವಿರೋ-ಏನೋ!'

'ದಾಕ್ಷಿಣ್ಯವಲ್ಲವೇ ಇದು? ಕಾಫಿ-ಉಪಾಹಾರಗಳನ್ನು ತೆಗೆದುಕೊಳ್ಳ ಲಿಕ್ಕೆ ತಾಂಬೂಲ ಸೇವನೆಗೂ ಎಷ್ಟು ಸಂಕೋಚಪಡುವಿರಿ! ಮೊದಲು ಮೊದಲು ಹೀಗೆಯೇ ಸರಿ. ವನಿತೆ, ರಾಧಾದೇವಿ ಮೊದಲಾದವರಾದರೂ ಮೊದಲು ಹೀಗೆಯೇ ಮಾಡುತ್ತಿದ್ದರು.' ಎಂದು ಕೃಷ್ಣರಾಯರು ನಗುತ್ತ ನುಡಿದು-'ಈಗ ದಿವಾಕರರಾಯರ ಪ್ರಕೃತಿ ಹೇಗಿದೆ?'

'ಅವರು ಬದುಕಿ ಉಳಿದರೆ ಪುನರ್ಜನ್ಮ ಹೊಂದಿದಂತಾಗುವದು. ನನ್ನನ್ನು ಪರದೇಶಿಯನ್ನಾಗಿ ಮಾಡಿ ಎಲ್ಲಿ ಹೊರಟು ಹೋಗುವರೋ, ಎಂದು ಮನಸ್ಸು ತಳಮಳಿಸುತ್ತಿರುವದು.'

'ಉಷಾದೇವಿ, ಈಶ ಸಂಕಲ್ಪದಂತೆ ಎಲ್ಲ ಕಾರ್ಯಗಳು ನೆರವೇರುವವು. ಪರಮಾತ್ಮನುಅವರ ಆಯುಷ್ಯದ ಪರಿಮಾಣವನ್ನು ಇಲ್ಲಿಗೇ ಮುಗಿಸಿಬಿಟ್ಟಿದ್ದರೆ ಯಾರ ಯತ್ನವೇನಿದೆ? ಅವರಿಗೆ ಒಳಿತಾದರಂತು ವಿಹಿತವಾಯಿತು; ಒಂದು ವೇಳೆ ಕೆಡಕಾದರೂ ಮಿಡುಕುವ ಕಾರಣವಿಲ್ಲ. ನಾನು ನಿಮ್ಮ ಯೋಗಕ್ಷೇಮದ ಭಾರವನ್ನು ವಹಿಸುವೆನು. ನಮ್ಮ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವ ನಿಮ ನ್ನು ನಾನು ಪರಕೀಯರೆಂದು ಭಾವಿಸುವದೇ ಇಲ್ಲ.'

'ಸಾಹೇಬರೆ, ನೀವು ನನ್ನ ತಂದೆಯ ತರುವಾಯ ಅವರ ಸ್ಥಳವನ ಕರಿಸಿದರೆ, ನಾನು ಧನ್ಯಳಾಗುವೆನು.'

ಉಷೆಯ ಈ ಮಾತಿನಿಂದ ಕೃಷ್ಣರಾಯರಿಗೆ ಸಮಾಧಾನವೆನಿಸಲಿಲ್ಲ; ಯಾಕೆಂದರೆ, ಬಹಳಮಾಡಿ ಅವರ ಮನಸ್ಸಿನಲ್ಲಿ ಉಷೆಯು ತಂದೆಯ ಸ್ಥಾನವನ್ನು ಸ್ವೀಕರಿಸುವದಿರಲಿಕ್ಕಿಲ್ಲ. ಆಗ ಅವರು—'ಉಷಾದೇವಿ, ಯಾರ ಸ್ಥಾನದಲ್ಲಿದ್ದರೂ ನಿಮ್ಮ ಯೋಗಕ್ಷೇಮದ ಭಾರವನ್ನು ವಹಿಸುವೆನೆಂದು ಖಂಡಿತವಾಗಿ ಹೇಳುವೆನು. ನೀವು ನಿಶ್ಚಿಂತರಾಗಿರಿ' ಎಂದು ನುಡಿದು—'ಉಷಾದೇವಿ, ನಾನು ನಿಮ್ಮ ಮೇಲೆ ಎಷ್ಟು ಉಪಕಾರ ಮಾಡಿರುವೆನೆಂಬದನ್ನು ಲಕ್ಷ್ಯದಲ್ಲಿರಿಸಿರುವಿರಾ?"

'ಓಹೋ! ಲಕ್ಷ್ಯದಲ್ಲಿರಿಸದಿರಲಿಕ್ಕೇನಾಗಿದೆ?'

'ನಾನು ಮಾಡಿದ ಉಪಕಾರಕ್ಕಾಗಿ ಅಲ್ಪ ಮಟ್ಟಿಗಾದರೂ ಪ್ರತ್ಯುಪಕಾರ ಮಾಡಬೇಕೆಂದು ನೀವು ಇಚ್ಛಿಸುತ್ತಿರುವಿರಲ್ಲವೆ?'

'ದೀನದರಿದ್ರಳಾದ ನಾನು ಪ್ರತ್ಯುಪಕಾರವನ್ನೇನು ಮಾಡಲಿ? ನನ್ನಿಂದ ಉಪಕಾರ ಹೊಂದುವಂತೆ ನಿಮ್ಮ ಸ್ಥಿತಿಯಾದರೂ ಎಲ್ಲಿದೆ?'

'ನೀವು ದೀನರಾಗಿದ್ದರೂ, ನಾನು ಧನಿಕನಾಗಿದ್ದರೂ ಉಪಕಾರಮಾಡಲಿಕ್ಕೂ ಹೊಂದಲಿಕ್ಕೂ ಆಸ್ಪದವಿದೆ. ನನ್ನದೊಂದು ಇಚ್ಛೆಯನ್ನು ಪೂರ್ತಿಗೊಳಿಸಲಿಕ್ಕೆ ನೀವು ಒಪ್ಪಲಿಕ್ಕೇಬೇಕು.' ಎಂದು ಕೃಷ್ಣರಾಯರು ನುಡಿದು, ಕುರ್ಚಿಯಿಂದೆದ್ದು ಉಷೆಯ ಕೈ ಹಿಡಿದರು.

ಉಷೆಯು ಗಾಬರಿಗೊಂಡು ಕುರ್ಚಿಯಿಂದೆದ್ದು ಕೈ ಬಿಡಿಸಿಕೊಂಡು, ಹಿಂದೆ ಸರಿದು—'ನೀವು ಹೀಗೇಕೆ ಭ್ರಮಿಷ್ಟರಂತೆ ವರ್ತಿಸುತ್ತಿರುವಿರಿ? ನಿಮ್ಮ ಮೊಮ್ಮಗಳಂತೆ ಇರುವ ನನ್ನ ಮೇಲೆ ಪಾಪದೃಷ್ಟಿಯನ್ನಿಡುವಿರಾ?'

'ಉಷೆ, ನೀನು ನನಗೆ ಉಪದೇಶಿಸುವ ಹವ್ಯಾಸಕ್ಕೆ ಬೀಳಬೇಡ. ನಿನ್ನ ಜನ್ಮದ ಕಲ್ಯಾಣ ಮಾಡುವವನಾದ ನನ್ನ ಅತ್ಯಲ್ಪವಾದ ಇಚ್ಛೆಯನ್ನು ಈಡೇರಿಸಲಾರೆಯಾ?' ಎಂದು ಕೃಷ್ಣರಾಯರು ನುಡಿದು, ಮತ್ತೆ ಉಷೆಯ ಕೈ ಹಿಡಿಯುವದಕ್ಕೆ ಮುಂದೆ ಸಾಗಿದರು.

ಉಷೆಯು ಗಾಬರಿಯಿಂದ ಹಿಂದೆ ಸರಿಯುತ್ತ—'ಸಾಹೇಬರೆ, ಈ ನಿಮ್ಮ ವರ್ತನವು ಉಚಿತವಾದದ್ದಲ್ಲ. ಪ್ರಾಣವಿರುವವರೆಗೆ ನಾನು ನನ್ನ ಪಾವಿತ್ರ್ಯವನ್ನು ರಕ್ಷಿಸಿಕೊಳ್ಳತಕ್ಕವಳೇ. ನೀವು ಕೊಡುವ ರೊಕ್ಕ-ರೂಪಾಯಿಗಳಿಗೆ ನಾನು ಅದನ್ನು ಮಾರಲಿಕ್ಕೆ ಇಚ್ಛಿಸುವದಿಲ್ಲ. ನೀವು ಕೈ ಮುಟ್ಟಿ ಮೈಮುಟ್ಟ ಬಂದರೆ ತಲೆಯನ್ನು ನೆಲಕ್ಕಪ್ಪಳಿಸಿ ಪ್ರಾಣ ಬಿಡುವೆನು!'

ಕೃಷ್ಣರಾಯರು ಚಕಿತರಾದರು. ಅವರಲ್ಲಿ ಸಂತಾಪವೂ ಹುಟ್ಟಿತು. ಆಗ ಅವರು ಕರ್ಕಶವಾಣಿಯಿಂದ—'ಹೊಯ್ಮಾಲಿ! ನೌಕರಿಗಳು ದಾಡಿಯು

ಮೇಲೆ ಬಿದ್ದಿರುವವೆಂದು ತಿಳಿದಿರುವೆಯಾ? ನಿನ್ನ ಹಾಗು ನಿನ್ನ ತಂದೆಯ ಜನ್ಮದ ಕಲ್ಯಾಣ ಮಾಡುವವನಾದ ನನ್ನ ಅತ್ಯಲ್ಪವಾದ ಇಚ್ಛೆಯನ್ನು ಈಡೇರಿಸದಿದ್ದರೆ ಮುಂದೆ ಕಠಿಣವಾದೀತು. ನೀವಿಬ್ಬರು ತಂದೆ-ಮಕ್ಕಳನ್ನು ಇಂದಿಗೆ ನೌಕರಿಯಿಂದ ತಳ್ಳಿ ಬಿಡುವೆನು. ಶಿಕ್ಷಣಸಂಸ್ಥೆಯ ಸರ್ವಾಧಿಕಾರಿಯಾದ ನಾನು ನಿಗ್ರಹಾನುಗ್ರಹ ಸಂಪನ್ನನಿರುವೆನು. ನನ್ನ ಕ್ಷೋಭೆಗೆ ಈಡಾದ ರಮಾ-ಸುರೇಂದ್ರರ ಅವಸ್ಥೆಯು ಏನಾಗಿರುವದೆಂಬದನ್ನು ಚನ್ನಾಗಿ ನಿರೀಕ್ಷಿಸು. ವನಿತೆ, ಕುಸುಮಾವತಿ, ಚಂಪಾವತಿ, ರಾಧಾದೇವಿ ಮೊದಲಾದ ಶಿಕ್ಷಕಿಯರೂ, ಆನಂದರಾಯ-ಗೋವಿಂದರಾಯರೇ ಮೊದಲಾದ ಶಿಕ್ಷಕರೂ ಹೇಗೆ ಸ್ವಚ್ಛಂದದಿಂದ ಕಾಲಕಳೆಯುತೊಡಗಿರುವರೆಂಬದನ್ನು ಚನ್ನಾಗಿ ಮನಸ್ಸಿನ ಮೇಲೆ ತೆಗೆದುಕೊಂಡು ವಿಚಾರ ಮಾಡು ಪ್ರತ್ಯುಪಕಾರವನ್ನು ಬಯಸದೆ ಉಪಕಾರ ಮಾಡಲಿಕ್ಕೆ ನೀನೇನು ನಮ್ಮಪ್ಪನ ಮಗಳಲ್ಲ, ನನ್ನ ಮಗಳೂ ಅಲ್ಲ. ಹೇಳು, ಸ್ಪಷ್ಟವಾಗಿ ಹೇಳು. ನೀನು ನನ್ನ ಇಚ್ಛೆಯನ್ನು ಪೂರೈಸಲೊಪ್ಪುವೆಯೋ, ಇಲ್ಲವೊ? ನನ್ನ ಹೇಳಿಕೆಯಂತೆ ವರ್ತಿಸದಿದ್ದರೆ, ಇಂದೇ ನೀವು ತಂದೆ-ಮಕ್ಕಳಿರ್ವರೂ ನೌಕರಿಗೆ ಹೊರತಾಗುವಿರೆಂಬದನ್ನು ಲಕ್ಷ್ಯದಲ್ಲಿಟ್ಟು ನನ್ನ ಮಾತಿನ ಉತ್ತರ ಕೊಡು!'

'ಸಾಹೇಬರೆ, ಬಡವರನ್ನು ಹೀಗೆ ಗೋಳಾಡಿಸಬೇಡಿರಿ. ನಿಮ್ಮ ವಿಷಯಲಾಲಸೆಯನ್ನು ತಣಿಸುವ ಜನರನ್ನೇನು ನೀವು ಕಡಿಮೆಯಾಗಿ ಸಂಗ್ರಹಿಸಿಲ್ಲ. ಇನ್ನೂ ಎಷ್ಟು ಕುಲಯುವತಿಯರ ಶೀಲವನ್ನು ನಿಮ್ಮ ರಾಕ್ಷಸೀ ವಿಷಯಲಾಲಸೆಗೆ ಬಲಿ ತೆಗೆದುಕೊಳ್ಳಬೇಕೆಂದು ಮಾಡಿರುವಿರಿ? ನಾನು ಅನನ್ಯಗತಿಕಳಾಗಿರುವೆನೆಂಬದೇನೋ ನಿಜ; ಆದರೆ ನನಗೆ ಶೀಲವು ಪ್ರಾಣಕ್ಕಿಂತ ಮಿಗಿಲಾದದ್ದಿರುವದರಿಂದ, ನಿಮ್ಮ ಆಶೆಯು ನಿಷ್ಫಲವಾಯಿತು. ಅದಕ್ಕಾಗಿ ಕ್ಷೋಭೆಗೊಳ್ಳಬೇಡಿರಿ. ನೀವು ನನಗೆ ನೌಕರಿ ಕೊಡದಿದ್ದರೆ ಅದಕ್ಕಾಗಿ ನನ್ನ ಆಗ್ರಹವಿಲ್ಲ. ನನ್ನ ತಂದೆಯವರಿಗೆ ಬೇನೆಯ ರಜೆಯನ್ನು ಕೊಟ್ಟರೆ, ನಿಮ್ಮನ್ನು ಹಾಡಿ ಹರಸುವೆನು ನಿಯಮದಂತೆ ಅವರು ಬೇನೆಯ ರಜೆಯನ್ನು ಹೊಂದಲಿಕ್ಕೆ ಪಾತ್ರರಿರುವರು. ನೀವು ಕೃಪಾದೃಷ್ಟಿಯನ್ನಿಟ್ಟು ಇಷ್ಟು ಕೆಲಸ ಮಾಡಿದರೆ ಸಾಕು. ನನಗೆ ಹೆಚ್ಚಿನ ಆಶೆಯಿಲ್ಲ.'

ಉಷೆಯು ಕಣ್ತುಂಬ ನೀರು ತಂದು ಕೈ ಜೋಡಿಸಿ ಸಾಹೇಬರಿಗೆ ವಿನಂತಿ ಮಾಡಿಕೊಂಡಳು. ಅರ್ಥಹೀನವಾದ ದೀನವಾಣಿಯಿಂದ ಅವರ ಮನಸ್ಸು ಕರಗುವಂತಹದಿದ್ದಿಲ್ಲ. ಕಲ್ಲಿಗಿಂತ ಕಲ್ಲಾದ ಸಾಹೇಬರ ಹೃದಯವನ್ನು ಒಸರಿಸುದ ಪ್ರಕಾರಗಳು ಬೇರೆ ವಿಧದವಿದ್ದವು. ಆ ವಿಧವಾಗಿ ನಡೆ

ಯದೆ, ಬರಿಯ ಬಾಯಿಮಾತಾಗಳಿಂದ ಎಷ್ಟು ಬೇಡಿಕೊಂಡರೇನಾಗು ವದು? ಸಾಹೇಬರು ಉಷೆಯ ವರ್ತನದಿಂದ ಖತಿಗೊಂಡರು. ಆಗ ಅವರು: 'ಉನ್ಮತ್ತಳಾದ ಉಷೆ, ನೀನು ವರಿಷ್ಠರ ಆಜ್ಞಾಭಂಗ ಮಾಡಿ ಗಂಡಾಂತರ ಕ್ಕೀಡಾದೆ. ಇನ್ನೂ ವಿಚಾರಮಾಡಿ ಹೇಳು. ನೀನು ಇನ್ನು ಮೇಲಾದರೂ ಅನು ಕೂಲವಾದ ಉತ್ತರವಿತ್ತರೆ, ಅನುಗ್ರಹ ಮಾಡಲಿಕ್ಕೆ ಮಾರ್ಗವುಂಟು. ನೀನು ನನ್ನ ಮಾತು ಮೀರಿದರೆ ಹಿಂದಿನಿಂದ ಪಶ್ಚಾತ್ತಾಪ ಹೊಂದಬಹುದು. ನಡೆದು ಬರತೊಡಗಿದ ಲಕ್ಷ್ಮಿಯನ್ನು ದೂಡಬೇಡ. ನನ್ನನ್ನು ವರಿಸಬೇಕೆಂದು ನಾನು ನಿನಗೆ ಒತ್ತಾಯ ಮಾಡುವದಿಲ್ಲ. ಕೇವಲ ಮನೋಲಹರಿಗನುಸಾರವಾಗಿ ಕೆಲ ಕಾಲದ ಸಹವಾಸ-ಸ್ನೇಹಗಳನ್ನು ನಾನು ಬಯಸಿರುವೆನು. ಅದೂ ಸದ್ಯಕ್ಕೆ ನೆರವೇರದಿದ್ದರೆ ಒಂದೆರಡು ಸವಿ ಸವಿ ಚುಂಬನ; ಆಲಿಂಗನ ಇಷ್ಟೇ! ಮತ್ತೇನೂ ಬೇಡ. ಹೇಳು; ಉಷೇ, ಇನ್ನೊಮ್ಮೆ ಸ್ಪಷ್ಟವಾಗಿ ಹೇಳು.'

'ಇಷ್ಟೆಲ್ಲ ನಿಮ್ಮ ಮನೋಲಹರಿಗಳನ್ನು ತೃಪ್ತಿಪಡಿಸುವದು ಏತ ಕ್ಕಾಗಿ?'

'ಏತಕ್ಕಾಗಿಯೆಂದರೆ, ನೌಕರಿಗಾಗಿ! ನೌಕರಿಯಿಂದ ದೊರೆಯುವ ಧನಕ್ಕಾಗಿ! ಧನದಿಂದ ಉಳಿಯುವ ನಿನ್ನ ತಂದೆಯ ಪ್ರಾಣಕ್ಕಾಗಿ! ನಿನ್ನ ತಂದೆಯ ಪ್ರಾಣದಾನ ಮಾಡುವ ಈ ಸಾಹೇಬರಿಗೆ ಗುಪ್ತಪ್ರಣಯದಾನ ಮಾಡಲಾರೆಯಾ ಉಷೆ?'

'ವಿಷಯಾಂಧ ರಕ್ಕಸಾ! ನೀನು ಮನುಷ್ಯನಲ್ಲ; ಶುದ್ಧ ಪಶುವು! ನನ್ನ ಹಾಗು ನನ್ನ ತಂದೆಯ, ಇನ್ನೂ ಎಷ್ಟೋ ಸ್ವಕೀಯರ ಪ್ರಾಣಗಳಿಗಿಂತ ನನ್ನ ಶೀಲದ ಬೆಲೆಯು ಹೆಚ್ಚಿರುವದು. ನಿನ್ನ ತುಚ್ಛವಾದ ನೌಕರಿಗಾಗಿ-ನೌಕರಿ ಯಿಂದ ದೊರೆಯುವ ಧನಕ್ಕಾಗಿ-ಧನದಿಂದ ಉಳಿಯುವ ಪ್ರಾಣಕ್ಕಾಗಿ ನಾನು ನನ್ನ ಅಮೌಲ್ಯವಾದ ಶೀಲವನ್ನು ನಾಶಮಾಡಿಕೊಳ್ಳಲಾ? ಕಾಲತ್ರಯದ ಲ್ಲಿಯೂ ಈ ಕಾರ್ಯವಾಗದು. ನಿನ್ನ ನೌಕರಿಯೂ ನೀನೂ ನನ್ನ ಪಾದ ತ್ರಾಣದ ಬೆಲೆಯವಿಷ್ಟಿಲ್ಲ. ನಿನ್ನಂತಹ ದುಶ್ಶೀಲನ ಕೈ ಕೆಳಗೆ ನೌಕರಿ ಮಾಡು ವದಕ್ಕಿಂತ ತಿರಿದುಣ್ಣುವದು ಮೇಲು; ತಿರಿಕೆ ಹುಟ್ಟದಿದ್ದರೆ ಉರಲಿ ಸಾಯು ವದು ಮೇಲು! ಕಾಮಾಂಧಾ! ಕುಲಸ್ತ್ರೀಯೆಂದರೆ, ಬೀದಿಯ ಬಸವಿಯ ರೆಂದು ತಿಳಿದಿರುವೆಯಾ? ನೀನು ಸರ್ವತಂತ್ರ-ಸ್ವತಂತ್ರನಾದ್ದರಿಂದ ಅನೇಕ ಅಬಲೆಯರನ್ನು ಜಾಳಿಗೆಯಲ್ಲಿ ತೊಡಗಿಸಿ, ಅವರ ಸತ್ವವನ್ನು ಹರಣ ಮಾ- ಡಿದೆ. ಆ ಸಾಧ್ವಿಯರ ಬಿಸಿಯುಸಿರೂ, ಶಾಪವಾಣಿಯೂ ನಿನ್ನನ್ನು ದಹಿ ಸದೆ ಬಿಡುವವೆ? ನಿನ್ನಂತಹ ಕಾಮುಕನಿಗೆ, ಕುಲಕಾಮಿನಿಯರ ಶೀಲವನ್ನು

ಹಾಳು ಮಾಡಿದವನಿಗೆ ದುರ್ಮರಣವೇ ಒದಗವದಲ್ಲದೆ, ಸುಖದ ಸಾವು ಎಂದಿಗೂ ದೊರೆಯಲಾರದು.'

'ಹಾ! ಹಾ! ಶಾಪವಾಣಿ!! ಇವಳೇನೋ ಪಂಚಕನ್ಯೆಯರಂತೆಯೇ ಆಡಂಬರವಿಟ್ಟಳು!' ಎಂದು ಕೃಷ್ಣರಾಯರು ವಿಕಟ ಹಾಸ್ಯಗೈದು ನುಡಿದು- 'ರಮಣಿ! ನೀನು ನನ್ನ ಕೈಯಿಂದ ಪಾರಾಗಿ ಹೋಗದಂತಹ ಪರಿಸ್ಥಿತಿಯಲ್ಲಿ ರುವೆ. ಬಾಗಿಲು ಮುಚ್ಚಲ್ಪಟ್ಟಿದೆ. ಚನ್ನಾಗಿ ವಿಚಾರ ಮಾಡಿ ನೋಡು.'

'ಈ ಬಗೆಯ ಹೆದರಿಕೆಯನ್ನು ತೋರಿಸಬೇಡ. ಪಿಶಾಚಿ! ನೀನು ನನ್ನ ಉಪದೇಶದಿಂದ ದಾರಿಗೆ ಬರದಿದ್ದರೆ, ಇಬ್ಬರಲ್ಲೊಬ್ಬರ ಆಯುಷ್ಯವು ಇದೇ ಗಳಿಗೆಯಲ್ಲಿ ಮುಗಿದಿರುವದೆನ್ನಬೇಕಾಗುವದು.'

'ಇದೊಂದು ಸಾಧ್ವೀ ಸ್ತ್ರೀಯರ ಚರಿತ್ರಗಳೊಳಗಿನ ಪಾಠಮಾಡಿದ ವಾಕ್ಯ!' ಕೃಷ್ಣರಾಯರು ಮತ್ತೆ ನಗತೊಡಗಿದರು.

'ಈಗ ಬಾಗಿಲ ತೆರೆಯಿರಿ' ಉಷೆಯು ಸಂತಾಪದಿಂದ ಗರ್ಜಿಸಿದಳು.

'ಹೊರಗೆ ಚಿಲಕ ಹಾಕಿದೆ.' 'ನಿಮ್ಮ ನೌಕರರಿಂದ ತೆಗೆಯಿಸಿರಿ'

'ನೌಕರರಿಲ್ಲ' ಎಂದು ನುಡಿದು, ಕೃಷ್ಣರಾಯರು ಅವಳ ಬಳಿಗೆ ರಭಸ ದಿಂದ ಹೋಗಿ—'ಲಲನಾಮಣಿ! ನನ್ನ ಎಲ್ಲ ಐಶ್ವರ್ಯವನ್ನು ನಿನ್ನ ಮೇಲೆ ನಿವಾಳಿಸುವೆನು. ಬಾ, ಬಾ, ರನ್ನೇ!' ಎಂದು ಅವಳ ಎಡಗೈ ಹಿಡಿದರು. ಕೂಡಲೆ ಉಷೆಯು ತನ್ನ ಉಡಿಯಲ್ಲಿ ಬಚ್ಚಿಟ್ಟದ್ದ ಕೈಗತ್ತಿಯನ್ನು ಹೊರಗೆ ತೆಗೆದು—'ಪಿಶಾಚಿ! ನಿನಗೆ ಜೀವವು ಬೇಡವಾಗಿದ್ದರೆ ಹೇಳು. ಹೂಂ! ಬೇಗನೆ ಕೈ ಬಿಡುವಿಯೋ, ಇದನ್ನು ನಿನ್ನ ಹೃದಯದಲ್ಲಿ ಚುಚ್ಚಲೊ?'

ಕೃಷ್ಣರಾಯರು ಬೆದರಿ ನಾಲ್ಕುಹೆಜ್ಜೆ ಹಿಂದೆ ಸರಿದರು. ಒಳಗಿನ ಗದ್ದಲ ವನ್ನು ಕೇಳಿ ನೌಕರರು ಬಾಗಿಲು ತೆರೆದರು. ಉಷೆಯು ಹೊರಹೊರಟಳು.

'ರಮಣಿ, ನಿನ್ನ ಸಲುವಾಗಿ ಮೇಜವಾನಿ ಮಾಡಲ್ಪಟ್ಟಿದೆ. ಊಟ ಮಾಡಿ ಹೋಗು!' ಕೃಷ್ಣರಾಯರು ಕೈಜೋಡಿಸಿ ವಿನಂತಿ ಮಾಡಿಕೊಂಡರು.

'ನನ್ನ ಮನೆಯ ನಾಯಿಯು ಸಹ ನಿನ್ನ ಮೇಜವಾನಿಯನ್ನು ಸೇವಿಸ ಲಾರದು!' ಎಂದು ಉಷೆಯು ಗರ್ಜಿಸಿ, ಧೃತಪದದಿಂದ ಹೊರಹೊರಟಳು.

ಅವಳನ್ನು ತಡೆಯುವ ಧೈರ್ಯವು ಕೃಷ್ಣರಾಯರಲ್ಲಾಗಲಿ, ಅವರ ನೌಕರರಲ್ಲಾಗಲಿ ಹುಟ್ಟಲಿಲ್ಲ.

'ನಿನ್ನನ್ನು ಡಿಸ್‌ಮಿಸ್ ಮಾಡುತ್ತೇನೆ!'

'ನೀನೇ ಡಿಸ್‌ಮಿಸ್!' ಎಂದು ನುಡಿದು, ಉಷೆಯು ಕೃಷ್ಣರಾಯರ ಬಂಗಲೆಯಿಂದ ಹೊರಬಿದ್ದು ತನ್ನ ಮನೆ ಸೇರಿದಳು.

## ರಾವಸಾಹೇಬರ ಕೊಲೆ!

"ರಮಾದೇವಿ! ಏನು ಮಾಡಲಿ? ಸದ್ಗುಣಿದಂಪತಿಗಳಾದ ನೀವು ನಿರಪರಾಧಿಗಳಿರುವಿರೆಂಬದು ನನಗೆ ತಿಳಿದಿದೆ. ನಿಮ್ಮಮೇಲೆ ದುಃಖದ ಪರ್ವತವೇ ಬಿದ್ದಸಂಧಿಯಲ್ಲಿ ನನ್ನಿಂದ ಸ್ವಲ್ಪವಾದರೂ ನೆರವು ದೊರೆಯುವಂತಿದ್ದಿಲ್ಲವೆಂದು ಖೇದವಾಗುವದು. ಗೋವರ್ಧನರಾಯನ ನೀಚ ಹೃದಯವು ನನಗೆ ಅಪರಿಚಿತವಾದದ್ದಿರಲಿಲ್ಲ. ಸಂಕಟಗ್ರಸ್ತರಾದ ನಿಮ್ಮಲ್ಲಿ ಕರುಣೆಯುಳ್ಳವನಾಗಿರಬಹುದೆಂದು ಊಹಿಸಿ, ನಾನು ತಟಸ್ಥನಿದ್ದೆನು. ಇನ್ನು ನೀವು ಯಾರ ಆಶ್ರಯವನ್ನೂ ಬಯಸದೆ ನನ್ನ ಮನೆಯಲ್ಲಿದ್ದುಬಿಡಿರಿ. ಈ ಮನೆಯು ಪರಕೀಯರದೆಂದು ಭಾವಿಸಬೇಡಿರಿ. ನಾನು ನಿಮ್ಮನ್ನು ಒಡಹುಟ್ಟಿದವಳಂತೆ ಭಾವಿಸಿ ರಕ್ಷಿಸುವೆನು. ನನ್ನ ಮೈಯಲ್ಲಿ ಸ್ವಲ್ಪ ಶಕ್ತಿಯು ಬಂದಿತೆಂದರೆ, ಸುರೇಂದ್ರರಾಯರ ಬಿಡುಗಡೆಯ ಬಗ್ಗೆ ಪ್ರಯತ್ನಿಸುವೆನು."

ದಿವಾಣ ಮಾಧವರಾಯನು ಪ್ರವಾಹಪತಿತಳಾದ ರಮಾದೇವಿಯನ್ನು ಕ್ಷೀಣಕಂಠದಿಂದ ಸಾಂತ್ವನಪಡಿಸತೊಡಗಿದ್ದನು. ರಮಾದೇವಿಯು ಕಣ್ಣೀರುದುರಿಸುತ್ತ ಅತನ ಹಾಸುಗೆಯ ಬಳಿಯಲ್ಲಿ ಕುಳಿತುಕೊಂಡಿದ್ದಳು. ಮಾಧವರಾಯನ ಪತ್ನಿಯಾದ ಶಕುಂತಲೆಯೂ ರಮಾದೇವಿಗೆ ಧೈರ್ಯ ಕೊಡತೊಡಗಿದ್ದಳು.

'ಮಾಧವರಾಯರೆ!' ರಮಾದೇವಿಯು ಗದ್ಗದ ಕಂಠದಿಂದ—'ಕೃಷ್ಣರಾಯರು ದೊಡ್ಡ ಅಧಿಕಾರಸ್ಥರು ಕೊತವಾಲ-ಶಾಂತಿರಕ್ಷಕ ನ್ಯಾಯಾಧೀಶ ಮೊದಲಾದ ಅಧಿಕಾರಿಗಳೆಲ್ಲರೂ ಅವರ ಪರಮ ಸ್ನೇಹಿತರು. ಇಂಥ ಪರಿಸ್ಥಿತಿಯಲ್ಲಿ ನಾವು ಗಂಡಾಂತರದಿಂದ ಪಾರಾಗುವೆವೆಂದು ಹೇಗೆ ಧೈರ್ಯ ತಾಳಬೇಕು?'

'ಅಕ್ಕಾ, ರಮಾದೇವಿ, ಸತ್ಯಕ್ಕೆ ವಿಜಯವು ದೊರೆಯುವದು. ನೀವು ನಿರಪರಾಧಿಗಳೆಂದು ಇಡೀ ವಿಜಯನಗರವು ಅನ್ನುತ್ತಿರುವದು. ಜನರ ಮಾತು ಒತ್ತಟ್ಟಿಗಿರಲಿ; ಪರಮಾತ್ಮನಿಗಾದರೂ ಸತ್ಯಸ್ಥಿತಿಯು ಅರಿಯದಿಲ್ಲ. ಆವನು ನಿರಪರಾಧಿಗಳಾದ ನಿಮ್ಮನ್ನು ಎಂದೂ ಕೊಲ್ಲಲಾರನು' ಎಂದು ಶಕುಂತಲೆಯು ಹೇಳಿದಳು.

'ರಮಾದೇವಿ, ಇವಳ ಮಾತು ನಿಜವಿರುವದು. ಸದ್ಯಕ್ಕೆ ನಿಮಗೆ ಪ್ರತಿಕೂಲಕಾಲವಿರುವದು. ಗ್ರಹದೆಸೆಯು ಎಂಥವರನ್ನೂ ಬಿಟ್ಟಿಲ್ಲ. ಸಂಕಟ

ಸಮಯದಲ್ಲಿ ಧೈರ್ಯದಿಂದಿರಬೇಕು. ಸುರೇಂದ್ರರಾಯರ ಹಾಗು ನಿಮ್ಮ ಮೇಲಿನ ಅಪರಾಧವು ತೊಡೆದು ಹೋಗುವಂತೆ ಯತ್ನಿಸುವ ಒಬ್ಬ ನಿಸ್ಪೃಹ ವೃತ್ತಿಯ ವಕೀಲರ ಅವಶ್ಯಕತೆಯುಂಟು. ನಾನು ನನ್ನ ಪರಿಚಯದ ಒಬ್ಬ ವಕೀಲನನ್ನು ಕರೆಯಿಸಿ, ಎಲ್ಲ ವಿಧದ ವ್ಯವಸ್ಥೆ ಮಾಡುವೆನು'

'ಮಾಧವರಾಯರೆ!' ರಮಾದೇವಿಯು ದೀನವಾಣಿಯಿಂದ—'ವಕೀಲರಿಗೆ ಕೊಡಲಿಕ್ಕೆ ನನ್ನಲ್ಲಿ ಹಣವೆಲ್ಲಿದೆ? ಅನ್ನಕ್ಕೆ ಅಭಾವವಾಗಿ ನಿಮ್ಮ ಮನೆಯನ್ನು ಹೊಂದಿರುವೆನು. ಇಂತಹ ಸ್ಥಿತಿಯಲ್ಲಿ ವಕೀಲರಿಗೆ ಹಣವೆಲ್ಲಿಂದ ತರಲಿ? ಮಾಂಗಲ್ಯದ ಹೊರತು ಬೇರೆ ಆಭರಣಗಳೂ ಮೈಮೇಲಿಲ್ಲ.'

'ನೀವು ನಿಶ್ಚಿಂತೆಯಿಂದಿರಿ. ನಾನು ಎಷ್ಟು ಹಣವನ್ನಾದರೂ ವೆಚ್ಚ ಮಾಡಲಿಕ್ಕೆ ಸಿದ್ಧನಿರುವೆನು,'

ಮಾಧವರಾಯನ ಆಶ್ವಾಸನೆಯಿಂದ ರಮಾದೇವಿಗೆ ಅಂತಹ ದುಃಖದ ಸ್ಥಿತಿಯಲ್ಲಿಯೂ ಆನಂದವಾಯಿತು. ಅವಳು ಆನಂದದ ಭರದಿಂದ—'ಅಣ್ಣಾ ಮಾಧವರಾಯಾ! ಇಂದಿಗೆ ನೀನೇ ನನ್ನ ಒಡಹುಟ್ಟಿದ ಅಣ್ಣನು!' ಎಂದು ಆನಂದೋದ್ಗಾರ ತೆಗೆದಳು.

'ನಿಮ್ಮಂತಹ ಸದ್ಗುಣಿಗಳಿಗೆ ಯಥಾಶಕ್ತಿಯಾಗಿ ನೆರವಾಗದಿದ್ದರೆ ಹೇಗೆ? ನಿರಾಶ್ರಿತರೂ, ಅನಾಥರೂ ಹೀಗೆಯೇ ತೊಳಲಿ-ಬಳಲಿ ಸಾಯಬೇಕೇನು?' ಎಂದು ಶಕುಂತಲೆಯು ನುಡಿದಳು.

'ಚಂಪಾವತಿಯು ನನಗೊಂದು ಹಂಚಿಕೆಯನ್ನು ಹೇಳಿರುತ್ತಾಳೆ. ರಾಧಾದೇವಿಯು ಮನವೊಲಿಸಿದರೆ,ಅವರೂ ಹಾಗು ನಾನೂ ನಿರಪರಾಧಿಗಳಾಗಲಿಕ್ಕೆ ಮಾರ್ಗವಾಗುವದೆಂದು ಅವಳು ಹೇಳಿದಳು. ಮೊದಲು ಅವಳೂ ಅಪರಾಧಿಗಳ ಮಾಲಿಕೆಯಲ್ಲಿ ಸೇರಿದವಳಾಗಿದ್ದಳು; ಆದರೆ ರಾಧಾದೇವಿಯ ಕೈಕಾಲು ಕಟ್ಟಿಕೊಂಡು, ಮೈಮೇಲೆ ಬಂದ ಪ್ರಸಂಗದಿಂದ ಪಾರಾಗಿರುವಳು. ನೀಚ ಸ್ತ್ರೀಯಾದ ರಾಧಾದೇವಿಯ ಮುಖಾವಲೋಕನ ಮಾಡಲಿಕ್ಕೆ ಸಹ ಹೇಸಿಕೆಯೆನಿಸುವದು; ಆದರೆ ಏನು ಮಾಡಲಿ? ಯಾರ ಮೊರೆ ಹೊಕ್ಕಾದರೂ ಪ್ರಾಪ್ತಗಂಡಾಂತರದಿಂದ ಪಾರಾಗಬೇಕೆಂದು ಮನಸ್ಸಾಗಿರುವದು.'

'ಏನೂ ಅಡ್ಡಿಯಿಲ್ಲ. ರಾಧಾದೇವಿಯು ನ್ಯಾಯಾಧೀಶರೆದುರಿಗೆ ನಿಮಗೆ ಅನುಕೂಲವಾಗುವಂತೆ ಜಬಾನಿ ಕೊಟ್ಟರೆ, ನಿಮ್ಮ ಮೇಲಿನ ಅಪರಾಧವು ತೊಡೆದು ಹೋಗುವದೆಂಬುದರಲ್ಲಿ ಸಂದೇಹವಿಲ್ಲ. ಪ್ರಯತ್ನಮಾಡಿ ನೋಡಿರಿ. ಪರಮಾತ್ಮನು ನಿಮ್ಮ ಯತ್ನಕ್ಕೆ ಯಶವನ್ನೀಯಬಹುದು' ಎಂದು ಮಾಧವರಾಯನು ನುಡಿದು,—'ಆ ನೀಚ ಸ್ತ್ರೀಯು ನಿಮ್ಮ ಶೀಲಕ್ಕೆ ದಕ್ಕೆ ಹತ್ತುವ

ಯಾವದೊಂದು ಪ್ರಕಾರವನ್ನು ಮಾಡಬಹುದು. ಈ ವಿಷಯದಲ್ಲಿ ಎಚ್ಚರದಿಂದಿರಬೇಕು.'

'ನನಗೀಗ ವೈತುಂಬ ಕಣ್ಣುಗಳು ಬಂದಿವೆ. ರಾಧಾದೇವಿಯು ಎಂತಹ ಮನುಷ್ಯಳಿರುವಳೆಂಬದು ನನಗೆ ಪೂರಾ ಗೊತ್ತಾಗಿದೆ. ಪತಿಯ ಪ್ರಾಣರಕ್ಷಣೆಯಾಗಬೇಕೆಂದು ಅಂತಹ ಕುಲಾಂಗಾರಳ ಕಾಲು ಹಿಡಿಯುವ ಪ್ರಸಂಗವೊದಗಿದೆ; ಆದರೆ ಶೀಲವನ್ನು ಸೂರೆ ಮಾಡಿ ಜೀವದಾನ ಕೊಡುವ ನೀಚವೃತ್ತಿಯುವಳು ನಾನಲ್ಲ. ಪಾವಿತ್ರ್ಯವು ಪತಿಪ್ರಾಣ-ಸ್ವಪ್ರಾಣಗಳ ಬೆಲೆಗಿಂತ ಹೆಚ್ಚಿನದಿರುವದು.'

'ರಮಾದೇವಿ, ನಿಮ್ಮ ವರ್ತನದ ವಿಷಯವಾಗಿ ನನಗೆ ನೀವು ಭರವಸೆ ಕೊಡುವ ಕಾರಣವಿಲ್ಲ. ಎಂದಿನಿಂದಲೋ ನಾನು ನಿಮ್ಮ ಸ್ವಭಾವ ಪರಿಚಯ ಮಾಡಿಕೊಂಡಿರುವೆನು. ನೀವು ಬೇಗನೆ ರಾಧಾದೇವಿಗೆ ಭೆಟ್ಟಿಯಾಗಿ, ಅವಳಿಗೆ ಚನ್ನಾಗಿ ಬೇಡಿಕೊಂಡು ಕೆಲಸ ಮಾಡಿಕೊಂಡು ಬರ್ರಿ.'

ತನ್ನ ಹಾಗು ಪತಿಯ ಮೇಲಿನ ಗಂಡಾಂತರ ನಿವಾರಣೆಗಾಗಿ ರಾಧಾದೇವಿಯಂತಹ ನೀಚಳಲ್ಲ ದಯಾಯಾಚನೆ ಮಾಡಬೇಕಾದ್ದರಿಂದ, ರಮಾದೇವಿಯು ಬಹುಪರಿಯಾಗಿ ನೊಂದುಕೊಂಡಳು. ಆಗ ಅವಳು ನಿರ್ವಾಹವಿಲ್ಲದೆ ರಾಧಾದೇವಿಯ ಮನೆಗೆ ಹೋದಳು. ಆಗ ರಾಧಾದೇವಿಯು ತನ್ನ ಕೋಣೆಯಲ್ಲಿ ಕುಳಿತಿದ್ದಳು. ಅವಳ ಗಾಯಗಳೆಲ್ಲ ಪೂರ್ಣವಾಸಿಯಾಗಿದ್ದು ಪ್ರಕೃತಿಯೂ ಚನ್ನಾಗಿತ್ತು. ಅವಳು ನಾಲ್ಕು ದಿನಗಳ ಹಿಂದೆ ರುಗ್ಣಾಲಯವನ್ನು ಬಿಟ್ಟು ತನ್ನ ಮನೆಗೆ ಬಂದಿದ್ದಳು. ರಮಾದೇವಿಯು ಬಂದಾಗ ಅವಳು ತನ್ನ ವಾತ್ಸಲ್ಯದ ಮಗುವಾದ ಕರಿಗಾಲಿನ ಗಿರಿವಾಜಿಯನ್ನು ತೊಡೆಯಮೇಲಿ ಮಲಗಿಸಿಕೊಂಡು ಹೊಟ್ಟೆಗೆ ಕೊಡತೊಡಗಿದ್ದಳು. ರಮಾದೇವಿಯು ಬಂದ ಕೂಡಲೆ ಅವಳು ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ—'ಯಾರು?' ಎಂದು ವಿಚಾರಿಸಿದಳು.

'ನಾನು ರಮೆ' ಎಂದು ಅಂಜುತ್ತಂಜುತ್ತ ನುಡಿದು, ರಮಾದೇವಿಯು ನಿಂತಳು.

'ಓಹೋ! ರಮಾದೇವಿಯವರೇನು? ಇದೇನು, ಬಡವರ ಮನೆಗೆ ಭಾಗೀರಥಿ ಬಂದ ಹಾಗಾಯಿತು! ಬನ್ನಿರಿ, ಅಷ್ಟೇಕೆ ಬೆದರಿ ನಿಂತಿರಿ? ನಾನು ನಿಮ್ಮ ಮನೆಯಲ್ಲಿ ಅಪಮಾನಿತಳಾಗಿರುವೆನೆಂದು ನಿಮ್ಮ ಅಪಮಾನ ಮಾಡಲಾರೆನು. ನಿಮ್ಮಂತೆ ನಾನು ಶಿಷ್ಟಾಚಾರ ಶೂನ್ಯಳಲ್ಲ. ನಾಚಬೇಡಿರಿ; ಬೆದರಬೇಡಿರಿ; ಒಳಗೆ ಬನ್ನಿರಿ.'

ರಮಾದೇವಿಯು ರಾಧಾದೇವಿಯ ಬಳಿಗೆ ಹೋಗಿ ಅವಳ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು—'ರಾಧಾದೇವಿಯವರೆ, ನನ್ನಿಂದ ಅನುಚಿತ ಘಟಿಸಿರುವದೆಂದು ನಿಮ್ಮ ಕಲ್ಪನೆಯಾಗಿದ್ದರೆ, ಅದಕ್ಕಾಗಿ ನಾನು ನಿಮ್ಮಲ್ಲಿ ಕ್ಷಮಾಯಾಚನೆ ಮಾಡುವೆನು. ನಿಮ್ಮ ಮಾನಕ್ಕೆ ಭಂಗವುಂಟಾಗುವಂತೆ ನನ್ನಿಂದ ಭಾಷಣವು ಮಾಡಲ್ಪಟ್ಟಿದ್ದರೆ ದೊಡ್ಡ ಮನಸ್ಸಿನಿಂದ ಕ್ಷಮಿಸಿರಿ. ನನ್ನ ಜೀವದ ಜೀವಗಳಾಗಿರುವ ಮಾಂಗಲ್ಯ-ಕುಂಕುಮವನ್ನು ದಯ ಮಾಡಿ ರಕ್ಷಿಸಿರಿ.'

ರಮಾದೇವಿಯು ರೋದಿಸುತ್ತ ನುಡಿದು, ರಾಧಾದೇವಿಯ ಕಾಲು ಗಳನ್ನು ಕಣ್ಣೀರಿನಿಂದ ತೊಳೆದಳು. ರಾಧಾದೇವಿಯು ರಮಾದೇವಿಯನ್ನು ಹಿಡಿದೆತ್ತಿ—'ಏಳಿರಿ, ಇತ್ತ ಕುಳಿತುಕೊಳ್ಳಿರಿ. ನೀವು ಅಂಜುವ ಕಾರಣವಿಲ್ಲ. ನಿಮ್ಮನ್ನು ಕಾಯುವದು ನನ್ನ ಕೈಯಲ್ಲಿದ್ದರೆ ಅದಕ್ಕೆ ನಾನು ಹಿಂದೆ ಮುಂದೆ ನೋಡುವದಿಲ್ಲ. ರಮಾದೇವಿ, ಸುರೇಂದ್ರರಾಯರ ಕೃತಿಯು ಮಾತ್ರ ಬಹಳೇ ನೀಚತನದ್ದಿರುವದು. ಮನುಷ್ಯರಲ್ಲಿ ಇಂತಹ ಆಸುರೀ ವೃತ್ತಿಯು ಇರಬಾರದು.'

'ರಾಧಾದೇವಿ, ಅವರ ಕೈಯಿಂದ ಅತ್ಯಾಚಾರ ಘಟಿಸಿಲ್ಲ. ವಿಷಪೂರಿತ ವಾದ ಹಾವು-ಚೇಳುಗಳನ್ನು ಸಹ ಅವರು ಹೊಡೆಯುವದಿಲ್ಲ. ತಗಣಿ ಮೊದ ಲಾದ ಕ್ಷುದ್ರ ಕೀಟಕಗಳನ್ನು ಅವರು ಕೊಲ್ಲುತ್ತಿರುವದಿಲ್ಲ. ಇಂತಹ ದಯಾ-ಳುಗಳಿಂದ ಮನುಷ್ಯ ವಧೆಯಂತಹ ರಾಕ್ಷಸೀ ಕೃತ್ಯವು ಘಟಿಸಿರಬಹುದೆಂದು ಸಂದೇಹಗೊಳ್ಳುವದು ಯಥಾಯೋಗ್ಯವಾಗಿ ಕಾಣುವದೇ ಹೇಗೆ?'

'ರಮಾದೇವಿ, ನೀವು ಇಲ್ಲಿ ತಪ್ಪುತ್ತಿರುವಿರಿ. ಅಪರಾಧದ ಬಗ್ಗೆ ಅಸ ಮ್ಮತಿಯನ್ನು ವ್ಯಕ್ತಮಾಡುವದು ಒಳಿತಲ್ಲ. ತಪ್ಪಿಗೆ ಒಪ್ಪಿದರೆ ದಯೆಯು ಹುಟ್ಟುವದು. ನೀವು ನಿಮ್ಮ ಮಾತನ್ನೇ ನಿಜವೆಂದು ಸಾಧಿಸುತ್ತಿರುವಿರಿ.'

'ರಾಧಾದೇವಿ, ನಾನು ನನ್ನ ಮಾತನ್ನೇ ನಿಜವೆಂದು ಸಾಧಿಸಲಿಕ್ಕೆ ಬಂದಿಲ್ಲ. ಅವರಿಂದ ಅಪರಾಧವು ಘಟಿಸಿದ್ದರೂ ಅದನ್ನು ಕ್ಷಮಿಸಿ, ಸೌಭಾಗ್ಯ ದಾನಮಾಡಬೇಕು. ನನ್ನನ್ನು ನಿಮ್ಮ ಒಡಹುಟ್ಟಿದವಳೆಂದು ಭಾವಿಸಿರಿ. ನಮ್ಮ ವರ ಜೀವವು ನಿಮ್ಮ ಹಿಡಿಕೆಯಲ್ಲಿದೆ.'

'ರಮಾದೇವಿ, ನಿಮ್ಮ ದೀನವಾಣಿಯನ್ನು ಕೇಳಿ ನನ್ನ ಮನಸ್ಸು ಕರ ಗುತ್ತದೆ. ನಾನು ನಿಮ್ಮ ಪತಿಯ ರಕ್ಷಣೆಗಾಗಿ ಯಥಾಶಕ್ತಿ ಪ್ರಯತ್ನ ಮಾಡು ವೆನು. ನೀವು ರಾವಸಾಹೇಬರಿಗೆ ವಿನಂತಿ ಮಾಡಿಕೊಂಡಿರೆಂದರೆ, ನಿಜವಾದ ಪ್ರಯೋಜನವು. ಯಾಕಂದರೆ, ಅವರ ವರ್ಚಸ್ಸು ಚನ್ನಾಗಿದೆ.'

'ನಾನು ರಾವಸಾಹೇಬರ ಕಡೆಗೆ ಹೋಗಬೇಕೆ?'

'ಅವಶ್ಯವಾಗಿ ಹೋಗಿರಿ. ಅವರು ವಯೋವೃದ್ಧರು. ನಿಮ್ಮಂತಹ ದೀನ ರನ್ನು ಕಂಡರೆ, ಅವರ ಹೃದಯವು ಮೇಣಬತ್ತಿಯಂತೆ ಕರಗುವದು. ನೀವು ಅವರ ನಿಜವಾದ ಹೃದಯವನ್ನು ಚನ್ನಾಗಿ ಒರೆಹಚ್ಚಿಲ್ಲವಾದ್ದರಿಂದ, ಅವರ ವಿಷಯವಾಗಿ ತಪ್ಪುತಿಳುವಳಿಕೆಯುಳ್ಳವರಾಗಿರುವಿರಿ. ನೀವು ಅಂಜದೆ ಅವರ ಕಾಲು ಹಿಡಿಯಿರಿ; ಅಂದರೆ ನಿಮ್ಮ ಕಾರ್ಯವಾಗುವದು.'

'ರಾವಸಾಹೇಬರು ಈಗ ಎಲ್ಲಿರುವರೊ?'

'ನೀವು ಬರುವದಕ್ಕಿಂತ ಮುಂಚೆ ಇಲ್ಲಿಯೇ ಇದ್ದರು. ಈಗ ಬಹಳ ಮಾಡಿ ನಮ್ಮ ವಿಲಾಸಮಂದಿರದಲ್ಲಿರಬಹುದು.' ಎಂದು ರಾಧಾದೇವಿಯು ನುಡಿದು—'ಅಡವಿ!' ಎಂದು ಪತಿಯನ್ನು ಕೂಗಿದಳು.

'ಜೀ, ಹುಜೂರ!' ಎಂದು ಅಡವೀರಾಯನು ಅಲ್ಲಿಗೆ ಬಂದನು.

'ಈ ರಮಾದೇವಿಯವರನ್ನು ರಾವಸಾಹೇಬಗೆ ಭೆಟ್ಟಿ ಮಾಡಿಸು. ರಾವಸಾಹೇಬರ ಸವಾರಿಯು ಎಲ್ಲಿರುವದೆಂಬದು ನಿನಗೆ ಗೊತ್ತಿರುವದೇನು?'

'ಇಲ್ಲ, ಸ್ಕೂಲ ಮಿಸ್ಟ್ರೆಸ್ ಸಾಹೇಬರೆ! ಅವರು ಎಲ್ಲಿರುವರೆಂಬುದನ್ನು ತಿಳಿಸಿರಿ; ಅಂದರೆ ಇವರನ್ನು ಕರೆಕೊಂಡು ಹೋಗುವೆನು.'

'ವಿಲಾಸಮಂದಿರದಲ್ಲಿರಬಹುದು. ಒಂದುವೇಳೆ ಅಲ್ಲಿರದಿದ್ದರೆ, ಅವ ರನ್ನು ಹುಡುಕಿ ಕರೆದುಕೊಂಡು ಬಾ.'

'ಮಹದಾಜ್ಞೆ' ಎಂದು ನುಡಿದು, ಅಡವೀರಾಯನು ಹೊರಡುತ್ತ ಲಿದ್ದನು. ಆಗ ರಾಧಾದೇವಿಯು—'ಅಡವಿ' ಎಂದು ಮತ್ತೆ ಕೂಗಿದಳು.

'ಯಾಕೆ ದೇವಿಯವರೆ?'

'ನೀನು ಯಾರ ಸಂಗಡಲೋ ಮಾತಾಡಿದಂತಾಗುತ್ತಿತ್ತಲ್ಲ?'

'ಕೇದಗೀಹಳ್ಳಿಯ ಶಿಕ್ಷಕರಾದ ದಿವಾಕರರಾಯರ ಮಗಳು ಉಷಾ ದೇವಿ ಬಂದಿದ್ದಳು.' 'ಏತಕ್ಕೆ?'

'ರಾವಸಾಹೇಬರು ಅವಳ ಮೇಲೆ ಸಿಟ್ಟಾಗಿ ನೌಕರಿಯಿಂದ ತಳ್ಳಿರುವ ರಂತೆ. ಹೇಗಾದರೂ ಮಾಡಿ ನೌಕರಿ ದೊರೆಯುವಂತೆ ಮಾಡಬೇಕೆಂದು ಹೇಳಿಕೊಳ್ಳಲಿಕ್ಕೆ ಬಂದಿದ್ದಳು.'

'ನಿನಗೆ ಹೇಳಿಕೊಂಡರೇನಾಗುವದು? ನನಗಾಗಲಿ, ರಾವಸಾಹೇಬರಿ ಗಾಗಲಿ ಭೆಟ್ಟಿಯಾಗಬೇಕೆಂದು ಅವಳಿಗೆ ತಿಳಿಸು.'

'ಅವಳು ಮನೆಗೆ ಹೋದಳು.'

ಇನ್ನೊಮ್ಮೆ ಭೆಟ್ಟಿಯಾದಾಗ ಮರೆಯದೆ ಈ ಮಾತು ಹೇಳು.'

'ಒಳ್ಳೇದು' ಎಂದು ಅಡವೀರಾಯನು ಪತ್ನಿಗೆ ಹೇಳಿ, ರಮಾದೇವಿ ಯನ್ನು ಕರೆಕೊಂಡು ವಿಲಾಸಮಂದಿರಕ್ಕೆ ಹೋದನು.

ರಾವಸಾಹೇಬ ಕೃಷ್ಣರಾಯರು ರಾಧಾದೇವಿಯ ವಿಲಾಸಮಂದಿರದಲ್ಲಿ ವಿಲಾಸೀ ರಮಣಿ,' ಎಂಬ ಕಥೆಯನ್ನು ಓದುತ್ತ ಕುಳಿತಿದ್ದರು. ರಮಾ ದೇವಿಯು ಅಲ್ಲಿಗೆ ಬಂದದ್ದನ್ನು ನೋಡಿ ಅವರು ವಿಸ್ಮಯಗೊಂಡು—'ರಮಾ ದೇವಿ, ಬನ್ನಿರಿ' ಎಂದು ನುಡಿದು-'ಇದೇನು ಅಕಲ್ಪಿತ ಆಗಮನವಾಯಿತು?'

ರಮಾದೇವಿಯು ಕೈ ಜೋಡಿಸಿ—'ರಾವಸಾಹೇಬರೆ, ನಾನು ನಿಮ್ಮ ಭೆಟ್ಟಿಗಾಗಿಯೆ ಬಂದೆನು. ನೀವು ಈ ನಿರಾಶ್ರಿತ ಅಬಲೆಗೆ ಸಹಾಯ ಮಾಡ ಬೇಕು.'

'ನಿಮ್ಮಂತಹರಿಗೆ ನನ್ನಂತಹ ಯಃಕಶ್ಚಿತನ ಭೆಟ್ಟಿಯ ಪ್ರಯೋಜನ ವೇನು?

'ಅವರು ಕಾರಾಗೃಹದಲ್ಲಿರುವರು. ನಿರಪರಾಧಿಗಳಾದ ಅವರ ಬಂಧ ವಿಮೋಚನೆ ಮಾಡಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ಅವರ ಪ್ರಾಣವನ್ನು ಉಳಿಸುವದೂ, ಬಿಡುವದೂ ನಿಮ್ಮ ಕೈಯಲ್ಲಿದೆ.'

'ಸುರೇಂದ್ರರಾಯರ ಮುಕ್ತತೆಗಾಗಿ ಸಾಧ್ಯವಿದ್ದಮಟ್ಟಿಗೆ ಸಾಹಸ ಮಾಡಲಿಕ್ಕೆ ನಾನೇನೂ ಹಿಂಜರಿಯುವದಿಲ್ಲ; ಆದರೆ ಪ್ರಕರಣವು ದೊಡ್ಡ ದಿರುವದರಿಂದ, ನನ್ನ ವಶೀಲೆಯು ಸಾಕಷ್ಟು ನಡೆಯಲಾರದು. ಪೋಲೀ ಸರ ಕಾರಸ್ಥಾನಕ್ಕೆ ಅಳತೆಯಿಲ್ಲದಾಗಿದೆ. ಅವರು ಸುರೇಂದ್ರರಾಯನ ಪ್ರಾಣ ಗಳನ್ನು ಹೀರಬೇಕೆಂದೇ ದೃಢನಿಶ್ಚಯ ಮಾಡಿಕೊಂಡಂತೆ ತೋರುವದು. ನನ್ನ ಪುಣ್ಯವನ್ನು ವೆಚ್ಚಮಾಡಿ ಚಂಪಾವತಿಯನ್ನು ಬಿಡಿಸಿಕೊಳ್ಳಬೇಕಾ ದರೆ ಸಾಕು-ಸಾಕಾಗಿ ಹೋಯಿತು. ಸುರೇಂದ್ರರಾಯನ ಮುಕ್ತತೆಗಾಗಿಯೂ ಶಕ್ತಿಮೀರಿ ಹೆಣಗಬೇಕೆಂದೇ ಸಂಕಲ್ಪ ಮಾಡಿಕೊಂಡಿದ್ದೇನೆ.

'ಹಾಗೆ ಮಾಡಿದರೆ ನಾವು ನಿಮಗೆ ಅತ್ಯಂತ ಋಣಿಯಾಗುವೆವು. ಅವರಂತು ನಿಮ್ಮ ಉಪಕಾರವನ್ನು ಸಾಯುವ ವರೆಗೂ ಸ್ಮರಿಸುವರು. ಅವರ ಬಿಡುಗಡೆ ಮಾಡಿಸುವ ಬಗ್ಗೆ ಅಭಯಕೊಡಿರಿ.'

'ರಮಾದೇವಿ, ನಾನು ಒಮ್ಮೆಲೆ ಅಭಯವನ್ನು ಹೇಗೆ ಕೊಡಲಿ? ನನ್ನ ಕೈಯೊಳಗಿನ ಕೆಲಸವಲ್ಲ. ಪೋಲೀಸರು ಸುರೇಂದ್ರರಾಯನ ತಪ್ಪು ಸಿದ್ಧಿ ಮಾಡುವಂತಹ ಸಾಕ್ಷಿಗಳನ್ನು ಈಗಲೆ ಸಿದ್ಧಪಡಿಸಿರುವರು. ಅಂದಮೇಲೆ ಅಭಯ ಕೊಡಲಿಕ್ಕೆ ಹೇಗೆ ಧೈರ್ಯ ಸಾಲಬೇಕು?'

'ಹೀಗಿದ್ದ ಮೇಲೆ ಅವರ ಆಯುಷ್ಯವು ಮುಗಿಯಲತ್ತ ಬಂದಿರುವ

ವೆಂದೇ ತಿಳಿದುಕೊಳ್ಳಬೇಕಾಯಿತು.' ರಮಾದೇವಿಯು ಆಕ್ರಂದನ ಮಾಡುತ್ತ ನುಡಿದಳು.

'ಇನ್ನೂ ಅಷ್ಟೊಂದು ನಿರಾಶೆ ಹೊಂದುವಂತಿಲ್ಲ. ಸುರೇಂದ್ರರಾಯನ ಬಿಡುಗಡೆಯಾಗಬೇಕಾದರೆ ಬಹಳೇ ಸಾಹಸ ಮಾಡಬೇಕಾಗುವದು. ಅಂತಹ ಸಾಹಸಿಗಳು ನಿಮಗೆ ಯಾರು ದೊರೆಯಬೇಕು? ವಕೀಲ ಗೋವರ್ಧನರಾಯರ ಬೆನ್ನ ಬಿದ್ದಿದ್ದಿರಿ. ಅವರು ಸುರೇಂದ್ರರಾಯರನ್ನು ಉಳಿಸಿಕೊಳ್ಳುವಂತಿಲ್ಲವೇನು?'

'ಅವರ ಹೆಸರೆತ್ತಬೇಡಿರಿ. ನಾನು ನಿಮ್ಮ ಬೆನ್ನ ಬಿದ್ದಿದ್ದೇನೆ. ದಯಮಾಡಿ ಅನುಗ್ರಹಿಸಿರಿ. ನೀವು ಮಾಡಿದ ಉಪಕಾರವು ಎಂದೂ ವ್ಯರ್ಥ ಹೋಗಲಾರದು. ದೀನರ ಮೇಲೆ ಉಪಕಾರ ಮಾಡಿದ್ದಕ್ಕೆ ಪರಮಾತ್ಮನು ನಿಮ್ಮ ಮೇಲೆ ದಯಮಾಡುವನು.'

'ಪರಮಾತ್ಮನ ದಯೆ-ಅನುಗ್ರಹಗಳಿಂದ ಆಗತಕ್ಕದ್ದೇನು? ನಾನು ನಿಮ್ಮ ಪತಿಯನ್ನು ಪಾರು ಮಾಡುವೆನು. ನೀವು ನನ್ನ ಉಪಕಾರವನ್ನು ಯಾವ ವಿಧದಿಂದ ತೀರಿಸುವಿರಿ?'

'ರಾವಸಾಹೇಬರೆ!' ರಮಾದೇವಿಯು ಕೃತಜ್ಞತಾವಾಣಿಯಿಂದ— ನಾನು ನಿಮ್ಮ ಮನೆಯಲ್ಲಿ ನೀರು ಹೊರುವೆನು, ಅಡಿಗೆ ಮಾಡುವೆನು; ಪಾತ್ರೆಗಳನ್ನು ತಿಕ್ಕುವೆನು. ನಿಮ್ಮ ದಾಸಾನುದಾಸಿಯಾಗಿ ಹೇಳಿದ ಕೆಲಸ-ಬೊಗಸೆಗಳನ್ನು ನೆರವೇರಿಸುವೆನು. ಮತ್ತೇನು?'

'ನಾನು ಹೇಳಿದಂತೆ ನಡೆಯುವಿರಾ?' ಕೃಷ್ಣರಾಯರು ರಮಾದೇವಿಯ ಮುಖಕಮಲದಲ್ಲಿ ತಮ್ಮ ಎರಡೂ ಕಣ್ಣುಗಳನ್ನಿಟ್ಟು—'ಚನ್ನಾಗಿ ವಿಚಾರ ಮಾಡಿ ಹೇಳಿರಿ. ಆಡಿದಂತೆ ನಡೆಯುವದು ಕಠಿಣವಾದೀತು.'

'ರಾವಸಾಹೇಬರೆ, ಆಡುವದೇ ಕಠಿಣ; ನಡೆಯುವದು ಬಲು ಸುಲಭ.'

'ನೀವು ಅಂತಹ ಸ್ವಭಾವದವರಾಗಿದ್ದರೂ, ಕೆಲವು ವಿಷಯಗಳಲ್ಲಿ ಆಡಿದಂತೆ ನಡೆಯದಂತಹ ವೃತ್ತಿಯೂ ನಿಮ್ಮಲ್ಲಿರಬಹುದೆಂದು ನನಗೆ ಸಂದೇಹ; ಆದರೆ ಸದ್ಯದ ಪ್ರಸಂಗವನ್ನು ನೆನೆದು, ನೀವು ನಾನು ಹೇಳಿದಂತೆ ಕೇಳುವಿರೆಂದೂ ನಂಬಿಗೆಯಾಗುತ್ತಲಿದೆ. ರಮಾದೇವಿ, ಈಗ ನಿಮ್ಮ ಹಾಗು ನಿಮ್ಮ ಪತಿಯ ಮೇಲೆ ಎಂತಹ ಗಂಡಾಂತರವೊದಗಿರುವದೆಂಬುದು ನಿಮಗೆ ಚನ್ನಾಗಿ ಗೊತ್ತಾಗಿದೆ. ಸುರೇಂದ್ರರಾಯನು ಕೊಲೆಯ ಪ್ರಯತ್ನ ಮಾಡಿದ ಬಗ್ಗೆ ಅವನಿಗೆ ಮರಣದಂಡನೆಯನ್ನು ವಿಧಿಸುವ ಸಂಭವವುಂಟು. ಆ ಕಾರ್ಯದಲ್ಲಿ ವನನ್ನು ತೊಡಗಿಸಿದ ಬಗ್ಗೆ ನಿಮಗಾದರೂ ಸೆರೆಮನೆಯ ವಾಸವು

ಪ್ಪಿದ್ದಿಲ್ಲ. ಇಂತಹ ಸಂಕಟದಲ್ಲಿ ಸಿಲುಕಿದ ನಿಮ್ಮನ್ನು ಪಾರು ಮಾಡುವದೇನು ಸಣ್ಣ ಕಾರ್ಯವಲ್ಲ.'

'ನಿಮ್ಮ ಮಾತು ಸುಳ್ಳಲ್ಲ.

'ನೀವು ನಿಮ್ಮ ಪತಿಯನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವಿರಲ್ಲವೆ?'

'ನಿಜವು.'

'ಅವನ ಪ್ರಾಣರಕ್ಷಣೆಗಾಗಿ ನೀವು ನಾನು ಹೇಳಿದಂತೆ ನಡೆಯಲೊಪ್ಪಿರುವಿರಿ'

'ನಿಜವು.'

'ಪ್ರಾಣಕ್ಕಿಂತ ಹೆಚ್ಚಿನವನಾದ ಪತಿಯ ರಕ್ಷಣೆಗಾಗಿ ಪ್ರಾಣಕ್ಕಿಂತ ಹೆಚ್ಚಿನ ವಸ್ತುವಿನ ಬಲಿ ಕೊಡಲಿಕ್ಕೆ ಸಹ ನೀವು ಹಿಂದೆ ಮುಂದೆ ನೋಡಲಾರಿರಿ.'

'ನಿಜವು!' ರಮಾದೇವಿಯು ಮಾತಿನ ಓಘದಲ್ಲಿ ಹೆಚ್ಚಾಗಿ ವಿಚಾರಿಸದೆ ಉತ್ತರವಿತ್ತಳು. ಸಂಕಟಗ್ರಸ್ತಳಾದ ಅವಳಿಗೆ ಕೃಷ್ಣರಾಯರ ಗುರಿಯು ಗೊತ್ತಾಗಲಿಲ್ಲ

'ನಿಮಗೆ ಪ್ರಾಣಕ್ಕಿಂತ ಹೆಚ್ಚಿನ ವಸ್ತುವಾವುದು?'

'ಪತಿವ್ರತೆಯರಿಗೆ ಪಾವಿತ್ರ್ಯವೂ ಪತಿಯೂ ಪ್ರಾಣಕ್ಕಿಂತ ಮಿಗಿಲು.'

'ಪತಿಯ ರಕ್ಷಣೆಗಾಗಿ ಪಾವಿತ್ರ್ಯವನ್ನು ಬಲಿ ಕೊಡುವ ಪ್ರಸಂಗವೊದಗಿದರೆ ನೀವು ಅದಕ್ಕೆ ಹಿಂಜರಿಯಲಾರಿರಿ.'

'ರಾವಸಾಹೇಬರೆ!' ಕೃಷ್ಣರಾಯರ ಹೆಗ್ಗುರಿಯು ರಮಾದೇವಿಯ ಲಕ್ಷ್ಯದಲ್ಲಿ ಬಂದು—'ಪಾತಿವ್ರತ್ಯವು ಪತಿಗಿಂತ ಮಿಗಿಲು ಪತಿಯ ಪ್ರಾಣವು ಇದೇ ಕ್ಷಣದಲ್ಲಿ ನಷ್ಟವಾದರೂ, ನಾನು ನನ್ನ ಪಾತಿವ್ರತ್ಯವನ್ನು ನಷ್ಟಪಡಿಸಿಕೊಳ್ಳಲೊಪ್ಪುವದಿಲ್ಲ!'

'ಭಲಾ! ಪತಿಯ ಪ್ರಾಣವನ್ನು ನಾಶ ಮಾಡುವಂತಹ ನಿಮ್ಮ ಧರ್ಮಭಾವನೆಯು ಶ್ಲಾಘನೀಯವಿರುವದು!' ಎಂದು ತಿರಸ್ಕಾರದಿಂದ ಕೃಷ್ಣರಾಯರು ನುಡಿದರು.

'ಪಾತಿವ್ರತ್ಯ ಧರ್ಮವು ಜಗತ್ತಿನೊಳಗಿನ ಯಾವ ಒಡವೆಗೊಳಸೂ ವಿನಿಮಯವಾಗತಕ್ಕಂಥದಲ್ಲ. ಇಡಿ ಜಗತ್ತಿನ ಬೆಲೆಯು ಈ ಮಹಾಧರ್ಮದ ಪಾಸಂಗಕ್ಕೆ ಸಹ ಹತ್ತಲಾರದು.'

'ಹಾಗಿದ್ದರೆ ನಿಮ್ಮ ಮಹಾಧರ್ಮವನ್ನು ಕಾಯ್ದುಕೊಂಡು ಪತಿಯನ್ನು ಕಳೆದುಕೊಳ್ಳಿರಿ.'

'ರಾವಸಾಹೇಬರೆ, ನೀವು ಪತಿದಾನ ಕೊಡುವ ಸಮಯದಲ್ಲಿ ಪಾತಿವ್ರತ್ಯ ದಾನಬೇಡುವದು ಶೀಲವಲ್ಲ. ದೀನಳಾದ ಈ ಅಬಲೆಯ ಮೊರೆ ಕೇಳಿ ಧರ್ಮ ಕಟ್ಟಿಕೊಳ್ಳಿರಿ.'

'ಶುಷ್ಕಧರ್ಮದ ಆಡಂಬರವು ನಿಮ್ಮಂತಹರಿಗೆ ಶೋಭಿಸುವದು. ಪಾತಿವ್ರತ್ಯದ ಜಂಭ ಬಡಿಯುವವರಾದ ನಿಮಗೆ ಪತಿಗಾಗಿ ಸ್ವಾರ್ಥತ್ಯಾಗ ಮಾಡುವದು ಗೊತ್ತಿಲ್ಲದ ಮೇಲೆ, ನಿಮ್ಮ ಶೀಲದ ಬೆಲೆಯು ಅಷ್ಟರಲ್ಲಿಯೇ ಇದೆ. ಪತಿಯನ್ನುಳಿಸಿಕೊಳ್ಳುವದು ಪತಿವ್ರತೆಯರ ಶೀಲವಲ್ಲವೆ? ಪತಿಹೀನೆಯಾದ ಸತಿಯು ಇದ್ದರೂ ಸತ್ತಂತೆಯೇ ಸರಿ. ಹೀಗಿದ್ದ ಮೇಲೆ ಪತಿಯ ಪ್ರಾಣಕ್ಕಾಗಿ ಬೇಕಾದಂತಹ ಕೆಲಸ ಮಾಡಲಿಕ್ಕೆ ಅಡ್ಡಿಯೇನು? ನನ್ನ ಮತದ ಮೇರೆಗೆ ಇದೂ ಒಂದು ವಿಧದ ಪಾತಿವ್ರತ್ಯದ ಲಕ್ಷಣವೇ ಎಂದು ಹೇಳಬಹುದು.'

'ಪಾತಿವ್ರತ್ಯದ ಅಪಹರಣವೆಂದರೆ, ಪತಿಯ ತಾತ್ವಿಕಮರಣವಲ್ಲವೆ?'

'ನೀವು ಅಪ್ರಬುದ್ಧರು, ವ್ಯವಹಾರ ಶೂನ್ಯರು. ನಿಮ್ಮ ಈ ವೇದಾಂತವು ಅನುಪಯುಕ್ತವು. ನೀವು ಪಾತಿವ್ರತ್ಯ ರಕ್ಷಣೆಯ ಹವ್ಯಾಸಕ್ಕೆ ಬಿದ್ದರೆ ಪತಿಯ ಪ್ರಾಣವು ಉಳಿಯಲಾರದು. ನೀವು ನನ್ನ ಇಚ್ಛೆಯನ್ನು ಪೂರೈಸಿದರೆ ಮಾತ್ರ ಪತಿಯ ಪ್ರಾಣರಕ್ಷಣೆಯಾಗುವದು.'

'ರಾವಸಾಹೇಬರೇ, ನಾನು ನಿಮ್ಮ ಮಗಳಾದ ಚಂದ್ರಲೇಖೆಗೆ ಸಮಾನಳಾಗಿರುವೆನು. ನನ್ನ ಮೇಲೆ ಪಾಪದೃಷ್ಟಿಯನ್ನು ಕೆಡಹಬೇಡಿರಿ. ಪತಿವ್ರತೆಯ ಪಾತಿವ್ರತ್ಯದ ವಿಟಂಬನೆ ಮಾಡಬೇಡಿರಿ. ನಿಮ್ಮ ಕಾಲಿಗೆ ಬೀಳುವೆನ' ಎಂದು ರಮಾದೇವಿಯು ಅಳುತ್ತ ನುಡಿದು, ಕೃಷ್ಣರಾಯರ ಪಾದಗಳ ಮೇಲೆ ಮಸ್ತಕವಿರಿಸಿ, ಅವುಗಳನ್ನು ಕಣ್ಣೀರಿನಿಂದ ತೊಳೆದಳು.

ಕೃಷ್ಣರಾಯರು ಅವಳನ್ನು ಹಿಡಿದೆತ್ತಿ, ಅವಳ ಎರಡೂ ಕೈಗಳನ್ನು ಹಿಡಿದು—'ರಮೆ, ನಿನ್ನ ಪಾತಿವ್ರತ್ಯಧರ್ಮವು ಅಖಂಡವಾಗಿರಲೊಲ್ಲದೇಕೆ. ನನ್ನ ಒಂದೇ ಒಂದು ಸಾಧಾರಣವಾದ ಇಚ್ಛೆಯನ್ನು ಪೂರ್ಣ ಮಾಡು. ಒಮ್ಮೆ ಆಲಿಂಗನ! ಎರಡೇ ಚುಂಬನ! ಮತ್ತೇನೂ ಬೇಡ!'

'ರಾವಸಾಹೇಬರೆ, ಇಳಿಕೆಯ ವಯಸ್ಸಿನಲ್ಲಿ ಈ ವಿಧದ ದುರ್ಬುದ್ಧಿಯು ನಿಮ್ಮಲ್ಲಿ ಏಕೆ ಹುಟ್ಟಿತು? ಕೈ ಬಿಡಿರಿ!'

'ಒಮ್ಮೆಯಾದರೂ ಆಲಿಂಗಿಸದೆ, ಒಮ್ಮೆಯಾದರೂ ಚುಂಬಿಸದೆ ಕೈಗೆ ಸಿಕ್ಕವಳನ್ನು ಹಾಗೆಯೆ ಬಿಡುವ ಬಗೆ ಹೇಗೆ?' ಎಂದು ನುಡಿದು, ಕೃಷ್ಣರಾಯರು ರಮಾದೇವಿಯನ್ನು ಅಪ್ಪಿಕೊಳ್ಳಲಿಕ್ಕೆ ಕೈ ಮುಂದೆ ಮಾಡಿದರು. ಕೂಡಲೆ

ಅವಳು ರಾವಸಾಹೇಬರನ್ನು ಹಿಂದೆ ದೂಡಿ, ಅವರ ಸೊಂಡೆಯ ಮೇಲೊಮ್ಮೆ ಬಲವಾಗಿ ಗುದ್ದಿದಳು. ಒಡನೆಯೇ ಸೊಂಡೆಯೊಡೆದು, ಅವರು ನೆಲಕ್ಕೆ ಬಿದ್ದರು. ರಮಾದೇವಿಯು ಗಾಬರಿಗೊಂಡು ಅಲ್ಲಿಂದ ಹೊರಬಿದ್ದಳು. ಕೂಡಲೆ ಅಡವೀರಾಯನು ರಭಸದಿಂದ ಅಲ್ಲಿಗೆ ಬಂದು ದೀಪವನ್ನು ನೊಂದಿಸಿ, ಕೃಷ್ಣರಾಯರ ಮೇಲೆ ಶಸ್ತ್ರಪ್ರಹಾರ ಮಾಡಿದನು. 'ಅಯ್ಯೋ! ಸತ್ತೆನು, ಸತ್ತೆನು!' ಎಂಬ ಆರ್ತಧ್ವನಿಯು ರಾವಸಾಹೇಬರ ಮುಖದಿಂದ ಹೊರಟಿತು. ಈ ಧ್ವನಿಯನ್ನು ಕೇಳಿ ರಾಧಾದೇವಿಯು ಗಾಬರಿಗೊಂಡು ಅಲ್ಲಿಗೆ ಬಂದಳು. ಅಲ್ಲಿ ದೀಪವಿದ್ದಿಲ್ಲ. ಕೂಡಲೆ ಅವಳು ದೀಪವನ್ನು ತಂದಳು. ರಾವಸಾಹೇಬರ ಮೃತ್ಯುಪಥವನ್ನು ಹಿಡಿಯುವ ಚಿಹ್ನವು ತೋರಿದ್ದರಿಂದ, ಅವಳು ಎದೆ ಎದೆ ಒಡಿದುಕೊಂಡು ಅಳತೊಡಗಿದಳು. 'ಪ್ರಾಣನಾಯಕಾ! ಪ್ರಾಣನಾಥಾ! ಕುಂಕುಮದೊಡೆಯಾ! ಹೊರಟು ಹೋದೆಯಾ! ಅಡವಿ ಸುಳ್ಳು, ನೀನೇ ಒಡೆಯನೆಂದು ನಂಬಿದ್ದೆ. ನಂಬಿ ನಚ್ಚಿದ ಅಬಲೆಯನ್ನು ನಡುನೀರಲ್ಲಿ ಬಿಟ್ಟು ಹೋದೆಯಾ! ಮುಂದೇನು ಗತಿ!' ಎಂದು ಅವಳು ಹಾಡಿ ಹಾಡಿಕೊಂಡು ಭೋರಾಡಿ ರೋದಿಸಹತ್ತಿದಳು. ಈ ರೋದನದಿಂದ ಅಡವೀರಾಯನ ತಲೆಯು ತಿರುಗಿತು. ಕೂಡಲೆ ಅವನು ಅದೇ ಶಸ್ತ್ರದಿಂದ ರಾಧಾದೇವಿಯ ಕೊಲೆ ಮಾಡಿ ಬಿಡಬೇಕೆಂದು ಯೋಚಿಸಿದನು; ಆದರೆ ಹಾಗೆ ಮಾಡಲಿಕ್ಕೆ ಅವನ ಧೈರ್ಯ ಸಾಲದಾಯಿತು ಎದುರಿಗೆ ರಕ್ತಮಯವಾದ ರಾವಸಾಹೇಬರನ್ನು ನೋಡಿ, ಅವನ ಕೈಕಾಲೇ ಹೋಗಿದ್ದವು. ಅವನು ಆ ಕೋಣೆಯಲ್ಲಿ ಬಂದು- 'ಹಾ! ಏನು? ರಾವಸಾಹೇಬರ ಕೊಲೆಯನ್ನು ಮಾಡಿದವರಾರು? ಕೊಲೆಗಡಕರೆಲ್ಲಿ?' ಎಂದು ನುಡಿಯುತ್ತ ರಾವಸಾಹೇಬರ ಶವವನ್ನು ನಿರೀಕ್ಷಿಸತೊಡಗಿದನು

'ಅಡವೀ. ಆ ನೀಚ ರಮೆಯು ರಾವಸಾಹೇಬರ ಕೊಲೆ ಮಾಡಿ ಹೊರಗೆ ಹೇಗೆ ಕುಳಿತಿರುವಳು ನೋಡು! ಪೋಲೀಸರಿಗೆ ಹೇಳಿ ಅವಳನ್ನು ಸೆರೆಮನೆಗೆ ಕಳುಹಿಸು. ಆ ಮುಂಡೆಯು ತನ್ನ ಚಂಡು ತುಂಡುಮಾಡಿಸಿಕೊಳ್ಳಬೇಕೆಂದು ರಾವಸಾಹೇಬರ ಮುಂಡವನ್ನು ಖಂಡಿಸಿದಳು!"

'ರಾವಸಾಹೇಬರೆ!' ಎಂದು ಅಡವಿಯು ಕೂಗಿದನು.

'ಅಯ್ಯೋ!' ಎಂದು ರಾವಸಾಹೇಬರು ಚೀರಿದರು.

'ಹಾ! ಇನ್ನೂ ಹೋಗಿಲ್ಲ,' ಎಂದು ಅಡವಿಯು ನುಡಿದು—'ನಿಮ್ಮ ಮೇಲೆ ಶಸ್ತ್ರಪ್ರಹಾರ ಮಾಡಿದವರಾರು?'

'ರ....ಮೆ....' ಎಂದು ರಾವಸಾಹೇಬರು ನುಡಿದು ಸ್ತಬ್ಧರಾದರು.

‘ಅಡವ್ಯಿ, ನಾನು ಹೇಳಿದಂತಾಯಿತೆ? ಹೋಗು, ಪೋಲೀಸರನ್ನು ತಂದು ಆ ಗೈಯಾಳಿಯನ್ನು ಸೆರೆಮನೆಗೆ ಕಳಿಸು’ ಎಂದು ಅಳುತ್ತ ಅಳುತ್ತ ರಾಧಾದೇವಿಯು ನುಡಿದು—‘ರಾವಸಾಹೇಬರೆ!’ ಎಂದಳು.

ಉತ್ತರ ಬರಲಿಲ್ಲ.

‘ಅಯ್ಯೋ! ಹೊರಟೇ ಹೋದರು!’ ಎಂದು ರಾಧಾದೇವಿಯು ಎದೆ ಎದೆ ಬಡಕೊಳ್ಳತೊಡಗಿದಳು.

ಅಷ್ಟರಲ್ಲಿ ಹೊರಗೆ ನಿಂತಿದ್ದ ಉಷೆಯು ಬಂದು—‘ರಾಧಾದೇವಿ, ಸತ್ತವರಿಗಾಗಿ ಅತ್ತು ಫಲವೇನು? ನಿಮ್ಮಂಥವರಿಗೆ ಕಾಮಧೇನುಗಳಾಗಿದ್ದ ರಾವಸಾಹೇಬರ ಅಂತವು ನಿಮ್ಮೆಲ್ಲರಿಗೆ ದುಃಖದಾಯಕವೆಂಬದರಲ್ಲಿ ಸಂದೇಹವಿಲ್ಲ; ಆದರೂ ಮನಸ್ಸು ಬಿಗಿ ಹಿಡಿಯಿರಿ; ದುಃಖವನ್ನು ನುಂಗಿಕೊಳ್ಳಿರಿ.’

ಅಡವಿರಾಯನು ರಾಧಾದೇವಿಯ ಒತ್ತಾಯದಿಂದ ಪೋಲೀಸರನ್ನು ಕರೆತಂದನು. ಕೊತವಾಲನು ಕೃಷ್ಣರಾಯರ ಬಳಿಗೆ ಹೋಗಿ ‘ರಾವಸಾಹೇಬ’ ಎಂದು ಕೂಗಿದನು.

‘ರಮೆ! ರಮೆಯು ನನ್ನನ್ನು ಹೊಡೆದಳು!’ ಎಂದು ಕೃಷ್ಣರಾಯರು ಕಷ್ಟದಿಂದ ನುಡಿದರು.

‘ಬಹಳ ವೇದನೆಯಾಗುತ್ತಿರುವದೇನು?’ ಕೊತವಾಲನು ಕೇಳಿದನು.

ಉತ್ತರ ಹೊರಡಲಿಲ್ಲ.

‘ರಾವಸಾಹೇಬ!’

ಮತ್ತೆಯೂ ಉತ್ತರ ಬರಲಿಲ್ಲ.

ರಾವಸಾಹೇಬರು ಹೊರಟು ಹೋದರೆಂದು ಕೊತವಾಲನು ನುಡಿದನು. ರಾಧಾದೇವಿಯು ಶೋಕಸಾಗರದಲ್ಲಿ ಮುಳುಗಿದಳು. ಅವಳು ಅಳುವದನ್ನು ನೋಡಿದರೆ ಕಲ್ಲು ಸಹ ಕರಗುವಂತಿತ್ತು. ಪಾಪ! ಏನು ಮಾಡಿಯಾಳು?

ಪಂಚನಾಮೆಯ ವಿಧಿಯಾಯಿತು. ರಾವಸಾಹೇಬರ ದೇಹವು ದವಾಖಾನೆಯ ದುಗ್ಣಾಲಯಕ್ಕೂ, ರಮಾದೇವಿಯ ದೇಹವು ಕಾರಾಗೃಹಕ್ಕೂ ಕಳಿಸಲ್ಪಟ್ಟವು.

ರಾಧಾದೇವಿಯಾದರೂ ದುಗ್ಣಾಲಯದ ದಾರೀ ಹಿಡಿಯತಕ್ಕವಳೇ; ಆದರೆ ಅವಳು ಉಷೆಯ ಶೈತ್ಯೋಪಚಾರದಿಂದ ಬೇಗನೆ ಮೂರ್ಛೆ ತಿಳಿದಳು.

ಅಡವೀರಾಯನು ಮಾತ್ರ ಕೃತಕೃತ್ಯನಾದವನಂತೆ ತನ್ನ ಕೋಣೆಯಲ್ಲಿ ಹೋಗಿ ನಿಶ್ಚಿಂತೆಯಿಂದ ಪವಡಿಸಿದನು!





ಇಂಥಿಂಥ ಜನರಿಗೆ ಇದೇ ವಿಧದ ಸಾವೆಂಬುದನ್ನು ವಿಧಾತನು ನಿಯಮಿಸಿರುವನೆಂದೋ ಅಥವಾ ಅವರವರ ಕರ್ಮವು ನಿಯಮಿಸಿರುವದೆಂದೋ ರಾಧಾದೇವಿಯು ಕೊಲೆಯ ಪ್ರಯತ್ನದಲ್ಲಿ ಜೀವದಿಂದುಳಿದಂತೆ, ರಾವ ಸಾಹೇಬರ ಸವಾರಿಯಾದರೂ ಅಂದಿನ ಅಪಮೃತ್ಯುವನ್ನು ಗೆದ್ದಿತು. ಅವರು ಸರಕಾರೀ ರುಗ್ಣಾಲಯವನ್ನು ಸೇರುವಾಗಲೆ ರಮಾದೇವಿಯನ್ನು ಕಾರಾಗೃಹಕ್ಕೆ ಕಳಿಸಿಬಿಟ್ಟಿದ್ದರು, ಅವರಿಗೆ ಗಾಯಗಳು ಅಷ್ಟೊಂದು ಪ್ರಬಲವಾದವುಗಳಲ್ಲದಿದ್ದರೂ ಮರ್ಮಸ್ಥಾನಕ್ಕೆ ಸಂಬಂಧಿಸಿದವುಗಳಿದ್ದುದರಿಂದ. ಒಂದೆರಡು ದಿನಗಳ ವರೆಗೆ ಮಾತ್ರ ಅವರ ಜೀವನಕ್ಕೆ ಸ್ಥೈರ್ಯ ತೋರುತ್ತಿರಲಿಲ್ಲ. ಮುಂದೆ ಅವರು ಬದುಕುವರೆಂಬುದರಲ್ಲಿ ಡಾಕ್ಟರರಿಗೆ ಯಾವ ಬಗೆಯ ಸಂದೇಹವೂ ತೋರಲಿಲ್ಲ. ಇನ್ನು ಮೇಲೆ ತಲೆಯ ಮೇಲೆ ಕಲ್ಲು ಹಾಕಿದರೂ ಸಾಯುವದಿಲ್ಲವೆಂದು ಅವರು ಸಾಹೇಬರಿಗೆ ಧೈರ್ಯ ಹೇಳಿದ್ದಲ್ಲದೆ, ಜೀವಕ್ಕೆ ಅಪಾಯವಿಲ್ಲೆಂದು ದರಬಾರಿಗೆ ಅಭಿಪ್ರಾಯವಿತ್ತರು.

ರಮಾದೇವಿಯು ಮತ್ತೆ ಸೆರೆಮನೆಯನ್ನು ಸೇರಿದಳು; ಆದರೆ ಈಗ ಮಾತ್ರ ಅವಳು ಮೊದಲಿನಂತೆ ದುಃಖಿ-ಕಷ್ಟಿಯಾಗಿರಲಿಲ್ಲ; ಶಾಂತ ಮನಸ್ಕಳಿದ್ದಂತೆ ತೋರತೊಡಗಿದ್ದಳು. ಅವಳಿಗೆ ಈಗ ತನ್ನ ಮಗುವಾದ ವಸಂತನ ಪರಿವೆ ಸಹ ಇದ್ದಿಲ್ಲ. ಆ ಮಗುವನ್ನು ಮಾಧವರಾಯನ ಪತ್ನಿಯಾದ ಶಕುಂತಲೆಯೇ ಪೋಷಿಸತೊಡಗಿದ್ದಳು. ಪೋಲೀಸ ಅಧಿಕಾರಿಗಳು ಕೊಲೆಯ ಬಗ್ಗೆ ವಿಚಾರಣೆ ಮಾಡತೊಡಗಿದರು. 'ಹೌದು, ನಾನೇ ಸಾಹೇಬರ ಕೊಲೆ ಮಾಡಿದೆನು. ಅವರು ನನ್ನ ಮರ್ಯಾದೆಗೇಡು ಮಾಡಬಂದಿದ್ದರು. ಅದಕ್ಕಾಗಿ ಕೊಂದೆನು. ಅವರು ಸತ್ತರೆ ನನಗೇನು ಕೇಡು? ಮಾನರಕ್ಷಣೆಗಾಗಿ ಮಾಡಿದ ಕೊಲೆಯು ಅಪರಾಧವೆ?" ಎಂದು ಅವಳು ಪೋಲೀಸ ಅಧಿಕಾರಿಗಳೆದುರಿಗೆ ಜಬಾನಿ ಕೊಡುತ್ತಿದ್ದಳು. ಇದೇ ವಾಕ್ಯಗಳನ್ನೇ ಅವಳು ಪ್ರತಿಯೊಬ್ಬ ಪೋಲೀಸ ಅಧಿಕಾರಿಗಳೆದುರಿಗೆ ಆಡುತ್ತಿದ್ದಳು. ಅತ್ತ ಸುರೇಂದ್ರರಾಯನೂ ಕೊಲೆಯ ಅಪರಾಧವನ್ನು ಮೈ ಮೇಲೆ ತೆಗೆದುಕೊಂಡಿದ್ದನು; ಇತ್ತ ರಮಾದೇವಿಯೂ ಅವನ ಅನುಕರಣವನ್ನೇ ಮಾಡಿದಳು. ಹೀಗಾಗಿ ಆ ದಂಪತಿಗಳ ಪಾಡು ಒಳಿತಾಗಲಿಲ್ಲೆಂದು ದಿವಾಣ ಮಾಧವರಾಯನು ಮರಮರನೆ ಮರುಗತೊಡಗಿದನು; ಈಗ ಅವನ ಪ್ರಕೃತಿಯು ಗುಣಮುಖವಾಗಿತ್ತು. ನಿರಾಧಾರಿಗಳಾದ ಆ ದೀನ ದಂಪತಿಗಳಿಗೆ ಕೈಯಿಂದಾದಷ್ಟು

ನೆರವಾಗಬೇಕೆಂದು ಅವನು ಯೋಚಿಸಿ, ತನ್ನ ಗುರತಿನ ಒಬ್ಬ ವಕೀಲನನ್ನು ಆ ಕೆಲಸಕ್ಕೆ ತೊಡಗಿಸಿದನು; ಹಾಗು ಪಟ್ಟಣದೊಳಗಿನ ದೊಡ್ಡ ದೊಡ್ಡ ವರ್ತಕರಿಗೂ, ಶ್ರೀಮಂತ ನಾಗರಿಕರಿಗೂ ಭೆಟ್ಟಿಯಾಗಿ ಅವರ ನಿರಪರಾಧಿತ್ವದ ಬಗ್ಗೆ ತಿಳಿಸಿ ಹೇಳತೊಡಗಿದನು ರಾಧಾದೇವಿಯ ಕೊಲೆಯ ಪ್ರಯತ್ನದ ಬಗ್ಗೆ ವರ್ತಮಾನ ಪತ್ರದಲ್ಲಿ ಲೇಖಗಳು ಇನ್ನೂ ಪ್ರಕಟವಾಗುತ್ತಲಿದ್ದವು. ಅಷ್ಟರಲ್ಲಿ ಸಾಹೇಬರ ಕೊಲೆಯ ಪ್ರಯತ್ನದ ಲೇಖಗಳೂ ಪ್ರಕಟವಾಗಹತ್ತಿದವು 'ಸೆರೆಮನೆಯಲ್ಲಿರುವವರು ನಿಜವಾದ ಕೊಲೆಗಾರರಲ್ಲ; ನಿಜವಾದ ಕೊಲೆಗಾರರು ಮನೆಯಲ್ಲೇ ಇರುವರು' ಎಂಬ ಆಶಯದ ಲೇಖಗಳು ಪ್ರಸಿದ್ಧವಾಗಹತ್ತಿದವು. ಸರಕಾರವು ಕೊಲೆಯ ವಿಚಾರಣೆ ಮಾಡುವಾಗ ನ್ಯಾಯದೇವತೆಯ ಕೊಲೆ ಮಾಡಬಾರದೆಂದು ಎಲ್ಲ ಪತ್ರಗಳೂ ಕೂಗಹತ್ತಿದವು.

ಕೃಷ್ಣರಾಯರ ಕೊಲೆಯ ಪ್ರಯತ್ನ ನಡೆದಾಗ ದಿವಾಕರರಾಯನ ಮಗಳಾದ ಉಷೆಯು ಅಲ್ಲಿಯೇ ಇದ್ದಳು. ರಮಾದೇವಿಯಿಂದ ಕೊಲೆ ಕೆಲಸವಾಗಿಲ್ಲವೆಂಬ ಬಗ್ಗೆ ಅವಳಿಗೆ ಬಲವಾಗಿ ನಂಬಿಗೆಯಾಗಿತ್ತು. ಆ ಕೆಲಸವನ್ನು ಅಡವೀರಾಯನೇ ಮಾಡಿರುವನೆಂದು ಅವಳು ಚನ್ನಾಗಿ ತಿಳಿದಳು. ಯಾಕಂದರೆ, ಅಲ್ಲಿ ಬೇರೆ ಯಾರೂ ಇದ್ದಿಲ್ಲ. ಸಾಹೇಬರ ಅನನ್ವಿತ-ಅತ್ಯಾಚಾರಗಳನ್ನು ಇಷ್ಟು ದಿನಗಳವರೆಗೆ ಸಹಿಸಿದ್ದೇ ಅಡವಿರಾಯನ ವಿಶಿಷ್ಟತರದ ಕೆಚ್ಚೆದೆಯ ಗುರತಾಗಿತ್ತು. ತನ್ನ ಪತ್ನಿಗೆ ಮಾತ್ರವಲ್ಲದೆ, ಉಷೆ-ರಮೆಯರಂತಹ ಕುಲೀನ ಯುವತಿಯರಿಗೆ ಕಂಟಕಪ್ರಾಯರಾದ ಸಾಹೇಬರನ್ನೇ ನಷ್ಟಗೊಳಿಸಬೇಕೆಂದು ಅವನು ದೀರ್ಘಸಾಹಸ ಮಾಡಿದನು; ಆದರೆ ವಿಜಯನಗರ ಸಂಸ್ಥಾನದಲ್ಲಿ ಪ್ರಜೆಗಳ ಶಸ್ತ್ರಸಂನ್ಯಾಸವ್ರತವು ಪ್ರಾರಂಭವಾಗಿ ಕೆಲವು ತಲೆಗಳು ಗತಿಸಿ ಹೋಗಿದ್ದವು. ಕಾಯಿ-ಪಲ್ಲೆಗಳನ್ನು ಹೆಚ್ಚುವ ಕಲೆಯನ್ನು ಕೂಡ ಅಂಥ ಕಲಾಕೋವಿದರಲ್ಲಿ ಕಲಿತುಕೊಂಡು ಬರುವಂತಹ ಪರಿಸ್ಥಿತಿಯಿತ್ತು. ಬಾಲಕರಿಗೆ ಲೇಖನಿ ಕೆತ್ತಿಕೊಡುವದನ್ನು ನೋಡಿದರೆ, ಅಡವಿಯ ಕಣ್ಣು ಕತ್ತಲೆಗೊಡಿಸುತ್ತಿತ್ತು. ರತ್ನಪುರದಲ್ಲಿ ರಂಗಪಂಚಮಿಯಿದ್ದಿಲ್ಲ. ವಿಜಯನಗರಕ್ಕೆ ಬಂದ ವರ್ಷ ರಂಗಪಂಚಮಿಯ ದಿನ ಪಿಚಕಾರಿಯಿಂದ ಕೆಂಪು ಬಣ್ಣವನ್ನೆರೆಚಿಸಿಕೊಂಡಿದ್ದ ಒಬ್ಬ ಮನುಷ್ಯನನ್ನು ನೋಡಿದ ಕೂಡಲೆ, ಇವನು ಸಂಗ್ರಾಮದಲ್ಲಿ ಜನರ ಕತ್ತು ಕೊಯ್ದು ಬಂದವನೆಂಬ ಭಾವನೆಯಾಗಿ ಅಡವಿ ಮೂರ್ಛೆ ಹೋಗಿದ್ದನು. ಕಾಲಿಗೆ ಮುಳ್ಳು ನೆಟ್ಟು, ಕೈಗೆ ಚಾಕು-ಚೂರಿಗಳು ಹತ್ತಿ ನೆತ್ತರ ಬಂದಾಗ ಪ್ರಾಣಾಂತಿಕ ವೇದನೆಯಾಗುತ್ತಿರುವದನ್ನು ನೆನೆದು, ಹಿಂದಿನವರು ಕತ್ತು ಕಿತ್ತುವ ವರೆಗೆ ಯುದ್ಧ ಮಾಡುತ್ತಿದ್ದರೆಂಬ ಸಂಗತಿಯು

ಕಪೋಲಕಲ್ಪಿತವೆಂದೂ ಮನುಷ್ಯರು ಮನುಷ್ಯರನ್ನು ಕಡಿಯುವದು ಅಸಂಭಾವ್ಯವೆಂದೂ ಆತನು ಅನ್ನುತ್ತಿದ್ದನು. ಯುದ್ಧದಲ್ಲಿ ಬಹಳವಾದರೆ ಕೈಗೆ ಕೈ ಹತ್ತಿ ಕುಸ್ತಿ ಆಡಿರಬಹುದೆಂದು ಅವನ ಸಿದ್ಧಾಂತವಿತ್ತು. ಇಂತಹ ಸಿದ್ಧಾಂತಿಯ ಕೈಯಿಂದ ಕೊಲೆಗೆಲಸವು ಪೂರೈಸುವ ಬಗೆ ಹೇಗೆ? ಎಲ್ಲಿ ಚಿವುರಿದಂತೆ ನಾಲ್ಕಾರು ಗಾಯಗಳನ್ನು ಮಾಡಿ ಕೃತಕೃತ್ಯನಾಗಿದ್ದನೋ ಏನೋ! ಸಾಹೇಬರಾದರೂ ಕ್ಷೌರಿಕನ ಕತ್ತಿಯ ಗಾಯಕ್ಕೆ ನಾಲ್ಕು ದಿನ ನೆಲ ಹಿಡಿಯುವಂಥಹ ಸೂಕ್ಷ್ಮಪ್ರಕೃತಿಯವರಾದ್ದರಿಂದ ಈ ಗಾಯಗಳ ಆರೈಕೆಗಾಗಿ ರುಗ್ಣಾಲಯವನ್ನು ಸೇರಿದ್ದರು.

ಸಾಹೇಬರು ತನ್ನ ಶಸ್ತ್ರಪ್ರಹಾರದಿಂದ ಸಾಯದಿದ್ದರೆ ಇಲ್ಲ; ರುಗ್ಣಾಲಯವನ್ನಾದರೂ ಸೇರಿದರೆಂದು ಅಡವೀರಾಯನಿಗೆ ಹಿಡಿಸಲಾರದಷ್ಟು ಆನಂದವಾಗಿತ್ತು. ತನ್ನಂತಹ ಶಸ್ತ್ರಪಟುವು ಶಸ್ತ್ರಯುದ್ಧದಲ್ಲಿ ನೈದೋರಿದ್ದರೆ ಅಥವಾ ಈಗ ಆ ಶಸ್ತ್ರಯುದ್ಧವು ಇರುತ್ತಿದ್ದರೆ ಇತಿಹಾಸದಲ್ಲಿ ತನ್ನ ಹೆಸರೂ ಅಜರಾಮರವಾಗುತ್ತಿತ್ತೆಂದು ಯೋಚಿಸುತ್ತ ಅವನು ತನ್ನ ಕೋಣೆಯಲ್ಲಿ ಕುಳಿತುಕೊಂಡಿದ್ದನು. ಅನಂತರದಲ್ಲಿ ಅವನಿಗೆ ಏನೋ ನೆನಪಾದಂತಾಗಿ ಕಪಾಟಿನ ಬೀಗ ತೆಗೆದ, ಅಲ್ಲಿದ್ದ ಒಂದು ಪುಸ್ತಕವನ್ನು ತಕ್ಕೊಂಡನು. ಅದು ಕೈಬರೆಹದ್ದಿದ್ದು, ಅದರ ಮೇಲೆ 'ಅಡವೀರಾಯಕೃತ ರಾಧಾ-ಕೃಷ್ಣವಿಲಾಸ' ಎಂಬ ಹೆಸರು ಬರೆಯಲ್ಪಟ್ಟಿತ್ತು. ಪುಸ್ತಕವು ನೂರಾರು ಪುಟದ್ದಿದ್ದು, ತುಂಬಾ ಕೈಯಿಂದ ಬರೆಯಲ್ಪಟ್ಟದ್ದಾಗಿತ್ತು. ಅವನು ಆ ಪುಸ್ತಕದಲ್ಲಿ ತನ್ನ ಪತ್ನಿಯಾದ ರಾಧಾದೇವಿಯ ಹಾಗು ಕೃಷ್ಣರಾಯರ ವಿಶಾಲವಾದ ಚರಿತ್ರವನ್ನು ಬರೆದದ್ದಲ್ಲದೆ, ಅವರ ಪ್ರೇಮವಿಲಾಸಗಳನ್ನು ಒಳ್ಳೇ ಮಾರ್ಮಿಕವಾಗಿ ಬಣ್ಣಿಸಿದ್ದನು. ಅದರಲ್ಲಿ ರಾಧಾದೇವಿಯ ಕೊಲೆಯ ವಿಷಯವೂ ಬರೆಯಲ್ಪಟ್ಟಿತ್ತು. ಸಾಹೇಬರ ಕೊಲೆಯ ವಿಷಯದ ವರೆಗಿನ ಎಲ್ಲ ಐತಿಹ್ಯವು ಅದರಲ್ಲಿ ಮೂಡಿತ್ತು. ಇನ್ನು ಅದೊಂದು ವಿಷಯವನ್ನು ಬರೆದು ಆ ಮಹಾಕಾವ್ಯದ ಉಪಸಂಹಾರ ಮಾಡಬೇಕೆಂದು ಅಡವೀರಾಯನ ಯೋಚನೆಯಿತ್ತು. ವೇಳೆಯೂ ಸ್ಥಳವೂ ನಿಪಾಂತವಿದ್ದುದರಿಂದ ಕಾವ್ಯದ ಉಳಿದ ಭಾಗವನ್ನು ಬರೆಯಬೇಕೆಂದು ಯೋಚಿಸಿ, ಅದನ್ನು ಬೈಲಿಗೆ ತೆಗೆದನು. ಬರೆಯಲಿಕ್ಕೂ ಪ್ರಾರಂಭಿಸಿದನು. ಅಡವೀರಾಯಕೃತ ರಾಧಾ-ಕೃಷ್ಣ ಪ್ರೇಮವಿಲಾಸ ಕಾವ್ಯವೆಂದರೆ, ಅದೇನೂ ವಿದ್ವಾಂಸರು ಓದಿ ಕಲಿಯಬೇಕಾದುದಂಥದಲ್ಲ. ಅದರಲ್ಲಿ ವಾಕ್ಯಸರಣಿ ವ್ಯಾಕರಣ ರಸ ಸಾಹಿತ್ಯಗಳಿದ್ದಿಲ್ಲ. ಅವನು ತನ್ನ ಅಂತಃಕರಣಕ್ಕೆ ಮೂಡಿದ ಬಗೆಯ ಚಿತ್ರಗಳನ್ನು ಮನಃಪೂರ್ವಕವಾಗಿ ತೆಗೆಯತೊಡಗಿದ್ದನು. ಆದ್ದರಿಂದ ಅದು

ಹಲಕೆಲವರಿಗಾದರೂ ಮಾರ್ಗದರ್ಶಕವಾಗುವಂಥಾದ್ದಾಗಿತ್ತು. ಓದು-ಬರೆಹ ಕಲಿತ ಸ್ವಲ್ಪ ದಿನಗಳಲ್ಲಿಯೆ ಕಾವ್ಯಾಲಂಕಾರನಾಗಬೇಕಾದರೆ, ಅವನ ಅಂತಃಕರಣದ ಬರೆಗಳು ಘನತರವಾದವುಗಳಿದ್ದುದೇ ಕಾರಣವಾಗಿತ್ತು. ಕಾವ್ಯವು ಪೂರ್ಣವಾದ ಕೂಡಲೆ ಅದು ನ್ಯಾಯಾಸನದ ಮುಂದೆ ಇಡಲ್ಪಡುವದಿತ್ತು ಕೂಡಲೆ ಅಡವೀರಾಯನ ಇಹಲೋಕದ ಯಾತ್ರೆಯೂ ಮುಗಿಯುವದಿತ್ತು. ಯಾರ ಕೈಯಿಂದಲಾದರೂ ಕಾವ್ಯವನ್ನು ನ್ಯಾಯಾಧೀಶರಿಗೆ ತಲುಪಿಸಿ, ಆತ್ಮಹತ್ಯೆ ಮಾಡಿಕೊಳ್ಳಬೇಕೆಂದೇ ಅಡವೀರಾಯನ ಸತ್ಯಸಂಕಲ್ಪ!

ಅಡವೀರಾಯನು ತನ್ನ ಸೊಟ್ಟ-ಡೊಂಕ ಅಕ್ಷರಗಳಿಂದ ಕಾವ್ಯದ ಕೊನೆಯ ಭಾಗವನ್ನು ಬರೆಯುತೊಡಗಿದನು. ಅಷ್ಟರಲ್ಲಿ—'ಅಡವೀರಾಯ ಮಾಸ್ತರರೆ!' ಎಂಬ ಧ್ವನಿಯು ಕೇಳಿಸಿತು. ಪರಕ್ಷಣದಲ್ಲಿ ಒಬ್ಬ ಸ್ತ್ರೀಯು ಅವನ ಎದುರಿಗೆ ಬಂದು ನಿಂತು ಆ ಕಾವ್ಯವನ್ನು ನಿರೀಕ್ಷಿಸಿದಳು. ಅಡವೀರಾಯನು ಗಾಬರಿಯಿಂದ ಅದನ್ನು ಹಾಸುಗೆಯ ಬುಡಕ್ಕೆ ಸರಿಸಿ-'ಬನ್ನಿರಿ, ಉಷಾದೇವಿ!'

'ಯಾವ ಪುಸ್ತಕವದು?' ಎಂದು ಉಷೆಯು ಅಡವೀರಾಯನನ್ನು ಕೇಳಿದಳು.

'ಅದು ನಿಮ್ಮ ವಿಷಯವಲ್ಲ; ನಮ್ಮ ವಿಷಯ. ಹೆಂಗಸರು ಪುಸ್ತಕ-ಹಲಿಗೆಗಳ ಸಮೀಪಕ್ಕೆ ಬರಬಾರದು.'

'ಹೀಗೇಕೆ ಆಡುವಿರಿ? ನಿಮ್ಮ ಪತ್ನಿಯವರು ಪ್ರಖ್ಯಾತ ಸ್ಕೂಲ ಮಿಸ್ಟ್ರೆಸ್ಸರಿರುವಾಗ, ನಿಮ್ಮ ಬಾಯಿಂದ ಇಂತಹ ಮಾತುಗಳೇಕೆ?'

'ದೇವಿಯವರು ನಾಮಾಂಕಿತ ಸ್ಕೂಲ ಮಿಸ್ಟ್ರೆಸ್ಸರಾದುದರಿಂದಲೆ ನನ್ನ ಬಾಯಿಂದ ಇಂತಹ ಮಾತುಗಳು ಹೊರಟವು!'

'ಇರಲಿ. ಅಡವಿರಾಯರೆ, ರಮಾದೇವಿ-ಸುರೇಂದ್ರರಾಯರ ಬಿಡುಗಡೆಯ ಬಗ್ಗೆ ಯುಕ್ತಿ ತೆಗೆದಿರುವೆವೆಂದು ಹೇಳಿದ್ದಿರಿ. ಅದು ಯಾವ ಯುಕ್ತಿ?'

'ಈಗಲೆ ಹೇಳುವಂತಿಲ್ಲ.'

'ಯಾವಾಗ ಹೇಳುವಿರಿ? ಜೀವ ಹೋದ ಮೇಲೆ ಹೇಳುವಿರೇನು?'

'ಹೌದು. ನಿಶ್ಚಯವಾಗಿ ಜೀವ ಹೋದ ಮೇಲೆಯೇ ಹೇಳುವೆನು.'

'ಜೀವಹೋದಮೇಲೆ ಯುಕ್ತಿ-ಪ್ರಯುಕ್ತಿಗಳಿಂದ ಪ್ರಯೋಜನವೇನು?'

'ಇದ್ದವರಿಗೆ ಸುಖ; ರಮಾದೇವಿ-ಸುರೇಂದ್ರರಾಯರಿಗೆ ಸುಖ. ನನ್ನ ಜೀವ ಹೋದ ಮೇಲೆ ನನ್ನ ಯುಕ್ತಿಯು ಪ್ರಕಾಶಿತವಾಗುವದು.'

'ನಿಮ್ಮ ಮಾತಿನ ರಹಸ್ಯವೇ ತಿಳಿಯದಾಗಿದೆ' ಎಂದು ಉಷೆಯು

ನುಡಿಯುವಷ್ಟರಲ್ಲಿ—'ಅಡವಿ!' ಎಂಬ ಕೂಗು ಕೇಳಿಸಿತು. ಪರಕ್ಷಣದಲ್ಲಿ ರಾಧಾದೇವಿಯು ಆ ಕೋಣೆಯಲ್ಲಿ ಬಂದು—'ಅಡವಿ, ಏನು ಹರಟೆ ಕೊಚ್ಚುತ್ತಿರುವೆ? ನಾಲ್ಕು ಗಂಟೆಗೆ ರಾಯರ ಸಮಾಚಾರಕ್ಕಾಗಿ ರುಗ್ಣಾಲಯಕ್ಕೆ ಹೋಗುವೆನೆಂದು ಹೇಳಿದ್ದಿಲ್ಲವೆ? ಈಗ ನಾಲ್ಕು ಬಡಿದು ಹದಿನೈದು ನಿಮಿಷಗಳಾದವು. ಚಹ ಸಿದ್ಧಪಡಿಸುವದನ್ನು ಬಿಟ್ಟು, ಕೆಲಸಗೇಡಿಯ ಸಂಗಡ ಹರಟೆ ಕೊಚ್ಚುತ್ತಿರುವೆ.'

'ನಿಮ್ಮ ಕೈಯಲ್ಲಿ ಗಡಿಯಾರವಿದೆ; ವೇಳೆ ತಿಳಿಯುವದು. ನನಗೆ ವೇಳೆ ಗೊತ್ತಾಗಲಿಲ್ಲ. ಇನ್ನೂ ಮೂರು ಗಂಟೆಗಳಾಗಿರಲಿಕ್ಕೆಂದು ತಿಳಿದಿದ್ದೆನು. ನಿಮ್ಮ ಗಡಿಯಾರ ಮುಂದೆ ಓಡುವದು ಬಿಡಿರಿ!'

'ಹುಚ್ಚಾ! ಇದು ಗೋವರ್ಧನರಾಯರು ಕೊಟ್ಟ ಗಡಿಯಾರವಲ್ಲ, ರಾವಸಾಹೇಬರು ಪುತ್ರೋತ್ಸವದ ಆನಂದದಲ್ಲಿ ಇದನ್ನು ನನಗೆ ಕಾಣಿಕೆಯಾಗಿ ಕೊಟ್ಟಿದ್ದಾರೆ. ಇದರ ಬೆಲೆ ಐದುನೂರು ರೂಪಾಯಿ'

'ಅಬ್ಬಬ್ಬಾ!' ಎಂದು ಅಡವೀರಾಯನು ಬಾಯಿ ಮೇಲೆ ಕೈಯಿಟ್ಟುಕೊಂಡು ನುಡಿದು—'ರಾವಸಾಹೇಬರಿಗೆ ಮಗ ಹುಟ್ಟಿದ್ದು ನನಗೆ ಗೊತ್ತಿದ್ದಿಲ್ಲ ಬಿಡಿರಿ. ನಿಮಗೆ ಗಡಿಯಾರವಾದರೆ, ನನಗೆ ಅವರ ಮಗನ ಸಕ್ಕರಿಯಾದರೂ ಬರಬಾರದೆ?'

'ಅವರಿಗೆ ಮಗ ಹುಟ್ಟಿಲ್ಲೋ! ನಾನು ಗಿರಿಮಾಜಿಯನ್ನು ಹಡೆಯಲಿಲ್ಲವೆ?'

'ಅದನ್ನು ಕೇಳಿದ್ದೇನೆ. ಗಿರಿಮಾಜಿಯನ್ನು ಸಾಹೇಬರು ಹಡೆದಿರುವರೆಂದು ನಾನೆಲ್ಲಿ ಅಂದೆನು? ಸಾಹೇಬರ ಮಗನ ಸಕ್ಕರೀ ಸುದ್ದಿ ಕೇಳಿದೆ.'

'ಒಡವನ ಸಂಗತಿ ಕಠಿಣ!' ಎಂದು ರಾಧಾದೇವಿಯು ನಗುತ್ತ ನುಡಿದು—'ನನಗೆ ಪುತ್ರಸಂತಾನವಾದದ್ದಕ್ಕೆ ಅವರು ಆನಂದಪೂರ್ಣರಾಗಿ ನನಗೆ ಗಡಿಯಾರವನ್ನು ಕಾಣಿಕೆಯಾಗಿ ಕೊಟ್ಟರು.'

'ನೋಡಿದಿರಾ! ನಿಮ್ಮಂತಹ ಕೈಕೆಳಗಿನವರ ಮೇಲೆ ಸಾಹೇಬರು ಎಷ್ಟು ಬಿದ್ದು ಬಿದ್ದು ಸಾಯುತ್ತಾರೆ! ಬಲು ಹಚ್ಚಿಕೊಳ್ಳುವರು. ಪಾಪ! ತಪ್ಪಲ್ಲ!'

'ಅವರ ಗುಣಗಳನ್ನರಿಯದೆ ಜನರು ಅವರಿಗೆ ಹೆಸರಿಡುತ್ತಾರೆ.' ಎಂದು ರಾಧಾದೇವಿಯು ನುಡಿದು—'ಏಳೊ ಅಡವಿ! ಸಂಜೆತನಕ ಹರಟೆಹೊಡೆದರೂ ನಿನಗೆ ಬೇಸರವಿಲ್ಲ. ಉಷೆಯು ಇಲ್ಲೇ ಕುಳಿತುಕೊಳ್ಳುವಳು. ನೀನು ಬೇಗ ಚಹವನ್ನು ಸಿದ್ಧಪಡಿಸಿಟ್ಟು ಮತ್ತೆ ಹರಟೆಗೆ ಕುಳಿತುಕೋ. ನಾನು ಈಗಲೆ

ಚಹ ತೆಗೆದುಕೊಂಡು ರುಗ್ಣಾಲಯಕ್ಕೆ ಹೋಗಬೇಕಾಗಿದೆ.'

'ಮತ್ತೇಕೆ ರುಗ್ಣಾಲಯ ದೇವಿಯವರಿಗೆ ಹೊಟ್ಟೆ ಮುರಿಯುತ್ತಿದೆಯೋ?'

'ಥೂ! ಮೂರ್ಖ, ಒಳಿತೆನ್ನು. ಇಷ್ಟು ದಿನ ಅನುಭವಿಸಿದ್ದು ಸಾಲದೆ? ಸಾಹೇಬರ ಸಮಾಚಾರಕ್ಕೆ ಹೋಗಬೇಕಾಗಿರುವದೆಂದು ನಾನು ಆಗಲೆ ಹೇಳಲಿಲ್ಲವೆ?'

'ಹೌದು. ಮರೆತಿದ್ದೆ. ಗಂಡಸರ ಬುದ್ಧಿ ಬಲು ಮದಡು. ಹೆಂಗಸರು ಬಲು ಚುರುಕು. ಅಂತೆಯೆ ಸಾಹೇಬರು ಅವರಿಗೆ ದೊಡ್ಡ ದೊಡ್ಡ ತಲಬಿನ ಕೆಲಸ ಕೊಡುತ್ತಾರೆ.'

'ಇನ್ನೂ ಈಗೇನು ಕಂಡೀ ಅಡವಿ! ಹೆಂಗಸರು ಮಾಮಲೆದಾರ-ಮುನಸೀಫರಾಗುವರು. ಕಚೇರಿ-ಕಟ್ಟೆಗಳೆಲ್ಲವೂ ಹೆಂಗಸರ ಸ್ವಾಧೀನ.'

'ಹಾಗಿದ್ದರೆ ಗಂಡಸರಿಗೆ? ತೆಗ್ಗಿನಕಟ್ಟೆ, ಬಚ್ಚಲ ಕಟ್ಟೆ, ಭಾವೀಕಟ್ಟೆಗಳೇನು ದೇವಿಯವರೆ?'

'ಮತ್ತೇನು? ಒಲೆಗಳು ಹೆಂಗಸರಿಗೆ ಬಂದ ಮೇಲೆ ಹಾಗೆಯೇ!'

'ಓಲೆಗಳು ಹೆಂಗಸರ ಪಾಲು. ಒಲೆಗಳು ಗಂಡಸರ ಪಾಲು. ಈ ಅಡವಿಯು ಹರಿಯೊಲೆ, ಗುಂಡೊಲೆ, ಕಲ್ಲೊಲೆಗಳಲ್ಲಿ ನಿಷ್ಣಾತನು; ಆದರೆ ಕೊಡೊಲೆ, ಒಂಟಿಯೊಲೆ, ಎಣ್ಣೆಯೊಲೆ, ಇದ್ದಲಿಯೊಲೆಗಳ ಗುರುತು ಮಾತ್ರ ಇರುವದಿಲ್ಲ.'

'ನನಗೂ ಗೊತ್ತಿಲ್ಲ. ಬಲ್ಲವರಿಂದ ಗೊತ್ತುಮಾಡಿಸುವೆನು. ಏಳು ಚಹ ಸಿದ್ಧಮಾಡಿಸು. ಹೂ! ಏಳು, ಅಡವಿ ಹೊತ್ತಾಯಿತು!'

ಅಡವಿಯು ಎದ್ದನು. ರಾಧಾದೇವಿಯೂ ಹೊರಟಳು. ಕೋಣೆಯಿಂದ ಹೊರಬೀಳುವಾಗ ರಾಧಾ-ಕೃಷ್ಣ ಪ್ರೇಮವಿಲಾಸ ಪುಸ್ತಕವು ಅಡವಿಯ ವಿಸ್ಮೃತಿಯಿಂದ ಹಾಸುಗೆಯ ಬುಡದಲ್ಲಿಯೇ ಉಳಿಯಿತು. ಕೋಣೆಯು ಜನಶೂನ್ಯವಾದ ಮೇಲೆ ಉಷೆಯು ಆ ಪುಸ್ತಕವನ್ನು ತೆಗೆದು ಒಂದೊಂದೇ ಓಲೆಗಳನ್ನು ಓದತೊಡಗಿದಳು. ಅದರಲ್ಲಿ ರಾಧಾದೇವಿಯ ಬಾಲ್ಯದಿಂದ ಇಂದಿನವರೆಗಿನ ಇತಿಹಾಸವೂ, ಕೃಷ್ಣರಾಯರ ಚರಿತ್ರಚಿತ್ರವೂ ರೇಖಿಸಲ್ಪಟ್ಟಿದ್ದವು. ಎಲ್ಲ ವಿಷಯಗಳಿಗಿಂತ 'ಸ್ಕೂಲ ಮಿಸ್ಟ್ರೆಸ್ಸಿನ ಭಯಂಕರ ಕೊಲೆ!' ಎಂಬ ಪ್ರಕರಣವು ಅತ್ಯಂತ ಮಹತ್ವವೂ ರಹಸ್ಯಪೂರ್ಣವೂ ಆಗಿತ್ತು. ಆಗ ಉಷೆಯ ತಲೆಯಲ್ಲಿ ಅನೇಕ ವಿಧದ ಯೋಚನೆಗಳು ತುಂಬಿದವು. ಅವಳು ಆ ಪುಸ್ತಕವನ್ನು ಕೈಯಲ್ಲಿ ತೆಗೆದುಕೊಂಡು ಎದ್ದಳು. 'ಈ ಅಡವೀರಾಯಕೃತ ರಾಧಾ-ಕೃಷ್ಣ ಪ್ರೇಮವಿಲಾಸ ಪುಸ್ತಕವನ್ನು ನ್ಯಾಯಾಧೀಶರ ಕಣ್ಣಿಗೆ ಹಾಕಿದರೆ ನಿಶ್ಚಯವಾಗಿಯೂ ನಿರಪರಾಧಿಗಳ ಬಿಡುಗಡೆಯಾಗುವದು' ಎಂಬ ವಿಚಾರವು



ಅವಳ ತಲೆಯಲ್ಲಿ ಬಂದಿತು. ಕೂಡಲೆ ಕೈಯೊಳಗಿನ ಪುಸ್ತಕವು ಜಾರಿ ಕೆಳಗೆ ಬಿತ್ತು. ಇದೇನೋ ದುಶ್ಚಿಹ್ನವು ತೋರಿತೆಂದು ಅವಳು ಯೋಚಿಸುವಷ್ಟರಲ್ಲಿ—'ಉ ಷಾ ದೇ ವಿ! ಮಹಾಮಾಯೆಯು ಹೋ ದ ಳು. ಇನ್ನು ನಮ್ಮದೆ ರಾಜ್ಯ' ಎಂದು ನುಡಿಯುತ್ತ ಅಡವಿಯು ಅಲ್ಲಿಗೆ ಬಂದನು. ಉಷೆಯು ಚಪಲತೆಯಿಂದ ಕೆಳಗೆ ಬಿದ್ದ ಪುಸ್ತಕವನ್ನು ತೆಗೆದುಕೊಂಡು ಉಡಿಯಲ್ಲಿರಿಸಿದಳು. ಅಡವೀರಾಯನಿಗೆ ಈ ಸಂಗತಿಯು ಗೊತ್ತಾಗದೆ ಇರಲಿಲ್ಲ. ತನ್ನ ಪ್ರಾಣಕ್ಕಿಂತ ಮಿಗಿಲಾದ ಪುಸ್ತಕವು ಉಷೆಯ ಸ್ವಾಧೀನವಾದದ್ದನ್ನು ನೋಡಿ ಅವನು ಗಾಬರಿಗೊಂಡನು. ಸವಿ ಮಾತಿನಿಂದ ಆ ಪುಸ್ತಕವನ್ನು ಎತ್ತಬೇಕೆಂದು ಯೋಚಿಸಿ, ಅವನ —'ಉಷಾದೇವಿ, ಆ ಪುಸ್ತಕವನ್ನೇಕೆ ತೆಗೆದುಕೊಂಡಿರಿ? ಅದನ್ನು ಇತ್ತ ಕೊಡಿರಿ.'

'ಅಡವೀರಾಯರೆ, ಈ ಪುಸ್ತಕದಲ್ಲಿ ಒಂದು ಗುಹ್ಯವಿರುವದು. ಇದನ್ನು ನ್ಯಾಯಾಧೀಶರಿಗೆ ತೋರಿಸಿದರೆ, ನಿರಪರಾಧಿಗಳೂ ಸಜ್ಜನರೂ ಆದ ರಮಾದೇವಿ-ಸುರೇಂದ್ರರಾಯರ ಬಿಡುಗಡೆಯಾಗುವದು. ನೀವು ಇದುವರೆಗೆ ಆ ದೀನದಂಪತಿಗಳನ್ನು ಕಷ್ಟಕ್ಕೀಡುಮಾಡಿ ಸ್ವಸ್ಥವಾಗಿ ಕುಳಿತುಕೊಂಡಿರಿ; ಮತ್ತೆ ಅವರ ವಿರುದ್ಧವಾಗಿ ಪೋಲೀಸರ ಪಕ್ಷಹಿಡಿದು ಸಾಕ್ಷಿ ನುಡಿಯಲು ಸಿದ್ಧರಾಗಿರುವಿರಿ.'

'ಉಷಾದೇವಿ, ನೀವು ಆ ಪುಸ್ತಕದೊಳಗಿನ ಎಲ್ಲ ಸಂಗತಿಯನ್ನು ಓದಿರುವಿರೇನು?'

'ಹೌದು. ಓದಿದ್ದರಿಂದಲೇ ರಮಾ-ಸುರೇಂದ್ರರ ಬಿಡುಗಡೆಯಾಗುವಂತಹ ವಿಷಯವು ಇದರಲ್ಲಿ ಬರೆಯಲ್ಪಟ್ಟಿದ್ದು ಗೊತ್ತಾಯಿತು.'

'ನ್ಯಾಯಾಧೀಶರಿಗೆ ಕೊಡುವದಕ್ಕಾಗಿ ನಾನೀ ಪುಸ್ತಕ ಬರೆದಿರುವೆನು.

ನೀವು ಇಂದೇ ಇದನ್ನು ಅವರಿಗೆ ತಲುಪಿಸು. ನಾನು ಮಾತ್ರ ಸೆರೆಮನೆಯ ಅಪಮಾನವನ್ನು ಸಹಿಸಲಾರೆನು. ಇಂದೇ ವಿಷಪ್ರಾಶನ ಮಾಡುತ್ತೇನೆ.'

'ನಿಮಗೆ ಹುಚ್ಚು ಹಿಡಿಯಿತೇನು? ಇದನ್ನು ನ್ಯಾಯಾಧೀಶರಿಗೆ ತಲುಪಿಸಿದ ಮಾತ್ರಕ್ಕೆ ಕೆಲಸವಾಗಲಿಲ್ಲ. ಅವರೆದುರಿಗೆ ನಿಮ್ಮ ಜಬಾನಿಯಾಗಲಿಕ್ಕೆ ಬೇಕು. ನಿಮ್ಮ ಕೃತ್ಯಗಳೂ ಅಪರಾಧಗಳೂ ಒಂದು ವೇಳೆ ಕ್ಷಮಿಸಲ್ಪಟ್ಟರೆ, ಸೆರೆಮನೆಯ ಅಪಮಾನ ಹೊಂದುವ ಪ್ರಸಂಗವು ನಿಮಗೆ ಒದಗಲಾರದು. ನೀವು ಆತ್ಮಹತ್ಯೆ ಮಾಡಿಕೊಳ್ಳಬಾರದು. ನನ್ನ ವಿವಾಹ ಮಾಡದೆ ಆತ್ಮಹತ್ಯೆ ಮಾಡಿಕೊಳ್ಳುವಿರಾ? ನನ್ನ ತಂದೆಯವರಾದ ದಿವಾಕರರಾಯರು ಮೃತ್ಯುಹೊಂದುವ ಕಾಲಕ್ಕೆ ಅವರಿಗೆ ನೀವು ಏನು ಅಭಿವಚನ ಕೊಟ್ಟಿರುವಿರಿ? ನೀವು ಹೊರಟು ಹೋದ ಮೇಲೆ ನನಗಾರು ಆಧಾರ? ನೀವು ನನ್ನ ತಂದೆಯವರ ಸ್ಥಳವನ್ನು ಸ್ವೀಕರಿಸಿರುವಿರಿ. ಅವರ ಕರ್ತವ್ಯಭಾರವು ನಿಮ್ಮ ಮೇಲಿರುವದು. ನಿಮ್ಮ ಸಹಾಯದಿಂದಲೇ ನಾನು ಜೀವಿಸಿರುವೆನು. ನೀವು ನ್ಯಾಯಾಧೀಶರ ಚಾವಡಿಗೆ ಹೋಗಿ ಈ ಪುಸ್ತಕವನ್ನು ಕೊಟ್ಟು ನಿಮ್ಮ ಜಬಾನಿಯನ್ನು ಕೊಡಿರಿ. ಕೃತಾಪರಾಧದ ಬಗ್ಗೆ ಕ್ಷಮೆ ಬೇಡಿರಿ; ಅಂದರೆ ನೀವೂ ಉಳಿಯುವಿರಿ, ರಮಾ-ಸುರೇಂದ್ರರೂ ಪಾರಾಗುವರು. ಆತ್ಮಹತ್ಯೆ ಮಾಡಿಕೊಳ್ಳುವದಿಲ್ಲವೆಂದು ನೀವು ಮೊದಲು ವಚನ ಕೊಡಿರಿ.'

ಅಡವೀರಾಯನು ಉಷೆಯ ಸಲಹೆಗೆ ವಿರುದ್ಧವಾಗಿ ನಡೆಯಲು ಸಮರ್ಥನಾಗಲಿಲ್ಲ. ಆಗ ಅವನು—'ಉಷಾದೇವಿ, ನಾನು ಆತ್ಮಹತ್ಯೆ ಮಾಡಿಕೊಳ್ಳುವದಿಲ್ಲ. ರಮಾ-ಸುರೇಂದ್ರರ ಸಲುವಾಗಿ ಸೆರೆಮನೆಯ ಸಂಗಡಿಗನಾಗುವ ಪ್ರಸಂಗವು ಬಂದರೂ ಬರಲಿ. ನಾನು ಬರೆದ ರಾಧಾ-ಕೃಷ್ಣ ವಿಲಾಸ ಪುಸ್ತಕವನ್ನು ಕೊಡಿರಿ.'

'ಇಲ್ಲ, ಕೊಡುವದಿಲ್ಲ. ಪುಸ್ತಕವನ್ನು ನ್ಯಾಯಚಾವಡಿಯಲ್ಲಿ ನಿಮ್ಮ ಕಡೆಗೆ ಕೊಡುವೆನು. ನೀವು ಕುದಿಯುವಷ್ಟರಲ್ಲಿ ಒಂಬತ್ತು ಸಾರೆ ಹಳಸುವವರು. ನಿಮ್ಮ ಸ್ವಭಾವವೈಚಿತ್ರ್ಯದ ಫಲವನ್ನುಣ್ಣುವ ಪ್ರಸಂಗವು ಪಾಪ! ಆ ದಂಪತಿಗಳಿಗೆ ಬರಬಾರದು. ಅಂತೆಯೇ ಈ ಪುಸ್ತಕವನ್ನು ನನ್ನ ಕಡೆಗೆ ಇಟ್ಟುಕೊಳ್ಳಬೇಕೆಂದು ನಿಶ್ಚಯಿಸಿರುವೆನು. ನಿಮ್ಮಲ್ಲಿದ್ದರೆ, ಒಂದು ವೇಳೆ ಇದು ರಾಧಾದೇವಿಯವರ ಕಣ್ಣಿಗೆ ಬೀಳುವ ಸಂಭವವುಂಟು. ಹಾಗಾದರೆ ಕೆಲಸವು ಕೆಟ್ಟು ಹೋದೀತು' ಎಂಬ ಉಷೆಯು ಹೇಳಿದಳು.

ಪೋಲೀಸರ ಭೀತಿಯಿಂದ ಅಡವೀರಾಯನು ಅವರ ಹೇಳಿಕೆಯಂತೆ ಜಬಾನಿ ಕೊಟ್ಟರೆ, ರಾಧಾ-ಕೃಷ್ಣ ಪ್ರೇಮವಿಲಾಸ ಪುಸ್ತಕದಿಂದ ಒಳ್ಳೇ ಉಪ

ಯೋಗವಾಗುವದೆಂದು ಉಷೆಯು ತಿಳಿದಳು. ಅದಕ್ಕಾಗಿ ಅವಳು ಆ ಪುಸ್ತಕವನ್ನು ಅಡವೀರಾಯನಿಗೆ ಕೊಡಲೊಪ್ಪಲಿಲ್ಲ.

'ಪುಸ್ತಕವನ್ನು ಒಳ್ಳೆಯ ಜತನದಿಂದಿರಿಸಿರಿ. ಅದು ನನ್ನ ಪ್ರಾಣದಂತಿದೆ. ನಿರಕ್ಷರಕುಕ್ಷಿಯು ಮಹಾ ಕಾವ್ಯವಿದು. ಅನೇಕರು ಓದಿ ಬುದ್ಧಿ ಕಲಿಯುವ ಕಾವ್ಯವು.' ಎಂದು ಅಡವಿಯು ಹೇಳಲು,

'ನೀವು ಚಿಂತೆ ಬಿಡಿರಿ' ಎಂದು ಉಷೆಯು ನುಡಿದು, ಅಡವೀರಾಯನ ನಿರೂಪ ಹೊಂದಿ, ರಾಧಾ-ಕೃಷ್ಣ ವಿಲಾಸ ಪುಸ್ತಕವನ್ನು ಮಾಧವರಾಯನಿಗೆ ತೋರಿಸಲಿಕ್ಕೆ ಹೊರಟಳು.

---

## ಶಾಲೆಯ ಸಾಹೇಬರ ತಾಂಡವ.

ರಾವಸಾಹೇಬ ಕೃಷ್ಣರಾಯರು ರುಗ್ಣಾಲಯದಿಂದ ಮನೆಯನ್ನು ಸೇರಿದ್ದರು. ಅವರು ಮೊದಲಿನಂತೆ ಆರೋಗ್ಯತೆ ಹೊಂದಿದ್ದರು. ಉರ್ದೂ ಶಾಲೆಗಳ ಮೇಲೆ ಸೋಫಿಯಾಬೇಗಮಳನ್ನು ಉಪಪರೀಕ್ಷಕಿಯೆಂದು ನಿಯಮಿಸಿದಂತೆ, ಅವರು ಕನ್ನಡ ಶಾಲೆಗಳ ಮೇಲೆ ರಾಧಾದೇವಿಯನ್ನು ಉಪಪರೀಕ್ಷಕಿಯನ್ನಾಗಿ ನಿಯಮಿಸಿದ್ದರು. ಹುಡುಗೆಯರ ಒಂದನೇ ನಂಬರ ಶಾಲೆಯ ಮುಖ್ಯ ಸ್ಕೂಲ ಮಿಸ್ಟ್ರೆಸ್ ಸ್ಥಳದ ಮೇಲೆ ಕುಮಾರೀ ಕುಸುಮಾವತಿಯು ನಿಯಮಿಸಲ್ಪಟ್ಟಳು ಸೌಭಾಗ್ಯವತಿ ವನಿತೆಯು ಎರಡನೇ ನಂಬರ ಶಾಲೆಯ ಮುಖ್ಯ ಶಿಕ್ಷಕಿಯಾದಳು. ಇನಳೇ ಒಂದನೇ ನಂಬರ ಶಾಲೆಯ ಮುಖ್ಯ ಶಿಕ್ಷಕಿಯಾಗತಕ್ಕವಳು; ಆದರೆ ಕುಮಾರಿ ಕುಸುಮಾತಿಯು ಅಕ್ಕನಾದ ಸಿಸ್ಟರ ಗುಲಾಬಿಯ ಉಪಕಾರವು ರಾಧಾದೇವಿಯ ಮೇಲೆ ಬಹಳವಾಗಿತ್ತು. ಆದ್ದರಿಂದ ಅವಳು ಕುಸುಮಾವತಿಯನ್ನು ಒಂದನೇ ನಂಬರ ಶಾಲೆಯ ಮುಖ್ಯ ಶಿಕ್ಷಕಿಯನ್ನಾಗಿ ನಿಯಮಿಸುವದಕ್ಕಾಗಿ ಕೃಷ್ಣರಾಯರಿಗೆ ಹೇಳಿದಳು.

ಇನ್ನೆರಡು ದಿನಗಳಲ್ಲಿ ಕೊಲೆಯ ಪ್ರಕರಣದ ವಿಚಾರಣೆಯು ನ್ಯಾಯಾಧೀಶರ ಸಭೆಯಲ್ಲಿ ನಡೆಯ ತಕ್ಕದ್ದಿತ್ತು. ಹೊಸದಾಗಿ ಬಂದ ಪೋಲೀಸ ಸುಪರಿಂಟೆಂಡೆಂಟ ಸಾಹೇಬರು ಎರಡೂ ಕೊಲೆಗಳ ಸೂಕ್ಷ್ಮ ವಿಚಾರಣೆ ಮಾಡಿ, ರಮಾದೇವಿ-ಸುರೇಂದ್ರರು ನಿರಪರಾಧಿಗಳಿರುವರೆಂದು ಮನವರಿಕೆ ಮಾಡಿಕೊಂಡಿದ್ದರು. ಕೃಷ್ಣರಾಯರು ಪೋಲೀಸ ಅಧಿಕಾರಿಗಳನ್ನು ಕೈಯಲ್ಲಿ ತೆಗೆದುಕೊಂಡು, ನಿರಪರಾಧಿಗಳಾದ ರಮಾದೇವಿ-ಸುರೇಂದ್ರರಾಯರನ್ನು ಅಪರಾಧಿಗಳೆಂದು ಸಿದ್ಧ ಮಾಡಲಿಕ್ಕೆ ಯಾವ ಯಾವ ತಂತ್ರಗಳನ್ನು ಮಾಡಿರುವ

ವೆಂಬದು ಪೋಲೀಸ ಸಾಹೇಬರಿಗೆ ಗೊತ್ತಾಯಿತು. ಅವರು ಸೂಕ್ಷ್ಮವಿಚಾರಣೆ ಮಾಡಿ, ತಮ್ಮ ಸತ್ಯವೂ ಸ್ಪಷ್ಟವೂ ಆದ ಅಭಿಪ್ರಾಯವನ್ನು ನ್ಯಾಯಾಧೀಶರಿಗೆ ತಿಳಿಸಿದ್ದರು. ಪೋಲೀಸ ಸಾಹೇಬರ ಈ ರಿಪೋರ್ಟಿನ ಸಂಗತಿಯು ಹೇಗೋ ಕೃಷ್ಣರಾಯರಿಗೂ ತಿಳಿಯಿತು. ಕೂಡಲೆ ಅವರು ಎದೆಯೊಡೆದರು. ನಿಸ್ಪೃಹವೃತ್ತಿಯ ಪೋಲೀಸ ಸಾಹೇಬರಲ್ಲಿ ತಮ್ಮ ವಶೀಲೆಯು ನಡೆಯುವದಿಲ್ಲೆಂದು ಕೃಷ್ಣರಾಯರು ಸ್ಪಷ್ಟವಾಗಿ ತಿಳಿದಿದ್ದರು. ಮುಂದೆ ಏನು ಮಾಡಬೇಕೆಂಬದು ತಿಳಿಯದೆ ಅವರು ಹುಚ್ಚರಂತಾದರು!

ಕೃಷ್ಣರಾಯರು ನಿರಪರಾಧಿಗಳನ್ನು ಲಂಚದ ಯೋಗದಿಂದ, ಅಪರಾಧಿಗಳನ್ನು ಮಾಡಿ ಸೆರೆಮನೆಯಲ್ಲಿ ಹಾಕಿಸಿದ್ದರಿಂದ, ವಿಜಯನಗರದ ತುಂಬ ಕೋಲಾಹಲವೆದ್ದಿತು. ಮೊದಲೇ ಶಾಲೆಯ ಸಾಹೇಬರ ವಿಷಯಕ್ಕೆ ಪ್ರಜೆಗಳು ವಿಮನಸ್ಕರಾಗಿದ್ದರು. ಈ ಘಟನೆಯಿಂದಂತೂ ಅವರು ಸಂತಪ್ತರಾದರು. ಎಷ್ಟೋ ಹೊಟ್ಟೆಯುರುಕ ಜನರು ಅವರನ್ನು ಎದುರಿಗೇ ನಿಂದಿಸತೊಡಗಿದರು. ಬೆಂದ ಹೃದಯದವರೂ, ನೊಂದ ಮನದವರೂ ಆದ ಜನರು ಪ್ರಜಾಪ್ರಮುಖರ ಬೆನ್ನುಬಿದ್ದು ಕೃಷ್ಣರಾಯರ ಪಾರುಪತ್ಯ ಮಾಡಬೇಕೆಂದು ಬೇಡಿಕೊಳ್ಳಹತ್ತಿದರು. ವರ್ತಮಾನಪತ್ರಗಳಂತು ಬಹಳೇ ಕೋಲಾಹಲವೆಬ್ಬಿಸಿದವು. ದಿವಾಣ ಮಾಧವರಾಯನ ಕೈಯಲ್ಲಿ 'ಅಡವೀರಾಯಕೃತ ರಾಧಾ-ಕೃಷ್ಣ ಪ್ರೇಮವಿಲಾಸವು' ದೊರೆತ ಮೇಲಂತೂ ಈ ಕೋಲಾಹಲಕ್ಕೆ ಮತ್ತಿಷ್ಟು ಭೀಷಣಸ್ವರೂಪವು ಪ್ರಾಪ್ತವಾಯಿತು. ಈ ಪ್ರಜಾಧ್ವನಿಯು ಕೃಷ್ಣರಾಯರಿಗೆ ಪ್ರಳಯಕಲ್ಲೋಲದಂತೆ ಭಾಸವಾಯಿತು. ಎಷ್ಟು ಸಣ್ಣ ಕೆಲಸವು ಪರ್ವತಪ್ರಾಯವಾಯಿತಲ್ಲ! ಎಂದು ಅವರು ಒಂದೇಸವನೆ ಕುದಿಯತೊಡಗಿದರು.

ಸಾಹೇಬರು ಮುಂಜಾನೆಯ ಚಹಾ-ಉಪಹಾರಕ್ಕೆ ತಮ್ಮ ರಾಧಾದೇವಿಯ ಮನೆಗೇ ಹೋದರು. ರಾಧಾದೇವಿಯು ಅಡವೀರಾಯನಿಂದ ಉಪಹಾರವನ್ನು ಸಿದ್ಧಪಡಿಸಿ, ತನ್ನ ಕೈಮುಟ್ಟಿ ಅವರಿಗೆ ಬಡಿಸಿದಳು. ಈಗಂತು ರಾಧಾದೇವಿಯು ಪರೀಕ್ಷಕಳಾಗಿದ್ದಳು. ಮೊದಲು ಹಾಗೂ ಹೀಗೂ ಮಾಡುತ್ತಿದ್ದ ಅಲ್ಪಸ್ವಲ್ಪ ಮನೆಗೆಲಸಗಳು ಈಗ ಅಡವೀರಾಯನ ಕೊರಳಿಗೇ ಬಿದ್ದಿದ್ದವು. ಅಡಿಗೆ, ನೀರು, ಕಸಕಡ್ಡಿ, ಮುಸುರೆ, ಸಾರಣೆ, ಉಪಕರಣೆ, ಹಾಸುವದು, ದೀಪ ಹಚ್ಚುವದು, ಒಗೆಯುವದು (ತನ್ನ ಹೆಂಡತಿಯ ಅರಿವೆಗಳನ್ನು ಸಹ) ಮೊದಲಾದವುಗಳ ಭಾರವು ಅಡವೀರಾಯನ ಮೇಲೆಯೇ ಬಿದ್ದಿತ್ತು. ಹೆಂಡತಿಯು ಉಣ್ಣುವದಕ್ಕಿಂತ ಮುಂಚಿತವಾಗಿ ಅವನು ಎಂದೂ

ಉಣ್ಣುತ್ತಿದ್ದಿಲ್ಲ. ಅವಳು ಊರಿಗೆ ಇಲ್ಲವೆ ಸಾಹೇಬರ ಮನೆಗೆ ಹೋದರೆ ಮನೆಯಲ್ಲಿ ಹಿಂಡಿ-ರೊಟ್ಟಿಗಳ ಮೇಲೆಯೆ ಅವನು ಅಂದಿನ ಊಟವನ್ನು ನಡೆಯಿಸಬೇಕಾಗುತ್ತಿತ್ತು. ಹೆಂಡತಿಗೆ ಎದುರುತ್ತರ ಕೊಡುವದು ಅವನಿಗೆ ಗೊತ್ತಿದ್ದಿಲ್ಲ. ಅವನು ಯಾವಾಗಲೂ ಪತ್ನಿಯೊಡನೆ ಸೌಮ್ಯತನದಿಂದ ನಡೆಕೊಳ್ಳುತ್ತಿದ್ದನು. ಅವಳು ಏನು ಅಡಿದರೂ, ಹೇಗೆ ಬೈದರೂ ನಗೆಮೊಗದಿಂದ ಸಹನಮಾಡಿಕೊಳ್ಳುತ್ತಿದ್ದನು. ಅಡವಿಯು ಹೀಗೆ ಪತ್ನಿನಿಷ್ಠೆಯುಳ್ಳವನಾಗದಿದ್ದರೆ ನಡೆಯುವಂತಿದ್ದಿಲ್ಲ. ವಿಲಾಸಮಂದಿರದಲ್ಲಿ ಸಾಹೇಬರೂ ಅವರ ರಾಣೀಸಾಹೇಬರೂ ಒಂದೇ ಮೇಜಿನ ಬಳಿಯಲ್ಲಿ ಕುಳಿತು ಉಪಹಾರ ನಡೆಯಿಸಿದ್ದರು. ನಗುವದು ಕೆಲೆಯುವದು ನಡೆದಿತ್ತು. ಅದರ ಗೊಡವೆ ಅಡವೀರಾಯನಿಗೇನು? ಅವನು ಸಾಹೇಬರ ಹಾಗು ರಾಣೀಸಾಹೇಬರ ನೌಕರನು!

ಉಪಹಾರ ತೀರಿತು. ತಾಂಬೂಲ ಭಕ್ಷಣ ಧೂಮಪಾನವಾಯಿತು. ಅಷ್ಟರಲ್ಲಿ—'ಕರ್ನಾಟಕವೈಭವ-ಶಾಲೇಸಾಹೇಬರ ತಾಂಡವ! ಜನವಾಣಿ-ತಪ್ಪುಗಾರರಾದ ಶಾಲೇ ಸಾಹೇಬರು!-ಬೆಲೆ ಅರ್ಧ ಅಣೆ' ಎಂದು ಕೂಗುತ್ತ ವರ್ತಮಾನಪತ್ರ ಮಾರುವವನು ರಾಧಾದೇವಿಯ ಮನೆಯ ಮುಂದಿನ ಬೀದಿಯಲ್ಲಿ ನಡೆದಿದ್ದನು. ವೃತ್ತಪತ್ರ ಮಾರುವವರ ಈ ಕೂಗು ಸಾಹೇಬರ ಎದೆಯನ್ನು ಅದುರಿಸಿತು. ಅವರು 'ರಾಧಾ, ಏನಿದು ಕೋಲಾಹಲ! ಕರ್ನಾಟಕ ವೈಭವ-ಜನವಾಣಿ ಎರಡೂ ಪತ್ರಗಳನ್ನು ಕೊಂಡು ತಕ್ಕೊಂಡು ಬಾ. ಯಾವ ಸಂಗತಿಯು ಪ್ರಸಿದ್ಧವಾಗಿರುವದೋ ನೋಡೋಣ.'

'ಅಡವೀ!' ರಾಧಾದೇವಿಯು ಕೂಗಿದಳು.

ಅಡವೀರಾಯನು 'ಜೀ, ಸರಕಾರ!' ಎಂದು ಕೈ ಜೋಡಿಸಿಕೊಂಡು ಎದುರಿಗೆ ನಿಂತನು.

'ಇದೊಂದು ಅಣೆ ಕೊಟ್ಟು ಕರ್ನಾಟಕವೈಭವ-ಜನವಾಣಿಗಳನ್ನು ತೆಗೆದುಕೊಂಡು ಬಾ.'

'ಆಜ್ಞಾ ಮಹಾನ್!' ಅಂದು ಅಡವಿರಾಯನು ಅಣೆ ತೆಗೆದುಕೊಂಡು ಹೋದನು. ಕೆಲವು ನಿಮಿಷಗಳಲ್ಲಿ ವೃತ್ತಪತ್ರಗಳನ್ನು ತಂದು ಮೇಜಿನ ಮೇಲಿಟ್ಟು ಮನೆ ಲಸಕ್ಕೆ ತೆರಳಿದನು.

ಸಾಹೇಬರು ಮೊದಲು ಕರ್ನಾಟಕವೈಭವಪತ್ರವನ್ನೋದತೊಡಗಿದರು.

'ಶಾಲೆಯ ಸಾಹೇಬರ ತಾಂಡವ!

ಶಿಕ್ಷಣ ಸಂಸ್ಥೆಯ ಸರ್ವಾಧಿಕಾರಿಗಳಾದ ರಾವಸಾಹೇಬ ಕೃಷ್ಣರಾಯರು ವಿದ್ಯಾಸಂಸ್ಥೆಯ ವಿಘಾತರೆಂಬದು ಸರ್ವಶ್ರುತವು. ಇವರು ಶಿಕ್ಷಣಸಂಸ್ಥೆಯನ್ನು

ಗೋಕುಲವನ್ನಾಗಿ ಮಾಡಿಬಿಟ್ಟದ್ದು ಎಲ್ಲರಿಗೆ ಗೊತ್ತಿದ್ದ ಮಾತು. ಇವರು ಸೌ. ವನಿತೆಯರನ್ನೂ ಕುಮಾರಿ ಕುಸುಮಾವತಿಯರನ್ನೂ ಮುಖ್ಯ ಶಿಕ್ಷಕಿಯರನ್ನು ಮಾಡಿರುವರು. ಸ್ಕೂಲ ಮಿಸ್ಟ್ರೆಸ್ಸ ರಾಧಾದೇವಿಯವರು ಪರೀಕ್ಷಕ ಸ್ಥಳದಲ್ಲಿ ನಿಯಮಿಸಲ್ಪಟ್ಟಿರುವರು. ಇದಕ್ಕಿಂತ ಮೊದಲು ಸೋಫಿಯಾಬೇಗಮ ಎಂಬವರು ಉರ್ದೂ ಹೆಣ್ಣು ಹುಡುಗಿಯರ ಶಾಲೆಯ ಪರೀಕ್ಷಕಿಯರಾಗಿರುವರು. ಇವರು ಕೊತ್ವಾಲ ಬದ್ರುದ್ದೀನಖಾನರ ಭಗಿನಿಯರು. ಮೊದಲು ಶಿಕ್ಷಕಿಯರಾಗಿದ್ದು, ಸಾಹೇಬರ ಪ್ರೇಮಕಟಾಕ್ಷಕ್ಕೆ ಹೇಸಿ ನೌಕರಿಯನ್ನು ಬಿಟ್ಟಿದ್ದರು; ಆದರೆ ಕೊಲೆಯ ಪ್ರಕರಣವೆದ್ದ ಮೇಲೆ ಅವರನ್ನು ಒಮ್ಮೆಲೆ ದೊಡ್ಡ ಸ್ಥಳಕ್ಕೆ ಒಯ್ದುದ್ದು ನೋಡಿದರೆ ವಿಸ್ಮಯವಾಗುವದು.

ರಾಧದೇವಿಯವರಂತು ಸಾಹೇಬರ ಪೂರ್ಣ ಕೃಪೆಯೊಳಗಿನವರು. ಪತಿಯು ಕಃಪದಾರ್ಥವೆಂದು ಬಾವಿಸಿ, ಸಾಹೇಬರ ಸೇವೆಯಲ್ಲಿ ದೇಹವನ್ನು ಸನಿಸುವಂಥವರು. ಕುಮಾರಿ ಕುಸುಮಾವತಿಯವರ ಅಕ್ಕಂದಿರಾದ ಸಿಸ್ಟರ ಗುಲಾಬಿಯವರು ರುಗ್ಣಾಲಯದಲ್ಲಿ ರಾಧಾದೇವಿಯವರಿಗೆ ಹಾಗು ಸಾಹೇಬರಿಗೆ ಅನಂತ ಉಪಕಾರವನ್ನು ಮಾಡಿದವರು. ಸೌ. ವನಿತೆಯವರು ರಾಧಾದೇವಿಯವರ ಪ್ರೇಮಪಾತ್ರರು ಶ್ರೀಮತಿ ಚಂಪಾವತಿಯವರು ಕೃಷ್ಣರಾಯರ ಪ್ರೇರಣೆಯಿಂದ ಕೊಲೆಯ ಪ್ರಕರಣದಲ್ಲಿ ಕಾಯಾ-ವಾಚಾ-ಮನಸ್ಸಿನಿಂದ ಪೋಲೀಸ ಅಧಿಕಾರಿಗಳ ಇಚ್ಛೆಯನ್ನು ಪೂರ್ಣಮಾಡಿದವರು. ಬದ್ರುದ್ದೀನಖಾನರು ಕೊಲೆಯ ಪ್ರಕರಣದಲ್ಲಿ ಪೂರ್ವವನ್ನು ಪಶ್ಚಿಮ ಮಾಡಿದವರಾದ್ದರಿಂದ, ಸೋಫಿಯಾ ಬೇಗಮರು ಕೃಷ್ಣರಾವ ರಾವಸಾಹೇಬರ ಅನುಗ್ರಹಕ್ಕೆ ಪಾತ್ರರಾದುದರಲ್ಲಿ ವಿಸ್ಮಯವಿಲ್ಲ. ಉಪಕಾರಕ್ಕೆ ಪ್ರತ್ಯುಪಕಾರ ಮಾಡುವದರಲ್ಲಿ ಸಾಹೇಬರು ಬಲು ದಕ್ಷರು.

ಶಾಲೇ ಸಾಹೇಬರ ಈ ತಾಂಡವದ ಕಡೆಗೆ ಸರಕಾರವು ಲಕ್ಷ್ಯಗೊಡದಿದ್ದರೆ ಪ್ರಜೆಗಳಲ್ಲಿ ಅಸಂತೋಷವು ಪ್ರಜ್ವಲಿಸುವದು. ಒಂದು ವಾರದಲ್ಲಿ ಎಲ್ಲ ವಿಷಯಗಳ ವಿಚಾರಣೆಯಾಗದಿದ್ದರೆ ವಿಜಯನಗರದ ಶಾಲೆಗಳಲ್ಲಿ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಒಬ್ಬರಾದರೂ ಪ್ರವೇಶ ಮಾಡಲಿಕ್ಕಿಲ್ಲ. ಅನೀತಿಯ ಹಾಗು ವಾರಾಂಗನೆಯರನ್ನು ಹೋಲುವ ಶಿಕ್ಷಕಿಯರೂ, ವಿಟರಾಜರಂತಹ ಶಿಕ್ಷಕರೂ ಇದ್ದ ಶಾಲೆಗಳಲ್ಲಿ ಶಿಕ್ಷಣ ಹೊಂದುವ ವಿದ್ಯಾರ್ಥಿ-ವಿದ್ಯಾರ್ಥಿನಿಯರ ನೈತಿಕ ಧರ್ಮಕ್ಕೆ ಹ್ರಾಸವುಂಟಾಗುವ ಸಂಭವವಿರುವದು. ಆದ್ದರಿಂದ ಶಾಲೇ ಸಾಹೇಬರ ತಾಂಡವದ ವಿಚಾರಣೆಯು ಆಗಲಿಕ್ಕೇ ಬೇಕು. ಸರಕಾರವು ಇತ್ತ ಕಡೆಗೆ ದುರ್ಲಕ್ಷ್ಯ ಮಾಡಿದರೆ ಪ್ರಸಂಗವು ಕಠಿಣವಾಗುವದು. ಒಬ್ಬ ನಗರವಾಸಿ.'

ಅನಂತರದಲ್ಲಿ ಸಾಹೇಬರು ಜನವಾಣಿ ಪತ್ರವನ್ನೋದತೊಡಗಿದರು.

ತಪ್ಪುಗಾರರಾದ ಶಾಲೇ ಸಾಹೇಬರು!

ರಾಧಾದೇವಿ ರತ್ನಪುರ, ಸ್ಕೂಲ ಮಿಸ್ಟ್ರೆಸ್ ವಿಜಯನಗರ ಇವರ ಕೊಲೆಯ ಪ್ರಯತ್ನ ಮಾಡಿದ ಅಪರಾಧದಿಂದ ಸುರೇಂದ್ರರಾಯರೆಂಬ ಶಿಕ್ಷಕರು ಹಿಡಿಯಲ್ಪಟ್ಟಿರುವರು. ಪ್ರತ್ಯಕ್ಷ ರಾವಸಾಹೇಬ ಕೃಷ್ಣರಾಯರ ಕೊಲೆಯ ಪ್ರಯತ್ನ ಮಾಡಿದ್ದಕ್ಕಾಗಿ ಸುರೇಂದ್ರರಾಯರ ಪತ್ನಿಯವರಾದ ರಮಾದೇವಿಯವರು ಹಿಡಿಯಲ್ಪಟ್ಟಿರುವರು. ಎರಡೂ ಪ್ರಕರಣಗಳ ವಿಚಾರಣೆಯು ನ್ಯಾಯಾಧೀಶರ ಚಾವಡಿಯಲ್ಲಿ ಇನ್ನೆರಡು ದಿನಕ್ಕೆ ನಡೆಯುವದೆಂಬ ವಾರ್ತೆ.

ರಾಧಾದೇವಿ-ಕೃಷ್ಣರಾಯರ ಕೊಲೆಯ ಪ್ರಯತ್ನ ನಡೆದ ಸಂಗತಿಯು ನಿಜ; ಆದರೆ ಆ ತಪ್ಪಿಗಾಗಿ ಹಿಡಿಯಲ್ಪಟ್ಟ ವ್ಯಕ್ತಿಗಳು ನಿರಪರಾಧಿಗಳು. ಕೊಲೆಯ ಪ್ರಕರಣದಲ್ಲ ಅವರಿಬ್ಬರ ಸಂಬಂಧವು ಯಾವ ವಿಧದಿಂದಲೂ ಇರುವದಿಲ್ಲ. ರಾವಸಾಹೇಬ ಕೃಷ್ಣರಾಯರು ತಮ್ಮ ಅಗಾಧವಾದ ಬುದ್ಧಿ-ಕೌಶಲ್ಯವನ್ನು ವೆಚ್ಚ ಮಾಡಿ ರಮಾದೇವಿ-ಸುರೇಂದ್ರರಾಯರು ಅಪರಾಧಿಗಳೆಂಬ ಬಗ್ಗೆ ಕಲ್ಪಿತ ಸಾಕ್ಷಿಗಳನ್ನು ನಿರ್ಮಾಣ ಮಾಡಿದರು ರಮಾದೇವಿಯವರು ಕೆಲವು ದಿನಗಳ ಹಿಂದೆ ಶಿಕ್ಷಕಿಯರಾಗಿ ನಿಯಮಿಸಲ್ಪಟ್ಟಿದ್ದರು; ಆದರೆ ಅವರು ಶಾಲೇ ಸಾಹೇಬರ ಕಾಮದೇವನ ಕಾರಭಾರದಲ್ಲಿ ತೊಡಗದ್ದರಿಂದ, ಸ್ವಲ್ಪ ದಿನಗಳಲ್ಲಿ ನೌಕರಿಯಿಂದ ನಿವೃತ್ತಿಹೊಂದಿದರು. ಸ್ಕೂಲ ಮಿಸ್ಟ್ರೆಸ್ಸ ರಾಧಾದೇವಿಯವರ ಕೊಲೆಯ ಪ್ರಯತ್ನ ನಡೆಯಲಿಕ್ಕೆ ರಾವಸಾಹೇಬ ಕೃಷ್ಣರಾಯರೇ ಕಾರಣರು. ರಾಧಾದೇವಿಯವರು ಕೃಷ್ಣರಾಯರನ್ನು ಪ್ರಸನ್ನಗೊಳಿಸುವದಕ್ಕಾಗಿ ತಮ್ಮ ಶೀಲವನ್ನು ಸೂರೆಮಾಡಿಕೊಂಡದ್ದಲ್ಲದೆ, ಅನೇಕ ಕುಲ ವಧುಗಳ ಪಾವಿತ್ರ್ಯವನ್ನು ಹಾಳು ಮಾಡಿರುವರು ರಾವಸಾಹೇಬರು ಅತ್ಯಾಚಾರಿಗಳಾದುದರಿಂದಲೇ ಅವರ ಕೊಲೆಯ ಪ್ರಯತ್ನವು ನಡೆಯಿತು. ಸ್ಕೂಲ ಮಿಸ್ಟ್ರೆಸ್ಸರ ಕೊಲೆಯ ಪ್ರಯತ್ನ ನಡೆಯಲಿಕ್ಕೂ ಸಾಹೇಬರೇ ಕಾರಣರು.

ರಾಧಾದೇವಿ-ಸ್ಕೂಲ ಮಿಸ್ಟ್ರೆಸ್ಸರು ತಮ್ಮ ಪಾವಿತ್ರ್ಯವನ್ನು ಕೃಷ್ಣರಾಯರ ಅಡಿದಾವರೆಗೆ ಕಾಣಿಕೆಯರ್ಪಿಸಿದ್ದಕ್ಕೆ ಅವರ ಕುಮಾರನಾದ ಗಿರಿಮಾಜಿಯು ಸಾಕ್ಷೀಭೂತನಾಗಿರುವನು. ರಾವಸಾಹೇಬ ಕೃಷ್ಣರಾಯರ ಅನನ್ವಿತ ಕೃತ್ಯಗಳು ಹೇರಳವಾಗಿರುವವು. ಕೊಲೆಗಡುಕರು ಅವರ ಕೃತ್ಯಕ್ಕೆ ಸಂತಪ್ತರಾಗಿ ಕೊಲೆಗೆಲಸವನ್ನು ಮಾಡಲು ಪ್ರವೃತ್ತರಾದರು. ಅಪರಾಧಿಗಳೆಂದು ಹಿಡಿಯಲ್ಪಟ್ಟವರು ನಿರಪರಾಧಿಗಳೆಂಬದನ್ನು ಸಿದ್ಧಪಡಿಸುವಷ್ಟು ಆಧಾರಗಳು ನಮ್ಮ ಬಳಿಯಲ್ಲಿವೆ. ಶಾಲೇ ಸಾಹೇಬರೇ ನಿಜವಾದ ತಪ್ಪುಗಾರರೆಂಬದನು

ಸಿದ್ಧಪಡಿಸುವದಕ್ಕೂ ನಾವು ಸಿದ್ಧರಿದ್ದೇವೆ. ನ್ಯಾಯಾಧೀಶರ ಚಾವಡಿಯಲ್ಲಿ ನ್ಯಾಯದ ಕೊಲೆಯಾಗಬಾರದೆಂದು ಈ ಲೇಖದಿಂದ ಸೂಚಿಸಿರುವೆವು.

ವಿಜಯನಗರದ ಕೆಲವು ಜನ ನಾಗರಿಕರು.

ಎರಡೂ ಲೇಖಗಳನ್ನು ಓದಿದ ಕೂಡಲೆ ಕೃಷ್ಣರಾಯರ ಎದೆಯೊಡೆಯಿತು. ಆಗ ಅವರು—'ರಾಧೆ, ವೃತ್ತಪತ್ರಿಕೆಗಳು ನನ್ನ ಮರ್ಯಾದೆಯನ್ನು ಉಳಿಸುವ ಚಿಹ್ನವು ತೋರುವದಿಲ್ಲ. ನಾಗರಿಕರಲ್ಲಿಯೂ ಭಯಂಕರವಾದ ಕೋಲಾಹಲವೆದ್ದಿದೆ. ಪೋಲೀಸ ಸುಪರಿಂಟೆಂಡೆಂಟ ಸಾಹೇಬರು ಸೂಕ್ಷ್ಮವಿಚಾರಣೆ ಮಾಡಿ ತಮ್ಮ ಅಭಿಪ್ರಾಯದ ರಿಪೋರ್ಟನ್ನು ನ್ಯಾಯಾಧೀಶರ ಕಡೆಗೆ ಕಳುಹಿಸಿರುವರಂತೆ. ಅವರು ನನ್ನ ಮೇಲೆ ಅಪರಾಧವನ್ನು ಹೊರಿಸಿರುವರಂತೆ. ವಕೀಲಿಯ ಕೆಲಸವು ನಿಂತಿತು. ಬದ್ರುದ್ದೀನಖಾನ, ಕೇದಾರನಾಥ, ಡಾಕ್ಟರ ಮೊದಲಾದವರು ಸಹ ಎದೆಯೊಡೆದಿರುವರು. ಪ್ರಸಂಗವು ಕಠಿಣವೆಂಬಂತೆ ಭಾಸವಾಗಹತ್ತಿದೆ.'

'ರಾಯರೆ!' ರಾಧಾದೇವಿಯು ಭಯಕಾತರಳಾಗಿ—'ಇಷ್ಟು ದಿನಗಳ ನಂತರ ನಮ್ಮ ಕೃತ್ಯಗಳೆಲ್ಲ ಬೈಲಿಗೆ ಬೀಳುವ ಲಕ್ಷಣವು ತೋರಹತ್ತಿರುವದು. ಈ ಗಂಡಾಂತರದಿಂದ ಪಾರಾಗಲಿಕ್ಕೆ ಬರುವಂತಿಲ್ಲವೇನು?'

'ನಾನು ದಿಙ್ಮೂಢನಾಗಿರುವೆನು. ಬದ್ರುದ್ದೀನಖಾನ, ಕೇದಾರನಾಥ ಮೊದಲಾದ ಪೋಲೀಸ ಅಧಿಕಾರಿಗಳೂ ಸಹ ತಮ್ಮ ಮೇಲೆ ಯಾವ ಪ್ರಸಂಗ ಒದಗುವದೋ, ಎಂದು ಎದೆಯೊಡೆದಿರುವರು.'

'ನನಗೆ ಒಂದು ಹಂಚಿಕೆ ತೋಚುವದು.'

'ಅದೇನು?' ಕೃಷ್ಣರಾಯರು ಉತ್ಕಂಠೆಯಿಂದ ಕೇಳಿದರು.

'ನಮ್ಮ ರಾಜರು ನಿಮ್ಮ ಆಪ್ತಕೋಟಿಯೊಳಗಿನವರು. ಅವರನ್ನು ಕಂಡು, ಈ ಪ್ರಕರಣದ ವಿಚಾರಣೆಯಾಗದಂತೆ ವ್ಯವಸ್ಥೆ ಮಾಡಿಬಿಡಿರಿ. ಸುರೇಂದ್ರ-ರಮೆಯರು ಮುಕ್ತರಾಗಿ ಹೋಗಲೊಲ್ಲರೇಕೆ?'

'ಹಾಗೆ ಮಾಡಲಿಕ್ಕೆ ಬರುವಂತಿಲ್ಲ. ರಾಜರು ನಮ್ಮ ಆಪ್ತಕೋಟಿಯೊಳಗಿನವರು ನಿಜ; ಆದರೆ ಈ ಪ್ರಕರಣದಲ್ಲಿ ಅವರು ಕೈ ಹಾಕುವ ಲಕ್ಷಣ ತೋರಲೊಲ್ಲದು. ನ್ಯಾಯಾಧೀಶರಿಗೆ ವಶೀಲಿ ಹಚ್ಚಿದರೆ ಒಳಿತಾಗುವದು. ಆ ಪ್ರಯತ್ನವನ್ನು ನಡೆಯಿಸಿರುವೆನು. ಏನಾಗುವದೋ ನೋಡಬೇಕು.'

'ನೀವು ನ್ಯಾಯಾಧೀಶರನ್ನು ಕಂಡು, ನಿಮ್ಮ ಹಾಗು ನನ್ನ ಮರ್ಯಾದೆಗೆ ಕಲಂಕ ಹತ್ತುವಂತಹ ಪ್ರಸಂಗವು ಬೈಲಿಗೆ ಬಾರದಂತೆ ಮಾಡಬೇಕೆಂದು ಹೇಳಿರಿ. ಅವರು ನಿಮ್ಮ ಸ್ನೇಹಿತರಿರುವದರಿಂದ, ಈ ಕೆಲಸದಲ್ಲಿ ಅವರು

ನಿಮ್ಮ ಹೇಳಿಕೆಯಂತೆ ನಡೆಯಬಹುದು.'

'ಒಳ್ಳೇದು. ಅವರಿಗೆ ಭೆಟ್ಟಿಯಾಗಿ ಪರ್ಯಾಯದಿಂದ ಎಲ್ಲ ವಿಷಯುಗಳನ್ನು ತಿಳಿಸುವೆನು' ಎಂದು ಕೃಷ್ಣರಾಯರು ನುಡಿದು, ರಾಧಾದೇವಿಯ ಮನೆಯಿಂದ ಹೊರಟರು.

---

## ನ್ಯಾಯಮಂದಿರದಲ್ಲಿ.

ಇಂದು ರಮಾದೇವಿ-ಸುರೇಂದ್ರರಾಯರ ಅಪರಾಧದ ವಿಚಾರಣೆಯಾಗ ತಕ್ಕದ್ದಿತ್ತು. ಗೋವರ್ಧನರಾಯ, ಮಾಧವರಾಯ, ಚಂಪಾವತಿ, ಅಡವೀರಾಯ ಮೊದಲಾದವರು ಅಪರಾಧದ ವಿಚಾರಣೆಯನ್ನು ನೋಡಲಿಕ್ಕೆ ನ್ಯಾಯಸಭೆಗೆ ಬಂದಿದ್ದರು. ನ್ಯಾಯಾಧೀಶರು ಉಚ್ಚಾಸನದಲ್ಲಿ ಕುಳಿತಿದ್ದರು. ಎದುರಿಗೆ ಅಪರಾಧಿಗಳಾದ ರಮಾದೇವಿ-ಸುರೇಂದ್ರರಾಯರು ನಿಲ್ಲಿಸಲ್ಪಟ್ಟಿದ್ದರು. ನ್ಯಾಯಾಧೀಶರು ಅವರನ್ನು ನಿರೀಕ್ಷಿಸಿದರು. ಅವರಿಬ್ಬರೂ ಸಚ್ಛೀಲ ದಂಪತಿಗಳೆಂದು ಅವರ ಮುಖಚರ್ಯೆಯಿಂದಲೆ ಅರಿತರು. ಆಗ ಅವರು ಸುರೇಂದ್ರರಾಯರನ್ನು ಕುರಿತು-'ರಾಧಾದೇವಿ ರತ್ನಪುರ, ಸ್ಕೂಲ ಮಿಸ್ಟ್ರೆಸ್ ಇವರ ಕೊಲೆಯ ಪ್ರಯತ್ನ ಮಾಡಿದ ಬಗ್ಗೆ ನಿಮ್ಮ ಮೇಲೆ ಅಪರಾಧವು ಹೊರಿಸಲ್ಪಟ್ಟಿರುವದು. ನೀವು ರಾಧಾದೇವಿಯವರ ಕೊಲೆ ಮಾಡ ಹೋದದ್ದು ನಿಜವೆ?'

'ಖಾವಿಂದ, ನಿಜವು. ನಾನು ರಾಧಾದೇವಿಯವರ ಕೊಲೆ ಮಾಡ ಹೋಗಿದ್ದೆನು; ಆದರೆ ಅವರ ದೈವವು ಒಳಿತಾಗಿದ್ದುದರಿಂದ ಪಾರಾದರು. ನನ್ನ ಈ ಅಪರಾಧಕ್ಕಾಗಿ ಖಾವಿಂದರವರು ನನಗೆ ಮರಣದಂಡನೆಯನ್ನು ವಿಧಿಸಬೇಕು; ಇಲ್ಲವೆ ಸಾಯುವವರೆಗೆ ಕರಿನೀರಿನ ಶಿಕ್ಷೆಯನ್ನು ವಿಧಿಸಬೇಕು. ಇಷ್ಟೇ ನನ್ನ ವಿನಂತಿ!'

ಸುರೇಂದ್ರರಾಯನು ಅಪರಾಧವನ್ನು ಮೈಮೇಲೆ ತೆಗೆದುಕೊಂಡದ್ದರಿಂದ ಎಲ್ಲರೂ ಬೆರಗಾದರು. ನ್ಯಾಯಾಧೀಶರೂ ವಿಸ್ಮಯಚಕಿತರಾದರು. ಅಷ್ಟರಲ್ಲಿ ರಮಾದೇವಿಯು ತಾನಾಗಿ—'ಓಹೋ! ನಾನು ಸಾಹೇಬರ ಕೊಲೆ ಮಾಡಿದೆನು. ಅವರು ನನ್ನ ಮರ್ಯಾದೆಯನ್ನು ಕಳೆಯತೊಡಗಿದ್ದರು. ಅದಕ್ಕಾಗಿ ನಾನು ಅವರನ್ನು ಕೊಂದೆನು. ಸಾಹೇಬರು ಸತ್ತರೆ ನನಗೇನು?'

ರಮಾದೇವಿಯ ಮಾತುಗಳನ್ನು ಕೇಳಿ ನ್ಯಾಯಾಧೀಶರೇ ಮೊದಲ್ಗೊಂಡು ಎಲ್ಲರೂ ಬೆರಗಾದರು. ನ್ಯಾಯಾಧೀಶರು ರಮಾದೇವಿಯನ್ನು

ಕುರಿತು—'ಅವ್ಮಾ, ಸಾಹೇಬರು ನಿಮ್ಮ ಮರ್ಯಾದೆಯನ್ನು ಕಳೆಯ ಲುದ್ಯುಕ್ತರಾಗಿದ್ದರೇನು?'

'ಓಹೋ! ನಾನು ಸಾಹೇಬರ ಕೊಲೆ ಮಾಡಿದೆನು. ಅವರು ನನ್ನ ಮರ್ಯಾದೆಯನ್ನು ಕಳೆಯತೊಡಗಿದ್ದರು. ಅದಕ್ಕಾಗಿ ನಾನು ಅವರನ್ನು ಕೊಂದೆನು. ಸಾಹೇಬರು ಸತ್ತರೆ ನನಗೇನು?'

ಮತ್ತೆ ಅದೇ ವಿಧದ ಉತ್ತರವು ಹೊರಟದ್ದನ್ನು ಕೇಳಿ ನ್ಯಾಯಾಧೀಶರ ವಿಸ್ಮಯಕ್ಕೆ ಪಾರಾವಾರವಿಲ್ಲದಾಯಿತು. ಆಗ ಸುರೇಂದ್ರರಾಯನ ಪಕ್ಷದ ವಕೀಲನು—'ಖಾವಿಂದ, ದುಃಖಾತಿರೇಕದಿಂದ ರಮಾದೇವಿಯವರ ತಲೆ ಕೆಟ್ಟಿದೆ. ಸುರೇಂದ್ರರಾಯರು ಒಂದು ಕಾರಣಕ್ಕಾಗಿ ಜೀವದ ಮೇಲೆ ಉದಾಸೀನರಾಗಿರುವರು. ಆದ್ದರಿಂದ ಇಬ್ಬರೂ ಅಪರಾಧವನ್ನು ಮೈ ಮೇಲೆ ತೆಗೆದು ಕೊಂಡಿರುವರು.'

'ಸುರೇಂದ್ರರಾಯರು ಜೀವದ ಮೇಲೆ ಉದಾಸೀನರಾಗಲಿಕ್ಕೆ ಕಾರಣ ವೇನು?' ಎಂದು ನ್ಯಾಯಾಧೀಶರು ವಕೀಲನನ್ನು ಕೇಳಿದರು.

'ರಮಾದೇವಿಯವರು ದುರ್ವರ್ತನಿಗಳಾಗಿರುವರೆಂದು ಯಾರೋ ನೀಚರು ಅವರಿಗೆ ಹೇಳಿರುವರು. ಈ ಪ್ರಕರಣದಲ್ಲಿಯ ಸಾಕ್ಷಿಗಳೆಲ್ಲವೂ ಖೊಟ್ಟಿಯಾಗಿವೆ.'

'ಸಾಕ್ಷಿಗಳು ಖೊಟ್ಟಿಯೆಂದು ಹೇಗೆ ಅನ್ನುತ್ತೀರಿ? ಸಿದ್ಧಮಾಡುವದು ಕಠಿಣವಾದೀತು" ಎಂದು ಕೊತವಾಲ ಬದ್ರುದ್ದೀನಖಾನನು ವಕೀಲನನ್ನು ಕುರಿತು ಗರ್ಜಿಸಿದನು.

ಆಗ ಅಲ್ಲಿಯೇ ನಿಂತ ಅಡವೀರಾಯನು ಮುಂದೆ ಬಂದು 'ಎಲ್ಲವೂ ಖೊಟ್ಟಿಯಾಗಿರುವವು. ನಿಜವಾದ ಅಪರಾಧಿಯು ನಾನು! ರಾಧಾದೇವಿಯ ಕೊಲೆ ಮಾಡಲುಪಕ್ರಮಿಸಿದವನೂ ನಾನೇ; ಸಾಹೇಬರ ಕೊಲೆ ಮಾಡ ಹೋದವನೂ ನಾನೇ!'

'ಇವನು ಯಾರು?' ನ್ಯಾಯಾಧೀಶರು ಬದ್ರುದ್ದೀನಖಾನನನ್ನು ಕೇಳಿದರು. 'ಈತನು ರಾಧಾದೇವಿಯ ಯಜಮಾನನು.'

'ಸರಕಾರ, ನಾನು ನಿಜವಾದ ಅಪರಾಧಿಯೆಂಬ ಬಗ್ಗೆ ಸಿದ್ಧಮಾಡಿ ತೋರಿಸುವೆನು.' ಎಂದು ಅಡವೀರಾಯನು ನುಡಿದು—'ಮಾಧವರಾಯಾ!' ಎಂದು ಕೂಗಿದನು. ಮಾಧವರಾಯನು ಮುಂದೆ ಬಂದನು.

'ನಾನು ಬರೆದ ರಾಧಾ-ಕೃಷ್ಣ ಪ್ರೇಮವಿಲಾಸ ಮಹಾಕಾವ್ಯವನ್ನು ಕೊಡಿರಿ.'

ಮಾಧವರಾಯನು ಆ ಕಾವ್ಯವನ್ನು ಕೊಟ್ಟನು. ಅಡವೀರಾಯನು ಅವನ್ನು ನ್ಯಾಯಾಧೀಶರ ಕಡೆಗೆ ಕೊಟ್ಟು—'ಖಾವಿಂದ, ಇದನ್ನು ಪೂರಾ ಓದಿ ನೋಡಿರಿ.'

ನ್ಯಾಯಾಧೀಶರು ಆ ಕಾವ್ಯವನ್ನು ಓದಿ ನೋಡಿ ಬೆರಗಾದರು! ಆಗ ಅವರು—'ನೀನು ಬರೆದ ಸಂಗತಿಯನ್ನು ಸಿದ್ಧಮಾಡಿ ತೋರಿಸುವೆಯಾ? ರಾವಸಾಹೇಬ ಕೃಷ್ಣರಾಯರು ರಾಧಾದೇವಿಯವರ ಪ್ರಣಯದೇವನೆಂದು ಇದರಲ್ಲಿ ಬರೆದಿರುವೆ. ಈ ಸಂಗತಿಯನ್ನು ನೀನು ಹೇಗೆ ಸಿದ್ಧಮಾಡುವೆ.'

'ರಾಧಾದೇವಿಯ ಮಗನನ್ನು ನೋಡಿದರೆ ನಾನು ಹೇಳಿದ ಮಾತು ನಿಜವಾಗಿ ತೋರುವದು. ಗಿರಿಮಾಜಿಯ ಎಡಗಾಲ ಮೇಲೆ ಕಪ್ಪು ಚಿಹ್ನೆ ಇದೆ. ಬಲಗೈಯಲ್ಲಿ ಆರು ಬೆರಳುಗಳುಂಟು. ಕೃಷ್ಣರಾಯರಲ್ಲಿಯೂ ಈ ಗುರತಗಳಿವೆ. ಹುಡುಗನ ಮುಖವು ಕೃಷ್ಣರಾಯರ ಮುಖವನ್ನು ಅಚ್ಚಳಿಯದ ಹೋಲುತ್ತಿರುವದು. ಹುಡುಗೆಯರ ಒಂದನೇ ನಂಬರ ಶಾಲೆಯಲ್ಲಿ ಒಂದು ಕೋಣೆಯು ರಾಧಾ-ಕೃಷ್ಣರ ವಿಲಾಸಮಂದಿರವು. ಅದನ್ನು ನೋಡಿದರೆ ನಾನು ಹೇಳುವ ಸಂಗತಿಯ ಬಗ್ಗೆ ನಂಬಿಗೆಯಾಗುವದು. ಅಲ್ಲಿ ಕೆಲವು ಭಾವಚಿತ್ರಗಳಿವೆ. ರಾಧಾದೇವಿ-ಕೃಷ್ಣರಾಯರು ಮಂಚದ ಮೇಲೆ ಕುಳಿತು ತೆಗೆಯಿಸಿದ ಭಾವಚಿತ್ರವೊಂದಿರುವದು. ಒಂದು ಚಿತ್ರವಂತು ಬಹು ವಿಚಿತ್ರ ಇದೆ. ಅದರಲ್ಲಿ ರಾಧಾದೇವಿಯು ಮಲಗಿರುವಳು. ಕೃಷ್ಣರಾಯರು ಅವಳ ಕಾಲ ಹತ್ತಿರ ಕುಳಿತು, ಅವಳ ಮೈಮೇಲೆ ಕೈ ಹಾಕಿರುವರು.'

ನ್ಯಾಯಾಧೀಶರು ರಾಧಾದೇವಿಯನ್ನೂ, ಗಿರಿಮಾಜಿಯನ್ನೂ ಕರೆತರುವದಕ್ಕೆ ಕೇದಾರನಾಥನಿಗೆ ಆಜ್ಞೆ ಮಾಡಿದರು. ಹುಡುಗೆಯರ ಶಾಲೆಯ ಕೋಣೆಯನ್ನು ಶೋಧಿಸಿ, ಅಲ್ಲಿಯ ಭಾವಚಿತ್ರಗಳನ್ನು ತರಬೇಕೆಂದು ಬದ್ರುದ್ದೀನಖಾನನಿಗೆ ಆಜ್ಞೆಯಾಯಿತು.

ಅನಂತರದಲ್ಲಿ ಅಡವೀರಾಯನು—'ರಾಧಾ-ಕೃಷ್ಣ ಪ್ರೇಮವಿಲಾಸ ಮಹಾಕಾವ್ಯದಲ್ಲಿ ನಾನು ಎಲ್ಲ ಸಂಗತಿಯನ್ನು ಬರೆದಿರುವೆನು. ಇನ್ನೂ ಕೆಲವು ಹೆಚ್ಚಿನ ಸಂಗತಿಗಳನ್ನು ಹೇಳಬೇಕೆಂದು ನನ್ನ ಇಚ್ಛೆಯಿದೆ. ನಾನು ಹೇಳುವ ಎಲ್ಲ ಸಂಗತಿಗಳನ್ನು ಕೇಳಿದರೆ, ರಮಾದೇವಿಯೂ ಸುರೇಂದ್ರರಾಯನೂ ನಿರಪರಾಧಿಗಳೆಂಬದು ಗೊತ್ತಾಗುವದು.'

'ಒಳ್ಳೇದು. ನೀರು ಏನು ಹೇಳುವಿಯೋ ಹೇಳು.' ಎಂದು ನ್ಯಾಯಾಧೀಶರು ಆಜ್ಞೆಮಾಡಿದರು.

ಅಡವೀರಾಯನು ಮಾತಾಡತೊಡಗಿದನು:-'ಖಾವಿಂದ, ರತ್ನಪುರವು

ನನ್ನ ಹೆಂಡತಿಯ ಊರು. ಅವಳು ಪ್ರಾಯಕ್ಕೆ ಬಂದ ಕೂಡಲೆ ದುರಾಚಾರಿಯಾದ್ದರಿಂದ ಅವಳನ್ನು ಯಾರೂ ವರಿಸಲಿಲ್ಲ. ನಾನೂ ಲಗ್ನಕಾಣದೆ ಕುಳಿತಿದ್ದೆನು. ರಾಧಾದೇವಿಯ ತಂದೆಯು ನನ್ನನ್ನು ರತ್ನಪುರಕ್ಕೆ ಕರೆಯಿಸಿ, ಅವಳೊಡನೆ ಲಗ್ನ ಮಾಡಿದನು. ಲಗ್ನವಾದ ಮೇಲಾದರೂ ಅವಳು ಸದಾಚಾರಿಯಾಗಬಹುದೆಂದು ನಂಬಿದ್ದೆನು; ಆದರೆ ಅವಳು ತನ್ನ ಕಾಯಕವನ್ನು ಬಿಡಲಿಲ್ಲ. ನಾನು ರತ್ನಪುರವನ್ನು ಬಿಟ್ಟು ಇಲ್ಲಿಗೆ ಬಂದು ಕೃಷ್ಣರಾಯರ ಮನೆಯ ಅಡಿಗೆ-ನೀರು ಮಾಡತೊಡಗಿದೆನು. ನನ್ನಲ್ಲಿ ರಾಧಾದೇವಿಯ ಭಾವಚಿತ್ರವಿತ್ತು. ಒಂದು ದಿನ ಅದನ್ನು ತೆಗೆದು ನೋಡುತ್ತ ಕುಳಿತಾಗ, ಕೃಷ್ಣರಾಯರು ಬಂದು, ಆ ಚಿತ್ರವನ್ನು ನೋಡಿ, ಯಾರ ಚಿತ್ರವೆಂದು ಕೇಳಿದರು. ನನ್ನ ಹೆಂಡತಿಯದೆಂದು ನಾನು ಉತ್ತರ ಕೊಟ್ಟೆನು. ಆ ಚಿತ್ರವನ್ನು ನೋಡಿ ಸಾಹೇಬರಲ್ಲಿ ಪಾಪವಾಸನೆಯು ಜಾಗ್ರತವಾಯಿತು. ಅವರು ರಾಧಾದೇವಿಯನ್ನು ಕರೆಯಿಸುವ ಬಗ್ಗೆ ದುಂಬಾಲ ಬಿದ್ದರು. ನಾನು ಅವಳನ್ನು ಕರೆತಂದೆನು. ಅವಳ ರೂಪ-ಲಾವಣ್ಯಗಳನ್ನು ನೋಡಿ ಸಾಹೇಬರು ಅವಳಲ್ಲಿ ಪಾಪದೃಷ್ಟಿಯನ್ನಿಟ್ಟರು. ಅವಳಿಗೆ ಟ್ರೇನಿಂಗ ಶಿಕ್ಷಣ ಕೊಡಿಸಿ, ಮುಖ್ಯ ಸ್ಕೂಲ ಮಿಸ್ಟ್ರೆಸ್‌ನ್ನು ಮಾಡಿದರು. ಅವಳ ಪುಣ್ಯದಿಂದ ನಿರಕ್ಷರ ಕುಕ್ಷಿಯಾಗಿದ್ದ ನಾನೂ ಶಿಕ್ಷಕನಾದೆನು. ನನಗೆ ಓದು-ಬರೆಹದ ಮಟ್ಟಿಗೆ ಶಿಕ್ಷಣವು ಕೊಡಲ್ಪಟ್ಟಿತು. ಶಿಕ್ಷಕನಾದ ಮೇಲೆಯೇ ನಾನು ಓದು-ಬರೆಹ ಕಲಿತೆನು! ರಾಧಾದೇವಿಯು ಮದುವೆಯ ಹೆಂಡತಿಯಂತಾಗದಿದ್ದರೂ, ಕೂಡಿಕೆಯವಳಂತಾದರೂ ನನ್ನೊಡನೆ ವರ್ತಿಸುತ್ತಿದ್ದರೆ, ನಾನು ಧನ್ಯನಾಗುತ್ತಿದ್ದೆನು. ಇತ್ತೀಚೆಗೆ ಬಂಧು-ಬಗಿನಿಯರಂತೆ ನಮ್ಮ ಸಂಬಂಧವು ನೆಲೆಗೊಂಡಿತು. ಹೀಗಿದ್ದರೂ ಅವಳು ಗರ್ಭಿಣಿಯಾದಳು. ಕೃಷ್ಣರಾಯರೊಬ್ಬರಲ್ಲದೆ, ರಾಧಾದೇವಿಯು ಗೋವರ್ಧನರಾಯ, ಆನಂದರಾಯ, ಗೋವಿಂದರಾಯ ಮೊದಲಾದವರ ಸಹವಾಸದಲ್ಲಿದ್ದಳು. ಕೃಷ್ಣರಾಯರು ವರಿಷ್ಠ ಅಧಿಕಾರಿಗಳಿದ್ದುದರಿಂದ ಮಿಕ್ಕವರ ಈ ಸಂಬಂಧವು ಬಹಳ ಗುಪ್ತವಾಗಿತ್ತು. ಕೃಷ್ಣರಾಯರು ನನ್ನ ಮನೆಯಲ್ಲಿ ವಿಲಾಸಮಂದಿರವನ್ನು ನಿರ್ಮಿಸಿ, ರಾಧೆಯೊಡನೆ ನನ್ನ ಸಮಕ್ಷ ಸರಸ-ಸಲ್ಲಾಪಗಳನ್ನಾಡುತ್ತಿದ್ದರು. ಅವರು ಎಷ್ಟೋ ಸಾರೆ ನನ್ನ ಮನೆಯಲ್ಲಿಯೇ ರಾತ್ರಿಗಳನ್ನು ಕಳೆದಿರುವರು. ರಾಧೆಯ ಹಾಗು ನನ್ನ ಸಂಬಂಧವು ಬಂಧು-ಬಗಿನಿಯರಂತಿದ್ದರೂ, ಅವಳು ಗರ್ಭಿಣಿಯಾದಳು. ಬೇರೆಯವರಿಂದ ಜನಿಸಿದ ಮಗುವು ನನ್ನ ಮಗುವೆಂದು ಹೇಳಿಸಿಕೊಳ್ಳಬೇಕೆಂಬ ವಿಚಾರವು ಮನಸ್ಸಿನಲ್ಲಿ ಬಂದ ಕೂಡಲೆ ನನಗೆ ಸಂತಾಪವಾಯಿತು.

ರಾಧೆಯು ತಾನು ಕೆಟ್ಟದ್ದಲ್ಲದೆ ಎಷ್ಟೋ ಕುಲಯುವತಿಯರನ್ನು ಹಾಳುಮಾಡಿ ಬಿಟ್ಟಳು. ಸುರೇಂದ್ರರಾಯರ ಪತ್ನಿಯವರಾದ ರಮಾದೇವಿಯರ ಪಾವಿತ್ರ್ಯ ವನ್ನು ಹಾಳು ಮಾಡಲಿಕ್ಕೆ ರಾಧೆಯು ಬದ್ಧಕಂಕಣಳಾದಳು. ರಮಾದೇವಿ ಯವರು ಪಾವಿತ್ರ್ಯದ ಮೂರ್ತಿಯು! ಸುರೇಂದ್ರರಾಯರು ಸುಜನರು. ಈ ದಂಪತಿಗಳ ಸಂಸಾರವನ್ನು ಹಸಗೆಡಿಸಿಬಿಡಲಿಕ್ಕೆ ರಾಧೆಯು ಸಿದ್ಧಳಾದ ದ್ದರಿಂದ ನನಗೆ ಅತಿರೇಕವಾದ ಸಂತಾಪವಾಯಿತು. ಹೊಟ್ಟೆಯೊಳಗಿನ ಕೂಸು ಸಹಿತವಾಗಿ ಅವಳು ನಾಶವಾಗಬೇಕೆಂದು ನನ್ನ ಇಚ್ಛೆಯಿತ್ತು. ನಾನು ಒಂದು ದಿನ ರಾತ್ರಿ ಅವಳ ಕೋಣೆಗೆ ಹೋಗಿ ಅವಳ ಮುಖದ ಮೇಲೆ ದ್ರಾವಕವನ್ನು ಸುರವಿದೆನು; ಆದರೆ ಅದು ಅವಳ ಮೇಲೆ ಬೀಳಲಿಲ್ಲ. ಅನಂ ತರ ಕಠಾರಿಯಿಂದ ಅವಳನ್ನು ಗಾಯಪಡಿಸಿದೆನು ಅವಳು ಒದರಿ-ಚೀರಿ ಗದ್ದಲ ಮಾಡಿದ್ದರಿಂದ ಜನರು ಬಂದರು. ಕೊಲೆಯ ಕಾರ್ಯವು ಪೂರ್ಣ ವಾಗಿ ನೆರವೇರದ್ದರಿಂದ ನನಗೆ ದುಃಖವಾಯಿತು. ಜನರು ಬರುವದರೊಳಗೆ ನಾನು ಓಡಿ ಹೋದೆನು. ಹೆಂಡತಿಯು ಈ ವಿಧದ ದುರಾಚಾರಿಣಿಯಾದ ದ್ದನ್ನು ಯಾವ ಗಂಡನು ಸಹಿಸುವನು?

ಕೃಷ್ಣರಾಯರು ದೊಡ್ಡ ಅಧಿಕಾರಿಗಳು. ಅವರು ರಮಾದೇವಿಯವರ ಮೇಲೆ ಸಿಟ್ಟಿಗೆದ್ದರು; ಯಾಕೆಂದರೆ, ಅವರು ಸಾಹೇಬರ ಪ್ರಣಯಿನಿಯಾಗ ಲಿಕ್ಕೆ ಸಿದ್ಧರಾಗಲಿಲ್ಲ ಇದೇ ಸಿಟ್ಟಿನ ಮೇಲೆ ಅವರು ರಮಾದೇವಿ-ಸುರೇಂ ದ್ರರಾಯರನ್ನು ಅಪರಾಧಿಗಳನ್ನಾಗ ಮಾಡಿದರು. ಕೊತವಾಲರಂತಹ ಜನರ ವಶೀಲಿ ಹಚ್ಚಿದರು. ಡಾಕ್ಟರರಿಗೂ ನರ್ಸಳಿಗೂ ಲಂಚ ಕೊಟ್ಟರು. ಕೊತ ವಾಲರ ತಂಗಿಯಾದ ಸೋಫಿಯಾ ಬೇಗಮಳು ಪರೀಕ್ಷಕಿಯಾಗಿ ನಿಯಮಿಸ ಲ್ಪಟ್ಟಳು; ಅಂದಮೇಲೆ ರಮಾದೇವಿ-ಸುರೇಂದ್ರರಾಯರು ಕೊಲೆಗಡಕರೆಂದು ಸಿದ್ಧವಾಗಲಿಕ್ಕೆ ತಡವಾಗುವದೆ? ಖೊಟ್ಟಿ ಸಾಕ್ಷಿಗಳು ನಿರ್ಮಾಣವಾದವು.

ರಾವಸಾಹೇಬ ಕೃಷ್ಣರಾಯರ ಆಳಿಕೆಯು ವಿಚಿತ್ರವಾದದ್ದು. ವಿದ್ಯಾ ಸಂಸ್ಥೆಯೊಳಗಿನ ಶಿಕ್ಷಕಿಯರಲ್ಲಿ ನೂರಕ್ಕೆ ತೊಂಭತ್ತು ಜನರಾದರೂ ಅವರ ಮನೋರಥವನ್ನು ಪೂರ್ಣ ಮಾಡಿದವರಿರುವರು. ಯಾರು ಚಲುವೆಯ ರಿಲ್ಲವೋ ಅಂತಹರಿಗೆ ನೌಕರಿಯೇ ಸಿಗುತ್ತಿದ್ದಿಲ್ಲ. ನೌಕರಿ ದೊರೆಯಬೇಕಾದರೆ, ಸಾಹೇಬರ ಮನೋರಥವನ್ನು ಪೂರ್ಣ ಮಾಡಬೇಕಾಗುತ್ತಿತ್ತು. ಅವರು ಮೊದಲು ಸಚ್ಛೀಲರಾಗಿದ್ದರು ರಾಧಾದೇವಿಯಂತಹ ಶಿಕ್ಷಕಿಯ ಹಾಗು ಆನಂದ- ಗೋವಿಂದರಾಯರಂತಹ ಶಿಕ್ಷಕರ ಕರ್ತವ್ಯ ಪ್ರಭಾವದಿಂದ ತಮ್ಮ ಶೀಲವನ್ನು ಮಾರಿಕೊಂಡರು. ಸಾಹೇಬರಿಗೆ ಒಮ್ಮೆ ಆಲಿಂಗನ ಇಲ್ಲವೆ ಒಮ್ಮೆ ಚುಂಬನ

ಕೊಡದಂತಹ ಶಿಕ್ಷಕಿಯರು ಬಹಳ ಮಾಡಿ ಶಿಕ್ಷಣ ಸಂಸ್ಥೆಯಲ್ಲಿ ಇರಲಿಕ್ಕಿಲ್ಲ. ಒಬ್ಬಿಬ್ಬರು ಉಳಿದಿದ್ದರೆ ದೊಡ್ಡ ಮಾತಲ್ಲ. ಸಾಹೇಬರ ಅತ್ಯಾಚಾರವನ್ನು ಸಹಿಸಲಾರದೆ, ಕೆಲವು ಜನ ಶಿಕ್ಷಕಿಯರು ನೌಕರಿಗೆ ಶರಣು ಹೊಡೆದರು; ಕೆಲವು ಶಿಕ್ಷಕಿಯರು ಅಫೀಮು ತಿಂದು ಜೀವ ಕೊಟ್ಟರು!

ಕೃಷ್ಣರಾಯರ ವಿರುದ್ಧವಾಗಿ ಎಷ್ಟೋ ವಿನಂತಿ ಪತ್ರಿಕೆಗಳು ಶಿಕ್ಷಕ-ಶಿಕ್ಷಕಿಯರಿಂದಲೂ, ಊರ ಪ್ರಮುಖ ಜನರಿಂದಲೂ ಸರಕಾರಕ್ಕೆ ಕಳುಹಿಸಲ್ಪಟ್ಟವು; ಆದರೆ ಆ ವಿದ್ಯಾಧಿಕಾರಿಗಳ ಕೃತ್ಯದ ಬಗ್ಗೆ ಸರಕಾರದಿಂದ ಬಿಗಿಯಾಗಲಿಲ್ಲ. ವಿನಂತಿ ಪತ್ರಿಕೆಗಳನ್ನು ಕಳುಹಿಸಿದ ಎಷ್ಟೋ ಶಿಕ್ಷಕ-ಶಿಕ್ಷಕಿಯರು ನೌಕರಿಗೆ ಎರವಾದರು. ಕೆಲವರು ನಾನಾ ವಿಧಧ ಯಾತನೆಗಳನ್ನನುಭವಿಸತೊಡಗಿದರು. ಜವುಳಕೇದಗೀಹಳ್ಳಿ, ಅಗ್ಗಾರಹೊನ್ನೀಹಳ್ಳಿ ಮೊದಲಾದ ಕೆಟ್ಟ ಹವೆ-ನೀರುಗಳ ಹಾಗು ನಿರ್ಜಲ ಪ್ರದೇಶದ ಸ್ಥಳಗಳಿಗೆ ಆ ಶಿಕ್ಷಕ-ಶಿಕ್ಷಕಿಯರು ಕಳಿಸಲ್ಪಟ್ಟರು. ರಾಧಾದೇವಿ-ಆನಂದ-ಗೋವಿಂದರಂತಹ ಜನರ ಹೋಳಿಗೆಗಳು ಮಾತ್ರ ತುಪ್ಪದಲ್ಲಿ ಬೀಳತೊಡಗಿದವು.

ನಾನು ದುರ್ಬಲನು; ಪೌರುಷಹೀನನು. ಅಂತೆಯೆ ಹೆಂಡತಿಯ ಹಾಗು ರಾವಸಾಹೇಬರ ಕೃತ್ಯಗಳಿಗೆ ಶಾಸನ ಮಾಡುವಂತಹ ಧೈರ್ಯವೂ ಶಕ್ತಿಯೂ ನನ್ನಲ್ಲಿ ಬೇಗನೆ ಹುಟ್ಟಲಿಲ್ಲ. ನನ್ನ ಹೆಂಡತಿಯು ರುಗ್ಣಾಲಯದಿಂದ ಮನೆಗೆ ಬಂದ ಕೂಡಲೆ ರಾವಸಾಹೇಬರು ಮನೆಗೆ ಬರತೊಡಗಿದರು. ಅವರಿಬ್ಬರು ಗಂಡ-ಹೆಂಡಿರಂತೆ ವರ್ತನವಿಟ್ಟರು. ಮನೆಯೊಳಗಿನ ಸೇವಕನಿಗಿಂತಲೂ ನನ್ನ ಬೆಲೆಯು ಕನಿಷ್ಠವಾಯಿತು. ನನ್ನ ಕಣ್ಣೆದುರಿಗೇ ಅನೇಕ ವಿಧದ ವಿಲಾಸಗಳು ನಡೆದವು. ರಾವಸಾಹೇಬರು ಉಷೆಯೆಂಬ ತರುಣಿಯ ವಿಷಯವಾಗಿ ಪಾಪಬುದ್ಧಿಯುಳ್ಳವರಾಗಿದ್ದರು. ರಾಧೆಯು ಅವರ ಮನೀಷೆಯನ್ನು ತೃಪ್ತಿಪಡಿಸಲು ಹೊಂಚು ಹಾಕಿದ್ದಳು ಒಂದು ದಿನ ರಮಾದೇವಿಯು ನಮ್ಮ ಮನೆಗೆ ಬಂದು, ತನ್ನನ್ನೂ ತನ್ನ ಪತಿಯನ್ನೂ ಗಂಡಾಂತರದಿಂದ ಪಾರ ಮಾಡಬೇಕೆಂದು ಬೇಡಿಕೊಂಡಳು. ಅವಳನ್ನು ಸಾಹೇಬರ ಕೊರಳಿಗೆ ಕಟ್ಟಬೇಕೆಂದು ರಾಧೆಯು ಸಾಹಸವಿತ್ತು; ಆದರೆ ಆ ಸಾಧ್ವಿಯು ಅವಳ ಆಟವನ್ನು ನಡೆಯಗೊಟ್ಟಿದ್ದಿಲ್ಲ. ಅವಳು ತಾನಾಗಿ ಮನೆಗೆ ಬಂದ ಸಂಧಿಯನ್ನು ಸಾಧಿಸಿ, ಕಾರ್ಯಸಾಧನೆ ಮಾಡಬೇಕೆಂದು ರಾಧೆಯು ಯೋಚಿಸಿದಳು. ಸಾಹೇಬರಿಗೆ ವಿನಂತಿ ಮಾಡಿಕೊಂಡರೆ ಸುರೇಂದ್ರರಾಯರು ಗಂಡಾಂತರದಿಂದ ಪಾರಾಗುವರೆಂದು ಅವಳು ರಮಾದೇವಿಗೆ ಸಲಹೆ ಕೊಟ್ಟಳು ಸಂಕಟದಲ್ಲಿ ಬಿದ್ದ ರಮಾದೇವಿಯು ನಿರ್ವಾಹವಿಲ್ಲದೆ ಸಾಹೇಬರ ಬಳಿಗೆ ಹೋಗಿ, ಅವರ ಕಾಲಿಗೆ

ಬಿದ್ದು, ತನ್ನ ಪತಿಯ ಪ್ರಾಣವನ್ನುಳಿಸಬೇಕೆಂದು ಬೇಡಿಕೊಂಡಳು; ಆದರೆ ಪಾತಕಿಗಳಾದ ಸಾಹೇಬರು ತಮ್ಮ ಇಚ್ಛೆಯನ್ನು ಪೂರೈಸಬೇಕೆಂದು ಹೇಳಿದರು. ಆಗ ರಮಾದೇವಿಯು ಎಷ್ಟು ವಿಧದಿಂದ ಪ್ರಾರ್ಥಿಸಿದರೂ ಪ್ರಯೋಜನವಾಗಲಿಲ್ಲ. ಕಡೆಗೆ ಸಾಹೇಬರು ಅವಳ ಮೇಲೆ ಬಲತ್ಕಾರ ಮಾಡಹೋದರು. ಅವಳು ಸಿಟ್ಟಿನ ಭರದಲ್ಲಿ ಸಾಹೇಬರ ಸೊಂಡೆಯೊಡೆಯುವಂತೆಗುದ್ದಿದಳು. ಅವರು ನೆಲಕ್ಕೆ ಬಿದ್ದರು. ರಮಾದೇವಿಯು ಹೊರಗೆ ಹೋದಳು ನಾನು ಅಲ್ಲಿಯ ದೀಪವನ್ನು ನೊಂದಿಸಿ ಸಾಹೇಬರಮೇಲೆ ಶಸ್ತ್ರಪ್ರಹಾರ ಮಾಡತೊಡಗಿದೆನು. ಅವರ ಚೀತ್ಕಾರವನ್ನು ಕೇಳಿ, ರಾಧೆಯು ದೀಪ ತೆಗೆದುಕೊಂಡು ಬಂದಳು. ನಾನು ಅರಿಯದವನಂತೆ ನಟಿಸಹತ್ತಿದೆನು. ರಮೆಯೇ ತಮ್ಮ ಮೇಲೆ ಶಸ್ತ್ರಪ್ರಹಾರ ಮಾಡಿದಳೆಂದು ಸಾಹೇಬರು ಹೇಳಿದರು. ಪೋಲೀಸರು ರಮೆಯನ್ನು ಕಾರಾಗೃಹಕ್ಕೂ ಸಾಹೇಬರನ್ನು ರುಗ್ಣಾಲಯಕ್ಕೂ ಕಳಿಸಿದರು

ಕೃಷ್ಣರಾಯರು ತಮ್ಮ ಕಾಮುಕ ಮನೋವೃತ್ತಿಯನ್ನು ಶಾಂತಗೊಳಿಸುವದಕ್ಕಾಗಿ ವಿದ್ಯಾಸಂಸ್ಥೆಯಲ್ಲಿ ನೀಚ ಜನರನ್ನು ತುಂಬಿರುವರು. ಎಷ್ಟೋ ಸದ್ಗುಣಿಗಳು ಅವರ ಜಾಲದಲ್ಲಿ ಸಿಲುಕಿ ತಮ್ಮ ಶೀಲವನ್ನು ಮಾರಿಕೊಂಡಿರುವರು. ರಾಧೆಯು ಕೃಷ್ಣರಾಯರ ಬಲಗೈಯಂತಿದ್ದಳು. ಅವಳು ತಾನು ಕೆಟ್ಟದ್ದಲ್ಲದೆ ಒಳ್ಳೇ ಸ್ತ್ರೀಯರನ್ನು ಸಹ ಕೃಷ್ಣರಾಯರ ಸ್ವಾಧೀನ ಪಡಿಸಿರುವಳು. ಖಾವಿಂದ, ಅನಾಚಾರಿಗಳಾದ ರಾಧಾ-ಕೃಷ್ಣರ ಕೊಲೆ ಮಾಡದೆ ಮತ್ತೇನು ಮಾಡಬೇಕು? ಸುರೇಂದ್ರರಾಯನೂ, ರಮಾದೇವಿಯೂ ನಿರಪರಾಧಿಗಳಿರುವರು. ಪೋಲೀಸರು ಕೃಷ್ಣರಾಯರಿಂದ ಲಂಚ ತಿಂದು, ಅವರನ್ನು ತಪ್ಪುಗಾರರನ್ನಾಗಮಾಡಿರುವರು. ನಿಜವಾದ ತಪ್ಪುಗಾರನು ನಾನು. ಖಾವಿಂದರವರು ನನಗೆ ದಂಡನೆಯನ್ನು ವಿಧಿಸಿ ನಿರಪರಾಧಿಗಳನ್ನು ಮುಕ್ತಗೊಳಿಸಬೇಕು

ಅಡವೀರಾಯನ ಜಬಾನಿಯನ್ನು ಕೇಳಿ ನ್ಯಾಯಾಧೀಶರೂ ಪ್ರೇಕ್ಷಕ ಜನರೂ ಬೆರಗಾದರು. ಅಷ್ಟರಲ್ಲಿ ರಾಧಾದೇವಿಯು ತನ್ನ ಮಗನಾದ ಗಿರಿಮಾಜಿಯನ್ನು ಕರೆಕೊಂಡು ನ್ಯಾಯಸಭೆಗೆ ಬಂದಳು. ನ್ಯಾಯಾಧೀಶರು ಗಿರಿಮಾಜಿಯ ಕಾಲಲ್ಲಿಯ ಕರೀ ಚಿಹ್ನವನ್ನೂ, ಕೈ ಬೆರಳನ್ನೂ ನಿರೀಕ್ಷಿಸಿದರು. ಅನಂತರದಲ್ಲಿ ಅವರು ರಾಧಾದೇವಿಯನ್ನು ಕುರಿತು–'ನಿಮ್ಮ ಹಾಗು ರಾವಸಾಹೇಬ ಕೃಷ್ಣರಾಯರ ಕೊಲೆಯ ಪ್ರಯತ್ನ ಮಾಡಿದವನು ನಿಮ್ಮ ಪತಿರಾಯನಾದ ಅಡವೀರಾಯನೇ ಎಂಬದು ನಿದರ್ಶನಕ್ಕೆ ಬಂದಿದೆ; ಸುರೇಂದ್ರರಾಯನೂ, ರಮಾದೇವಿಯೂ ನಿರಪರಾಧಿಗಳೆಂದು ಸ್ಪಷ್ಟವಾಗುತ್ತದೆ. ಅಪರಾಧಿಗಳಾದ ಅಡವೀರಾಯನಿಗೆ ಶಿಕ್ಷೆ ವಿಧಿಸಬೇಕಾಯಿತು.'

'ಸರಕಾರ!' ರಾಧಾದೇವಿಯು—'ಅಡವಿಗೆ ಮರಣ ದಂಡನೆಯನ್ನು ವಿಧಿಸಿರಿ. ಇವನು ರಾಕ್ಷಸನು. ಮನೆಗೆ ಬಂದರೆ ಮತ್ತೆ ನನ್ನ ಕೊಲೆಮಾಡ ಲುದ್ಯುಕ್ತನಾಗದೆ ಇರಲಾರನು.'

'ಕೃಷ್ಣರಾಯರ ಪಾದದ ಮೇಲೆ ಕಪ್ಪು ಕಲೆಯಿರುವದಂತೆ; ನಿಜವೊ?'

'ನಿಜ.' 'ಅವರ ಬಲಗೈಯಲ್ಲಿ ಆರು ಬೆರಳುಗಳಿದ್ದದ್ದು ನಿಜವೊ?'

'ನಿಜ.' 'ನಿಮ್ಮ ಕುಮಾರನಲ್ಲಿ ಇವೇ ಗುರತುಗಳು ಕಾಣುವವು.'

'ನಿಜ.' 'ಈ ಕುರುಹುಗಳು ನಿಮ್ಮ ಶೀಲದ ಬಗ್ಗೆ ಸಂದೇಹವನ್ನುಂಟು ಮಾಡುತ್ತವೆ. ಶಿಕ್ಷಣಸಂಸ್ಥೆಯಲ್ಲಿ ಕೆಲಸ ಮಾಡುವವರೂ, ಸೌಭಾಗ್ಯವತಿಯರೂ ಆದ ನೀವು, ಹೀಗೆ ಅನೀತಿಯಿಂದ ನಡೆಯಬಾರದಾಗಿತ್ತು.' ಎಂದು ನ್ಯಾಯಾಧೀಶರು ನುಡಿದು-'ನೀವು ಹೋಗಿರಿ' ಎಂದು ರಾಧಾದೇವಿಗೆ ಹೇಳಿದರು. ಅನಂತರದಲ್ಲಿ ಅವರು ಬದ್ರುದ್ದೀನನನ್ನು ಕರೆದು—'ನೀವು ಹೆಣ್ಣು ಹುಡುಗೆಯರ ಶಾಲೆಗೆ ಹೋಗಿದ್ದಿರಿ. ಅಲ್ಲಿ ಏನೇನು ಕಂಡಿರಿ?'

'ಖಾವಿಂದ!' ಬದ್ರುದ್ದೀನ ಕೊತವಾಲನು—'ನಾನು ಶಾಲೆಗೆ ಹೋಗಿ ಕೋಣೆಯ ಬೀಗ ತೆಗೆಯಲಿಕ್ಕೆ ಅಲ್ಲಿಯ ಹೆಡ್ ಮಿಸ್ಟ್ರೆಸ್‌ರಾದ ಕುಮಾರೀ ಕುಸುಮಾವತಿಯವರಿಗೆ ಹೇಳಿದೆನು ಮೊದಲು ತಮ್ಮಲ್ಲಿ ಬೀಗದ ಕೈ ಇಲ್ಲವೆಂದು ಅವರು ಹೇಳಿದರು. ಆ ಮೇಲೆ ಬೀಗ ಮುರಿಯಲಿಕ್ಕೆ ನಾನು ಸಿದ್ಧನಾದೆನು. ಆಗ ಅವರು ಬೀಗದ ಕೈ ಕೊಟ್ಟರು. ಕೋಣೆಯು ವಿಲಾಸಮಂದಿರವನ್ನು ಹೋಲುತ್ತಿತ್ತು. ಅಲ್ಲಿ ಕೃಷ್ಣರಾಯರೂ ರಾಧಾದೇವಿಯವರೂ ಒಂದೇ ಕಡೆಗೆ ಕುಳಿತು, ಮಲಗಿ ತೆಗೆಯಿಸಿದ ಅನೇಕ ಚಿತ್ರಗಳಿದ್ದವು, ಎಲೆ ಅಡಿಕೆಯ ಡಬ್ಬಿ, ಎಣ್ಣೆಯೊಲೆ, ಚಹದ ಪೇಲಿ-ತಟ್ಟೆಗಳು ಹೇರಳವಾಗಿದ್ದವು; ಹಾಗು ಕೃಷ್ಣರಾಯರ ವಿಳಾಸದ ಅರಿವೆ-ಪುಸ್ತಕಗಳೂ, ರಾಧಾದೇವಿಯವರ ಹೆಸರು ಕಸೀದೆಯಿಂದ ಹಾಕಿದ ಸೀರೆ-ಪೋಲಕಗಳೂ ಅಲ್ಲಿದ್ದವು.'

ಬದ್ರುದ್ದೀನನು ತಾನು ತಂದ ಒಡವೆಗಳನ್ನು ನ್ಯಾಯಾಧೀಶರ ಮುಂದೆ ಇಟ್ಟನು. ನ್ಯಾಯಾಧೀಶರು ಅವುಗಳನ್ನು ನಿರೀಕ್ಷಿಸಿದರು. ಅನಂತರದಲ್ಲಿ ಅವರು ಅಡವೀರಾಯನನ್ನು ಕುರಿತು—'ರಮಾದೇವಿಯರ ವಿಷಯವಾಗಿ ಸುರೇಂದ್ರರಾಯರು ಕಲುಷಿತ ಮನಸ್ಸುಳ್ಳವರಾಗಲಿಕ್ಕೆ ಕಾರಣವೇನು?'

'ಖಾವಿಂದ, ಕೃಷ್ಣರಾಯರೇ ಇದಕ್ಕೆ ಕಾರಣರು. ರಮಾದೇವಿಯವರನ್ನು ಹೊಣೆಯ ಮೇಲೆ ಬಿಡುಗಡೆ ಮಾಡಿಕೊಂಡು, ಗೋವರ್ಧನರಾಯನು ಅವರನ್ನು ತಮ್ಮ ಮನೆಗೆ ಕರೆದೊಯ್ದನು. ಗೋವರ್ಧನರಾಯನು

ಆ ಸಾಧ್ವಿಯ ಮೇಲೆ ಪಾಪದೃಷ್ಟಿಯನ್ನಿಟ್ಟನು; ಆದರೆ ಅವನ ಮನೋರಥವು ಈಡೇರಲಿಲ್ಲ. ರಮಾದೇವಿಯವರು ದಿವಾಣ ಮಾಧವರಾಯರ ಮನೆಗೆ ಹೋದರು. ಕೃಷ್ಣರಾಯರು ಬಹಳೇ ಕಾರಸ್ಥಾನ ಮಾಡಿ, ರಮಾದೇವಿಯವರು ದುರ್ವರ್ತನಿಗಳಾಗಿರುವರೆಂಬ ಸುಳ್ಳು ಸುದ್ದಿಯನ್ನು ಸೆರೆಯಲ್ಲಿದ್ದ ಸುರೇಂದ್ರರಾಯನಿಗೆ ತಲುಪುದ ವ್ಯವಸ್ಥೆ ಮಾಡಿಸಿದರು. ಇಂತಹ ದುಷ್ಟರ ಕೊಲೆ ಮಾಡದೆ ಮತ್ತೇನು ಮಾಡಬೇಕು? ನೀವೇ ಹೇಳಿರಿ.'

ಅಷ್ಟರಲ್ಲಿ ಚಾವಡಿಯ ಕೆಲಸವು ಮುಗಿಸಲ್ಪಟ್ಟಿತು. ಅಡವೀರಾಯ, ಸುರೇಂದ್ರರಾಯ, ರಮಾದೇವಿ ಮೊದಲಾದ ಅಪರಾಧಿಗಳು ಸೆರೆಮನೆಗೆ ಕಳಿಸಲ್ಪಟ್ಟರು. ನಾಳೆಗೆ ಅಪರಾಧದ ನಿರ್ಣಯವಾಗುವದೆಂದು ಎಲ್ಲ ಪ್ರೇಕ್ಷಕರೂ ತಮ್ಮ ತಮ್ಮ ಮನೆಗೆ ಹೋದರು.

---

## ತೀರ್ಪು

*

ಅಡವೀರಾಯನ ಜಬಾನಿಯ ಸಂಗತಿಯು ವಿಜಯನಗರದ ತುಂಬ ಪಸರಿಸಿತು. ನಿಜವಾದ ಅಪರಾಧಿಯು ಉಳುಕನಾಗಿ ಉಳಿದು, ನಿರಪರಾಧಿಗಳು ಬಹುಪರಿಯಾಗಿ ಕಷ್ಟಬಟ್ಟರೆಂದು ನಾಗರಿಕರು ಮರಮರನೆ ಮರುಗಿದರು! ಅಡವೀರಾಯನ ಜಬಾನಿಯಿಂದ ಕೃಷ್ಣರಾಯರ ಮಾನಭಂಗವಾದಂತಾಯಿತು. ನಮ್ಮ ಪಾಪವೆಲ್ಲ ಬೈಲಿಗೆ ಬಿದ್ದಿತೆಂದು ಅವರು ಬಹುಪರಿಯಾಗಿ ಮಿಡುಕಿದರು. ಆನಂದ-ಗೋವಿಂದ-ಗೋವರ್ಧನ ಮೊದಲಾದ ನೀಚ ಮನೋವೃತ್ತಿಯ ಜನರು ವಿಜಯನಗರದ ಬೀದಿಯಲ್ಲಿ ಮುಖವೆತ್ತಿ ಹೇಗೆ ತಿರುಗಾಡಬೇಕೆಂದು ಯೋಚಿಸತೊಡಗಿದರು. ರಾವಸಾಹೇಬ ಕೃಷ್ಣರಾಯರ ಅವಸ್ಥೆಯಂತೂ ಚಿಂತಾಜನಕವಾಗಿತ್ತು. ಅಡವೀರಾಯನು ಕೃತಘ್ನನಾಗಿ ತನ್ನ ಪಾಪವನ್ನೆಲ್ಲ ಪ್ರಸಿದ್ಧಿಗೆ ತಂದನೆಂದು ಅವರು ಬಹು ಪರಿಯಾಗಿ ಕ್ಲೇಶಗೊಂಡರು.

ಮಾರನೇ ದಿನ ನಸಕಿನಲ್ಲಿ ವಿಜಯನಗರದಲ್ಲಿ ವಿಲಕ್ಷಣವಾದ ಕೋಲಾಹಲವೆದ್ದಿತು. ಸ್ಕೂಲ ಮಿಸ್ಟ್ರೆಸ್ ರಾಧಾದೇವಿಯೂ, ಅವಳ ಮಗನಾದ ಗಿರಿಮಾಜಿಯೂ ಸುಟ್ಟುಕೊಂಡು ಸತ್ತರೆಂದೂ, ರಾವಸಾಹೇಬ ಕೃಷ್ಣರಾಯರು ವಿಷಪಾನ ಮಾಡಿ ಪ್ರಾಣತ್ಯಾಗ ಮಾಡಿದರೆಂದೂ ನಗರದ ತುಂಬ ವಾರ್ತೆಯು ಹಬ್ಬಿತು. ರಮೆ-ಸುರೇಂದ್ರ-ಅಡವಿ ಈ ಮೂವರೂ ತನಗೆ ಮೃತ್ಯುಸ್ವರೂಪಿಗಳಾದರೆಂದು ರಾವಸಾಹೇಬರು ಲೇಖ ಬರೆದಿಟ್ಟು, ವಿಷಪಾನ ಮಾಡಿದರು.

ರಾಧಾದೇವಿಯು ಗಿರಿಮಾಜಿಯ ಮೇಲೆ ಪೆಟ್ರೋಲ ಎರಚಿ ಸುಟ್ಟು, ತಾನೂ ಪೆಟ್ರೋಲ ಎರಚಿಕೊಂಡು ಬೆಂಕಿ ಹಚ್ಚಿಕೊಂಡಳು. ಅಂತೂ ಒಮ್ಮೆ ಆ ಪಾಪಪೂರಿತ ದುಷ್ಟ ವ್ಯಕ್ತಿಗಳ ಅಂತವಾಯಿತು!

ಅಂದು ನ್ಯಾಯಾಧೀಶರು ತೀರ್ಪು ಹೇಳುವವರಿದ್ದರು. ಪ್ರೇಕ್ಷಕರು ನ್ಯಾಯಸಭೆಯಲ್ಲಿ ನೆರೆದಿದ್ದರು. ಮೂವರೂ ಅಪರಾಧಿಗಳು ನ್ಯಾಯಾಧೀಶರ ಸಮ್ಮುಖದಲ್ಲಿ ನಿಲ್ಲಿಸಲ್ಪಟ್ಟಿದ್ದರು. ನ್ಯಾಯಾಧೀಶರು ತಮ್ಮ ತೀರ್ಪು ಓದ ತೊಡಗಿದರು.—'ಸದ್ಯದ ಪ್ರಕರಣವು ನನ್ನ ಆಡಳಿತದಲ್ಲಿ ನಭೂತ ಪೂರ್ವ ವಾದದ್ದಾಗಿರುವದು. ಮಾನವೀ ಸಮಾಜಕ್ಕೆ ಲಾಂಛನಾಸ್ಪದವಾದ ಇಂತಹ ಚಮತ್ಕೃತಿಜನ್ಯ ಪ್ರಕರಣಗಳು ಬೇರೆ ಎಲ್ಲಿಯೂ ಆದಂತೆ ಕಂಡು ಬರು ವದಿಲ್ಲ. ಅಪರಾಧಿ ನಂಬರು ೩ ಅಡವೀರಾಯನು ನಿಜವಾದ ಅಪರಾಧಿ ಯೆಂಬ ವಿಷಯದಲ್ಲಿ ಸಂದೇಹವಿಲ್ಲ. ರಾಧಾದೇವಿಯು ದುರ್ವರ್ತನಿಯಾದ ಬಗ್ಗೆ ಅಡವೀರಾಯನು ಸಂತಪ್ತನಾಗಿ, ಅವಳ ಮುಖದ ಮೇಲೆ ದ್ರಾವಕ ವನ್ನು ಸುರುವಿದನು. ಅಷ್ಟರಿಂದ ಏನೂ ಕೆಲಸವಾಗದ್ದನ್ನು ನೋಡಿ, ಅವಳ ಮೇಲೆ ಶಸ್ತ್ರ ಪ್ರಯೋಗ ಮಾಡಿದನು. ಈ ಕೃತ್ಯದಿಂದ ರಾಧಾದೇವಿಯು ಕೊಲೆಯಾಗದಿದ್ದರೂ, ಕೊಲೆಯ ಪ್ರಯತ್ನ ಮಾಡಿದ ಅಪರಾಧವು ಅಪ ರಾಧಿ ನಂಬರು ೩ ಇವನ ಮೇಲಿರುವದು; ಆದರೆ ಅಪರಾಧಿಯು ಹೇಳಿದ ಕರ್ಮಕಥೆಯನ್ನು ಕೇಳಲಾಗಿ, ಅವನ ಸ್ಥಳದಲ್ಲಿ ಬೇರೆ ಯಾವನಿದ್ದರೂ, ಅವನು ತನ್ನ ಜೀವದ ಮೇಲೆ ಉದಾರನಾಗುತ್ತಿದ್ದನು. ಅಡವೀರಾಯನು ಅಪರಾಧ ಮಾಡಿದ್ದು ಮಾನವೀಸ್ವಭಾವವನ್ನನುಸರಿಸಿದ್ದೇ ಇದೆ. ಆದ್ದರಿಂದ ಶಿಕ್ಷೆ ವಿಧಿಸುವಾಗ ದಯಾರ್ದ್ರ ದೃಷ್ಟಿಯಿಂದ ವಿಚಾರ ಮಾಡಲಿಕ್ಕೆಬೇಕು.

ಈಗ ಈ ಪ್ರಕರಣದ ಸೂಕ್ಷ್ಮವಿಚಾರಣೆ ಮಾಡಿದರೆ, ಅಪರಾಧವು ಎಷ್ಟೋ ಜನರನ್ನು ಸುತ್ತು ಹಾಕುವಂತಿದೆ. ಈ ಎಲ್ಲ ಅನರ್ಥಗಳಿಗೆ ರಾವ ಸಾಹೇಬ ಕೃಷ್ಣರಾಯರೇ ಕಾರಣರು. ಅವರ ಆಡಳಿತವು ಹೇಗಿತ್ತೆಂಬ ಬಗ್ಗೆ ಅಡವೀರಾಯನು ವರ್ಣಿಸಿರುವನು; ಅಲ್ಲದೆ ವೃತ್ತಪತ್ರಗಳಲ್ಲಿಯೂ ಅನೇಕ ಸಾರೆ ಟೀಕೆಗಳು ಬಂದಿವೆ. ಕೊತವಾಲ ಬದ್ರುದ್ದೀನರು ಹೆಣ್ಣು ಹುಡುಗೆ ಯರ ಶಾಲೆ ಯೊಳಗಿನ ವಿಲಾಸ ಮಂದಿರವನ್ನು ಜಪ್ತಿ ಮಾಡಿ ಕೆಲವು ಒಡವೆ ಗಳನ್ನು ತಂದಿರುವರು. ಅವುಗಳನ್ನು ನೋಡಲಾಗಿ ಕೃಷ್ಣರಾಯರ ವರ್ತ ನವು ಅನೀತಿಮೂಲಕವಾದದ್ದಿತೆಂದು ಸ್ಪಷ್ಟವಾಗುತ್ತದೆ. ಇಂತಹ ಅಧಿಕಾರಿ ಗಳು ಶಿಕ್ಷಣಸಂಸ್ಥೆಯಂತಹ ಪವಿತ್ರ ಸಂಸ್ಥೆಯಲ್ಲಿದ್ದರೆ, ಹೀಗೆ ಅನಾಹುತ ಗಳು ಜರುಗತಕ್ಕವುಗಳೇ. ರಾಜ್ಯವ್ಯವಸ್ಥೆಯು ಎಲ್ಲ ಸಂಸ್ಥೆಗಳಲ್ಲಿ ಶಿಕ್ಷಣಾ

ಸಂಸ್ಥೆಯು ಮಹತ್ವದ್ದು. ರಾಷ್ಟ್ರದ ಭಾವೀ ಪ್ರಜೆಗಳು ವಿದ್ಯಾಲಯದೊಳಗಿನ ವಿದ್ಯಾರ್ಥಿಗಳಾಗಿರುವರು. ಶಿಕ್ಷಕ-ಶಿಕ್ಷಕಿಯರೂ, ಶಿಕ್ಷಣಾಧಿಕಾರಿಗಳೂ ದುರಾಚಾರಿಗಳಾಗಿದ್ದರೆ, ಬಾಲ-ಬಾಲಿಕೆಯರಿಗೆ ಸುಶಿಕ್ಷಣವು ದೊರೆಯುವದಿಲ್ಲ. ನೈತಿಕ ಬಲದಿಂದ ಉತ್ಕೃಷ್ಟರಾದ ಜನರಿಲ್ಲದಿದ್ದರೆ ಇಂತಹ ಅನರ್ಥಗಳು ನಡೆಯುವವು. ಸದೋಷ ಶಿಕ್ಷಣಪದ್ಧತಿಯೊಳಗಿನ ಗುಣ-ದೋಷಗಳ ವಿಚಾರಣೆ ಮಾಡುವ ಸ್ಥಳವು ಇದಲ್ಲ. ಅದು ಶಿಕ್ಷಣತಜ್ಞರ ಕೆಲಸವಾಗಿದೆ; ಆದರೆ ಪ್ರಸ್ತುತ ಪ್ರಕರಣದ ಮಟ್ಟಿಗೆ ವಿಚಾರಿಸಿದರೆ, ನೈತಿಕ ದೃಷ್ಟಿಯಿಂದ ಶ್ರೇಷ್ಠರಾದ ಶಿಕ್ಷಕ-ಶಿಕ್ಷಕಿಯರನ್ನೂ ಶಿಕ್ಷಣಾಧಿಕಾರಿಗಳನ್ನೂ ನಿಯಮಿಸಿದರೆ ಇಂತಹ ಅನರ್ಥಗಳು ಘಟಿಸುವದಿಲ್ಲ. ಈ ವಿಷಯದ ಕಡೆಗೆ ಸರಕಾರವು ಲಕ್ಷ್ಯಗೊಡಬೇಕೆಂದು ನಾನು ಸೂಚಿಸುವೆನು.

ಯಾವ ಅಧಿಕಾರಿಯ ಅತ್ಯಾಚಾರದಿಂದ ವಿಜಯನಗರ ಶಿಕ್ಷಣಸಂಸ್ಥೆ ಕೆಟ್ಟಿತೋ ಆ ಅಧಿಕಾರಿಯು ಇಹಲೋಕವನ್ನು ತ್ಯಜಿಸಿರುವದರಿಂದ, ಅವನ ಅಪರಾಧದ ವಿಚಾರಣೆ ಮಾಡುವ ಕಾರಣವಿಲ್ಲ. ಅಧಿಕಾರಿಯು ಹೊರಟು ಹೋಗಿದ್ದರೂ, ಅವನ ದುಷ್ಕೃತ್ಯಗಳು ಜೀವಂತವಾಗಿರುವವು. ಶಿಕ್ಷಕ-ಶಿಕ್ಷಕಿಯರನ್ನು ನಿಯಮಿಸುವ ಪದ್ಧತಿ, ಪಕ್ಷಪಾತ ಮೊದಲಾದ ವಿಷಯಗಳನ್ನು ನೆನಿಸಿದರೆ ರೋಮಾಂಚಗಳೇಳುವವು! ಅತವೀರಾಯನು ಹೇಳಿದ ಮಾತುಗಳೆಲ್ಲ ನಿಜವೆಂದು ತಿಳಿಯದಿದ್ದರೂ, ಕೃಷ್ಣರಾಯರ ಆಳಿಕೆಯಲ್ಲಿ ಶಿಕ್ಷಣ ಸಂಸ್ಥೆಯು ಹಸಗೆಟ್ಟು ಹೋದದ್ದು ಸುಳ್ಳಲ್ಲ. ತನುವಿಕ್ರಯದ ಉದ್ಯೋಗ ಮಾಡುವ ಗಲಿಚ್ಛ ಸ್ತ್ರೀಯರೂ, ದುರಾಚಾರಿಗಳಾದ ಪುರುಷರೂ ಶಿಕ್ಷಣ ಸಂಸ್ಥೆಯಲ್ಲಿ ಶಿಕ್ಷಕ-ಶಿಕ್ಷಕಿಯರಾಗಿ ನಿಯಮಿಸಲ್ಪಟ್ಟಿದ್ದರೆ, ಸರಕಾರವು ಅಂತಹ ಜನರನ್ನು ನೌಕರಿಯಿಂದ ತಳ್ಳಬೇಕು. ಇಂದಿನ ಮಿತಿಗೆ 'ಸ್ಕೂಲ ಮಿಸ್ಟ್ರೆಸ್ಸ' ಈ ಶಬ್ದವು ಬಹುಮಟ್ಟಿಗೆ 'ವಾರಾಂಗನೆ' ಶಬ್ದದಷ್ಟೇ ಬಹಿಷ್ಕೃತವಾಗಿ ಕಾಣಹತ್ತಿರುವ ಕಾರಣವೇನಂದರೆ, ಶಿಕ್ಷಣಸಂಸ್ಥೆಯಲ್ಲಿ ಕೆಲಸ ಮಾಡುವ ಸ್ತ್ರೀಯರಲ್ಲಿ ನೂರಕ್ಕೆತೊಂಬತ್ತುಸ್ತ್ರೀಯರು ದುರಾಚರಿಣಿಗಳಿರುವರು!

ಈ ಪ್ರಕರಣದಲ್ಲಿ ಪೋಲೀಸರು ತಮ್ಮ ಕೆಲಸವನ್ನು ಯೋಗ್ಯರೀತಿಯಿಂದ ಮಾಡಿಲ್ಲೆಂದು ನನ್ನ ಮತವಿದೆ. ನಿಜವಾದ ಅಪರಾಧಿಯು ಇಂದಿನವರೆಗೆ ಯಾವ ಬಾಧೆ ಇಲ್ಲದೆ ಸುಖವಾಗಿರಬೇಕು, ನಿರಪರಾಧಿಗಳು ಯಮಯಾತನೆಯನ್ನು ಭೋಗಿಸಬೇಕು ಈ ಸಂಗತಿಗಳ ವಿಷಯದಲ್ಲಿ ಸೂಕ್ಷ್ಮ ವಿಚಾರ ಮಾಡಲು, ಪೋಲೀಸರು ತಮ್ಮ ಕರ್ತವ್ಯವನ್ನು ಯೋಗ್ಯ ರೀತಿಯಿಂದ ಮಾಡಿಲ್ಲವೆಂದೇ ಹೇಳಬೇಕಾಗುವದು. ಪೋಲೀಸಖಾತೆಯು ಜನರ

ವಿತ್ತ-ಜೀವಿತಗಳ ಸಂರಕ್ಷಣಕ್ಕಾಗಿ ಇರುವದು. ಈ ಖಾತೆಯ ಮೇಲೆ ದೊಡ್ಡ ಕರ್ತವ್ಯಭಾರವಿದೆ. ಸುಳ್ಳಿದ್ದದ್ದನ್ನು ನಿಜ, ನಿಜವಿದ್ದದ್ದನ್ನು ಸುಳ್ಳು ಮಾಡಲಿಕ್ಕೆ ಪೋಲೀಸರಿಂದ ಈ ಪ್ರಕರಣದಲ್ಲಿ ಕಾರಸ್ಥಾನವು ಮಾಡಲ್ಪಟ್ಟ ಸಂಶಯವು ಬರುವದು. ಅದಕ್ಕಾಗಿ ನನಗೆ ಬಹಳೇ ಖೇದವಾಗುವದು.

ಪ್ರಕರಣದ ಸಾರ್ವತ್ರಿಕ ವಿಚಾರವಾದ ಮೇಲೆ ಶಿಕ್ಷೆಯ ಬಗ್ಗೆ ವಿಚಾರಿಸಿದರೆ, ಅಪರಾಧಿ ನಂಬರ ೧ ಸುರೇಂದ್ರರಾಯ, ಅಪರಾಧಿ ನಂಬರ ೨ ರಮಾದೇವಿ ಇವರು ಪೂರ್ಣ ನಿರ್ದೋಷಿಗಳೆಂಬದು ಸಾಕ್ಷಿಗಳ ಮೇಲಿಂದ ಸಿದ್ಧವಾಗಿದೆ; ಆದ್ದರಿಂದ ಇವರಿಬ್ಬರನ್ನು ನಿರ್ದೋಷಿಗಳೆಂದು ಬಿಡುಗಡೆ ಮಾಡಿದ್ದೇನೆ. ಅಪರಾಧಿ ನಂಬರ ೩ ಅಡವೀರಾಯನು ತನ್ನ ಹೆಂಡತಿಯ ದುರಾಚಾರವನ್ನು ನೋಡಿ ಕೊಲೆಗೆ ಸಿದ್ಧನಾದನೆಂಬದು ನಿಜವು; ಆದರೆ ಎಷ್ಟೋ ದಿನ ಅವಳಿಂದ ಅನಾಚಾರಗಳು ಘಟಿಸುತ್ತಿದ್ದರೂ, ಆ ವೇಳೆಯಲ್ಲಿ ಪ್ರತೀಕಾರ ಮಾಡದೆ, ಎಷ್ಟೋ ವರ್ಷಗಳ ಮೇಲೆ ರಾಧಾದೇವಿಯ ಕೊಲೆ ಮಾಡಲು ದ್ಯುಕ್ತನಾದದ್ದನ್ನು ನೋಡಿದರೆ, ಅಡವೀರಾಯನ ಮನೋದೌರ್ಬಲ್ಯವು ವ್ಯಕ್ತವಾಗುತ್ತದೆ. ಇನ್ನು ಕೃಷ್ಣರಾಯರ ಕೊಲೆಯ ಪ್ರಯತ್ನದ ಬಗ್ಗೆ ವಿಚಾರ ಮಾಡಲು, ಅಡವಿರಾಯನು ಅಪರಾಧಿಯೆನಿಸುವನು. ಒಬ್ಬ ಸಾಧ್ವಿಯ ಶೀಲರಕ್ಷಣೆಗಾಗಿ ಪ್ರಯತ್ನಿಸುವದೇನೂ ಅಪರಾಧವಲ್ಲ. ಅದು ಮನುಷ್ಯ ಸ್ವಭಾವವು ರಮಾದೇವಿಯ ಮಾನರಕ್ಷಣೆಗಾಗಿ ರಾವಸಾಹೇಬ ಕೃಷ್ಣರಾಯರ ಕೊಲೆ ಮಾಡುವದು ಅವಶ್ಯಕವಿತ್ತೆಂದು ಹೇಳಲಾಗುವದಿಲ್ಲ. ಅತ್ಯಾಚಾರಿಯ ಪ್ರತೀಕಾರವನ್ನು ಅನ್ಯರೀತಿಯಿಂದ ಮಾಡಿದ್ದರೆ ಒಳಿತಾಗುತ್ತಿತ್ತು. ಈ ಎರಡೂ ಅಪರಾಧಗಳ ಬಗ್ಗೆ ಅಡವೀರಾಯನಿಗೆ ಕಠಿಣ ಶಿಕ್ಷೆಯನ್ನು ವಿಧಿಸಬೇಕಾಗಿತ್ತು. ಅವನ ಮೊದಲನೇ ಅಪರಾಧವು ಹೆಂಡತಿಯ ಅನಾಚಾರಕ್ಕೆ ಸಂತಾಪಗೊಂಡು ಮಾಡಿದ್ದಾಗಿದೆ; ಎರಡನೆಯ ಅಪರಾಧವು ಒಬ್ಬ ಅಬಲೆಯ ಶೀಲರಕ್ಷಣೆಗಾಗಿ ಮಾಡಿದ್ದಾಗಿದೆ; ಹಾಗು ಎರಡೂ ಅಪರಾಧಗಳನ್ನು ಅಪರಾಧಿಯು ತಾನಾಗಿ ಒಪ್ಪಿರುವನು. ಅವನು ಸರಳತನದಿಂದ ಅಪರಾಧವನ್ನು ತಾನಾಗಿ ಒಪ್ಪದಿದ್ದರೆ, ಅಪರಾಧಿಯನ್ನು ಬಿಟ್ಟು ನಿರಪರಾಧಿಗಳಿಗೆ ಶಾಸನವಿಧಿಸುವ ಪ್ರಸಂಗ ಒದಗಿತ್ತು. ಪರಮೇಶ್ವರನು ಸತ್ಯಕ್ಕೆ ವಿಜಯವನ್ನು ಕೊಟ್ಟನು.

ಮೊದಲನೆಯ ಅಪರಾಧದ ಬಗ್ಗೆ ಅಡವೀರಾಯನಿಗೆ ೧ ವರ್ಷ ಸಶ್ರಮ ಶಿಕ್ಷೆ, ಎರಡನೆಯ ಅಪರಾಧಕ್ಕಾಗಿ ೨ ವರ್ಷ ಸಶ್ರಮ ಶಿಕ್ಷೆ ವಿಧಿಸಿದ್ದೇನೆ. ಈ ಎರಡೂ ಶಿಕ್ಷೆಗಳನ್ನು ಅಪರಾಧಿಯು ಒಂದೇ ವೇಳೆಯಲ್ಲಿ ಭೋಗಿಸತಕ್ಕದ್ದು.

ಇನ್ನು ಈ ಪ್ರಕರಣದಲ್ಲಿ ಮನಃಪೂರ್ವಕವಾಗಿ ಪ್ರಶಂಸೆ ಮಾಡಿಸಿ ಕೊಳ್ಳಲಿಕ್ಕೆ ಯೋಗ್ಯಳೆಂದರೆ, ಅಪರಾಧಿ ನಂಬರ ೨ ರಮಾದೇವಿ. ಆಕೆಯ ಅದ್ವಿತೀಯ ಪಾತಿವ್ರತ್ಯದ ಹಾಗು ಅತುಲ ಮನೋಧೈರ್ಯದ ವರ್ಣನೆ ಎಷ್ಟು ಮಾಡಿದರೂ ಕಡಿಮೆ. ಅವಳ ಅಲೌಕಿಕ ಗುಣವನ್ನು ನೋಡಿ ನನಗೆ ಆನಂದವಾಯಿತು. ಅವಳಿಗೆ **'ಭಾರತ ರಮಣಿ'** ಎಂಬ ಗೌರವದ ಬಿರುದು ಕೊಟ್ಟು ಸನ್ಮಾನಿಸುವೆನು. ನಮ್ಮ ಸಂಸ್ಥಾನದ ಸ್ವರ್ಗವಾಸಿ ಭಾರತ ರಮಣಿ ಮಹಾರಾಣೀ ಸಾಹೇಬರು ತಮ್ಮ ಅಂತ್ಯಕಾಲಕ್ಕಿಂತ ಮೊದಲು ಇಂತಹ ಭಾರತ ರಮಣಿಯರಿಗೆ ಸುವರ್ಣ ಪದಕ ಕೊಡಬೇಕೆಂದು ಯೋಜನೆ ಮಾಡಿ ಟ್ಟಿದ್ದರು. ಇಂದಿನವರೆಗೆ ಯಾವ ನಾರೀ ಮಣಿಯು ಮುಂದೆ ಬಂದಿದ್ದಿಲ್ಲ. ನಾನು ರಮಾದೇವಿಗೆ ಆ 'ಭಾರತ ರಮಣಿ' ಸುವರ್ಣ ಪದಕ ಕಾಣಿಕೆ ಕೊಡುವೆ.

ನ್ಯಾಯಾಧೀಶರು ತೀರ್ಪು ಹೇಳಿದ ಕೂಡಲೆ ರಮಾದೇವಿ ಸುರೇಂದ್ರ ರಾಯರ ಶೃಂಖಲೆಗಳು ತೆಗೆಯಲ್ಪಟ್ಟವು. ಶೃಂಖಲೆಗಳನ್ನು ತೆಗೆಯುವಾಗ ರಮಾದೇವಿಯು-'ಹೌದು, ನಾನು ಸಾಹೇಬರ ಕೊಲೆ ಮಾಡಿದೆನು........' ಎಂಬ ಮಾತನ್ನು ಗುಣುಗುಟ್ಟತೊಡಗಿದ್ದಳು. ನ್ಯಾಯಾಧೀಶರು ಅವಳ ಸ್ಥಿತಿ ಯನ್ನು ನೋಡಿ ಬಹು ಪರಿಯಾಗಿ ಮರುಗಿದರು. ಸುರೇಂದ್ರ-ರಮಾದೇವಿ ಯವರು ಬಂಧಮುಕ್ತರಾದದ್ದನ್ನು ಕಣ್ತುಂಬ ನೋಡಿ ಅಡವೀರಾಯನು ಆನಂದಗೊಂಡನು. ಆಗ ಅವನು ಸುರೇಂದ್ರರಾಯನನ್ನು ಕುರಿತು-'ಇಡಿ ಆಯುಷ್ಯದಲ್ಲಿ ನನ್ನಿಂದ ಒಂದೂ ಮಹತ್ಕೃತಿಯಾಗಲಿಲ್ಲ. ಇಂದು ನಿರಪ ಧಿಗಳಾದ ನಿಮ್ಮ ಬಿಡುಗಡೆಯಾದದ್ದರಿಂದ ನನಗೆ ಆನಂದವಾಯಿತು. ನನ್ನ ಮದುವೆಯ ಹೆಂಡತಿಯೂ ಅವಳ ಮಗನೂ ಸುಟ್ಟುಕೊಂಡು ಸತ್ತರೆಂದು ತಿಳಿದಿದೆ. ನಾನು ಸೆರೆಮನೆಯಿಂದ ಬರುವವರೆಗೆ ನೀವು ನನ್ನ ಎಲ್ಲ ಆಸ್ತಿ ಯನ್ನು ನಿಮ್ಮ ವಶಕ್ಕೆ ತೆಗೆದುಕೊಳ್ಳಿರಿ. ಅದರ ಅರ್ಧವನ್ನು ಉಷಾದೇವಿಗೆ ಕೊಟ್ಟು, ಅವಳ ವಿವಾಹ ಮಾಡಿರಿ. ಉಳಿದರ್ಧದ ವಿನಿಯೋಗವನ್ನು ನಾನು ಬಂದ ಮೇಲೆ ನನ್ನಿಷ್ಟದಂತೆ ಮಾಡುವೆನು.'

ಅಡವೀರಾಯನು ಹೀಗೆ ಅನ್ನುವಷ್ಟರಲ್ಲಿ, ಪೋಲೀಸರು ಅವನನ್ನು ಕಾರಾಗೃಹಕ್ಕೆ ತೆಗೆದುಕೊಂಡು ನಡೆದರು. ಹೋಗಹೋಗುತ್ತ ಅಡವೀ ರಾಯನು ಸುರೇಂದ್ರರಾಯನಿಗೆ ನಮಸ್ಕಾರ ಮಾಡಿ-'ಸುರೇಂದ್ರರಾಯರೇ, ನೀಚರು ರಮಾದೇವಿಯವರ ವರ್ತನದ ವಿಷಯವಾಗಿ ಸುಳ್ಳುಸುದ್ದಿ ನಿಮ್ಮ ಕಿವಿಯ ಮೇಲೆ ಹಾಕಿ ನಿಮ್ಮಮನಸ್ಸು ಕೆಡಿಸಿದರು. ನೀವು ನಿಮ್ಮ ಪತ್ನಿ ಯನ್ನು ಮಹಾ ಸಾಧ್ವಿಯೆಂದು ತಿಳಿದು ವರ್ತಿಸಿರಿ' ಎಂದನು.

ಅನಂತರ ಪ್ರೇಕ್ಷಕರು ತಮ್ಮ ತಮ್ಮ ಮನೆಗೆ ತೆರಳಿದರು. ದಿವಾಣ ಮಾಧವರಾಯನು ಒಂದು ಬಂಡಿಯನ್ನು ತಂದು ನ್ಯಾಯಸಭೆಯ ಬಾಗಿಲ ಮುಂದೆ ನಿಲ್ಲಿಸಿದ್ದನು. ಸುರೇಂದ್ರರಾಯನು ಪತ್ನಿಯ ಬಳಿಗೆ ಹೋಗಿ 'ರಮೆ, ಅಡವೀರಾಯರು ನಮ್ಮನ್ನು ಪಾರು ಮಾಡಿದರು. ಮಾಧವರಾಯರೂ ಉಷಾದೇವಿಯೂ ನಮ್ಮ ಮುಕ್ತತೆಗಾಗಿ ಬಹಳೇ ಯತ್ನಿಸಿದರೆಂದು ಕೇಳಿದ್ದೇನೆ. ಒಟ್ಟಿನಲ್ಲಿ ಪರಮಾತ್ಮನನುಗ್ರಹದಿಂದ ಗಂಡಾಂತರ ತೊಲಗಿತು.

ರಮಾದೇವಿಯು ಇನ್ನೂ ಚನ್ನಾಗಿ ಎಚ್ಚರಗೊಂಡಿದ್ದಿಲ್ಲ. ಅವಳ ಸ್ಥಿತಿಯು ಭ್ರಮಿಷ್ಟರಂತೆಯೇ ಇತ್ತು. ಆಗ ಅವಳು-'ಅಹುದು; ನಾನು ಸಾಹೇಬರ ಕೊಲೆ ಮಾಡಿದೆನು....' ಎಂದು ಅನ್ನತೊಡಗಿದಳು. ಆಗ ಶಕುಂತಲೆಯು ಅವಳ ಬಳಿಗೆ ಬಂದು-'ಅಕ್ಕಾ, ವಸಂತನು ನಿಮ್ಮ ಬಳಿಗೆ ಬರಬೇಕೆನ್ನುವನು. ಎತ್ತಿ ಮೊಲೆಯುಣ್ಣಿಸಿರಿ,' ಎಂದು ಹೇಳಿದಳು.

ವಸಂತನನ್ನು ನೋಡಿದ ಕೂಡಲೆ ರಮಾದೇವಿಯ ಅಂತಃಕರಣವು ಉಕ್ಕಿ ಬಂತು. ಅವಳ ಮೈಮೇಲೆ ಸ್ವಲ್ಪ ಎಚ್ಚರ ಬಂತು. ಅವಳು ಮಗುವನ್ನು ಎತ್ತಿ ಕುಡಿಸತೊಡಗಿದಳು. ಎಲ್ಲರಿಗೂ ಸಂತೋಷವಾಯಿತು. ಆಗ ರಮಾದೇವಿ-'ಮಗು, ಇಷ್ಟು ದಿನ ಕಕ್ಕಿಯ ಬಳಿಯಲ್ಲಿದ್ದೆಯಾ?' ಎಂದಳು.

'ನಾನು ಇಷ್ಟು ವೇಳೆಯ ವರೆಗೆ ಮಾತಾಡಿಸಿದರೂ ಮಾತಾಡಲಿಲ್ಲ. ಮಗನನ್ನು ನೋಡಿದ ಕೂಡಲೆ ಮೈ ಮೇಲೆ ಸ್ಮೃತಿಯು ಹುಟ್ಟಿತು. ಎಂದು ಸುರೇಂದ್ರರಾಯನು ನುಡಿದನು.

'ವಸಂತನು ಇಷ್ಟು ಚಿಕ್ಕವನಾಗಿದ್ದರೂ, ಹೊರಗಿನ ಜಗತ್ತು ಹೇಗಿರುವದೆಂಬದರ ಗೊತ್ತುವಳಿಯಿಲ್ಲದಿದ್ದರೂ, ಅವನು ತನ್ನ ತಾಯಿಯ ವರ್ತನದ ವಿಷಯಕ್ಕಾಗಿ ವಿಪರೀತ ಭಾವನೆ ಮಾಡಿಕೊಂಡು, ತಲೆಯಲ್ಲಿ ಬೂದಿ ಹಾಕಿಕೊಳ್ಳಲಿಲ್ಲ. ರಂಗ ದ್ವಿರಂಗಗಳ ಜಗತ್ತಿನಲ್ಲಿ ಅನುಭವಶಾಲಿಗಳೆಂದು ಜಂಭ ಬಡೆಯುವವರು ಆದರ ಪಡಿಕಟ್ಟು ತಿಳಿಯದೆ ವಿಪರೀತ ಭಾವನೆ ಹೊಂದಿ, ಸಾವಿಗೆ ಸಿದ್ಧರಾದದ್ದನ್ನು ನೋಡಿದರೆ ಖೇದವಾಗುವದು.'

ರಮಾದೇವಿಯ ಈ ಬಹುಮಾನವು ತನ್ನ ಸಲುವಾಗಿಯೇ ಇರುವದೆಂಬದು ಸುರೇಂದ್ರರಾಯನಿಗೆ ತಿಳಿಯಿತು. ಅವನು ಮಾತಾಡಲು ಬಾರದವನಾಗಿ ಸುಮ್ಮನಿದ್ದನು. ಆಗ ಮಾಧವರಾಯನು ಬಂದು ಬಂಡಿಯನ್ನೇರಬೇಕೆಂದು ರಮಾದೇವಿ–ಸುರೇಂದ್ರರಾಯ–ಶಕುಂತಲೆ ಮೊದಲಾದವರಿಗೆ ಹೇಳಿದನು. ಅನಂತರ ಎಲ್ಲರೂ ಬಂಡಿ ಹತ್ತಲು ಅದು ಮಾಧವರಾಯನ ಮನೆಗೆ ಬಂತು. ಆ ದಂಪತಿಗಳು ಅಂದು ಅಲ್ಲೇ ಉಳಿದರು.

## ಉಪಸಂಹಾರ

ರಮಾದೇವಿ ನಸುಕಿನಲ್ಲಿದ್ದು ಚಹ-ಉಪಾಹಾರಗಳನ್ನು ಸಿದ್ಧಪಡಿಸಿದಳು. ಅವಳು ವಸಂತನನ್ನು ಪತಿಯ ಹಾಸುಗೆಯ ಮೇಲೆ ಕುಳ್ಳಿರಿಸಿ, ಮಲಗಿದ ಪತಿಯನ್ನು ಎಬ್ಬಿಸುವದಕ್ಕಾಗಿ ಹೇಳಿದಳು. ವಂಸತನು ತಂದೆಯ ಮೋರೆಯ ಮೇಲಿನ ಹೊದಿಕೆ ತೆಗೆದು 'ಅಪ್ಪಾ,ಅಪ್ಪಾ' ಎಂದನು. ಸುರೇಂದ್ರರಾಯನು ಎಚ್ಚರವಾಗಿದ್ದನು. ಅವನು ತಾಯಿ-ಮಕ್ಕಳ ಇಂಪಾದ ಸಂವಾದ ಕೇಳುತ್ತ ಹಾಸಿಗೆಯ ಮೇಲೆಯೇ ಬಿದ್ದುಕೊಂಡಿದ್ದನು. 'ಈಗಾಗಲೇ ಚಹ ಸಿದ್ಧವಾಗಿರುವದೇ?' ಎಂದನು.

'ಏಳಿರಿ. ಚಹವು ಸಿದ್ಧವಾಗಿ ಬಹಳ ವೇಳೆಯಾಯಿತು. ಆರಹತ್ತಿದೆ' ಎಂದು ರಮಾದೇವಿಯು ಹೇಳಿದಳು.

ಸುರೇಂದ್ರರಾಯನು ಹಾಸಿಗೆಯಿಂದೆದ್ದನು. ರಮಾದೇವಿಯು ಅವನಿಗೆ ನೀರನ್ನೂ ದಂತಧಾವನವನ್ನೂ ಕೊಟ್ಟಳು. ಮುಖಮಾರ್ಜನೆಯು ತೀರಿದ ಮೇಲೆ ಸುರೇಂದ್ರರಾಯನು ಚಹಾಪಾನಕ್ಕೆ ಕುಳಿತನು. ಅಷ್ಟರಲ್ಲಿ—'ರಣಗರ್ಜನೆ, ರಾಧಾ-ಕೃಷ್ಣರ ಆತ್ಮಹತ್ಯೆ, ಸ್ಕೂಲ ಮಿಸ್ಟ್ರೆಸ್ಸಿನ ಹಾಗು ರಾವಸಾಹೇಬ ಕೃಷ್ಣರಾಯರ ಕೊಲೆಯ ಪ್ರಯತ್ನದ ತೀರ್ಪು, ಭಾರತ ರಮಣಿಯ ಪುಣ್ಯಪ್ರಭಾವ. ಬೆಲೆ ಒಂದು ಆಣೆ' ಎಂದು ಕೂಗುತ್ತ ವೃತ್ತಪತ್ರ ಮಾರುವವನು ಸುರೇಂದ್ರರಾಯನ ಮನೆಯ ಹತ್ತಿರವೇ ಸಾಗಿದ್ದನು. ಆಗ ಸುರೇಂದ್ರರಾಯನು ಆ ವೃತ್ತಪತ್ರ ತರಲಿಕ್ಕೆ ಪತ್ನಿಗೆ ಹೇಳಿದನು.

ರಮಾದೇವಿಯು ರಣಗರ್ಜನೆಯ ಅಂಕನ್ನುತಂದು ಪತಿಗೆ ಕೊಟ್ಟಳು.

ಸುರೇಂದ್ರರಾಯನು ವೃತ್ತಪತ್ರದೊಳಗಿನ ಸಂಗತಿ ಓದಿ ಪತ್ನಿಯನ್ನು ಕುರಿತು-'ರಾಧಾದೇವಿ ಮಹಾ ರಕ್ಕಸಿ! ಅವಳು ತನ್ನ ಮಗನಿಗೆ ಪೆಟ್ರೋಲ ಎರಚಿ ಬೆಂಕೀಹಚ್ಚಿ, ತಾನೂ ಸುಟ್ಟುಕೊಂಡು ಸತ್ತಳು. ಅಡವೀರಾಯನ ಜಬಾನಿಯ ಸಂಗತಿ ಕೇಳಿ ತಮ್ಮ ಮರ್ಯಾದೆಯುಳಿಯುವದಿಲ್ಲೆಂದು ರಾವ ರಾಹೇಬರೂ ವಿಷ ತಿಂದು ಪ್ರಾಣ ಬಿಟ್ಟರು. 'ಭಾರತ ರಮಣಿಯ ಪುಣ್ಯ ಪ್ರಭಾವ' ಈ ಶಿರೋಲೇಖದ ಕೆಳಗೆ ನಿನ್ನವರ್ಣನೆ ಚನ್ನಾಗಿ ಮಾಡಲ್ಪಟ್ಟಿದೆ. ಓದಿ ನೋಡು,' ಎಂದು ಸುರೇಂದ್ರರಾಯನು ವೃತ್ತಪತ್ರವನ್ನು ಪತ್ನಿಗೆ ಕೊಟ್ಟನು. ರಮಾ ದೇವಿಯು ಆ ಪತ್ರಿಕೆಯೊಳಗೆ ಬರೆಯಲ್ಪಟ್ಟ ತನ್ನವರ್ಣನೆ ನೋಡಿ ಆನಂದಪಟ್ಟಳು.

ಸುರೇಂದ್ರರಾಯನು ಚಹಾ ಕುಡಿದ ಮೇಲೆ, ರಮಾದೇವಿಯೂ ಚಹ ಕುಡಿದಳು. ಅನಂತರ ಅವಳು ಪಾತ್ರೆಗಳನ್ನು ತೊಳೆಯಲು ಒಳಿಗೊಯ್ದಳು.

ಸುರೇಂದ್ರರಾಯನು ಅಡವೀರಾಯನ ಆಸ್ತಿಯನ್ನು ಪಂಚರ ಮುಖಾಂತರ ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು. ಅರ್ಧ ಆಸ್ತಿಯನ್ನು ಉಷೆಗೆ ಕೊಟ್ಟು, ಅವಳ ವಿವಾಹ ಮಾಡಿದನು.

ಕೃಷ್ಣರಾಯರ ಅತ್ಯಾಚಾರಗಳಿಂದ ವಿಜಯನಗರ ದರಬಾರವು ಚನ್ನಾಗಿ ಜಾಗೃತವಾಗಿ ಒಬ್ಬ ಉತ್ತಮ ಶಿಕ್ಷಣಾಧಿಕಾರಿಯನ್ನು ನಿಯಮಿಸಿತು. ಹೊಸ ಶಿಕ್ಷಣಾಧಿಕಾರಿಯ ಆಡಳಿತವು ಆನಂದ-ಗೋವಿಂದರಾಯರಿಗೆ ತ್ರಾಸದಾಯಕವಾಯಿತು; ವನಿತೆ-ಕುಸುಮಾವತಿ ಮೊದಲಾದ ಸ್ಕೂಲ ಮಿಸ್ಟ್ರೆಸ್ಸರಿಗೂ ಕಷ್ಟಪ್ರದವಾಯಿತು. ಮೂರು ತಿಂಗಳಲ್ಲಿ ವರ್ತನವು ಸುಧಾರಿಸದಿದ್ದರೆ ನೌಕರಿಯಿಂದ ಕಡಿಮೆ ಮಾಡುವೆವೆಂದು ಹೊಸ ಶಿಕ್ಷಣಾಧಿಕಾರಿಗಳು ಆನಂದ-ಗೋವಿಂದರಿಗೂ,ವನಿತೆ-ಕುಸುಮಾ-ಚಂಪಾವತಿಯರಿಗೂ ಸೂಚನೆ ಕೊಟ್ಟರು. ಕೃಷ್ಣರಾಯರ ಆಡಳಿತದಲ್ಲಿ ಸ್ವಾತಂತ್ರ್ಯಶಿಖರದಲ್ಲಿ ಕುಳಿತ ಈ ಜನರಿಗೆ ನೌಕರಿಯು ಬೇಸರಾಯಿತು. ಮೂರು ತಿಂಗಳಲ್ಲಿ ಕೆಲವು ಶಿಕ್ಷಕ-ಶಿಕ್ಷಕಿಯರಿಂದ ಅನೀತಿಯ ಆಚರಣೆಗಳು ಘಟಿಸಿದವು. ಶಿಕ್ಷಣಾಧಿಕಾರಿಗಳು ಅವರನ್ನು ನೌಕರಿಯಿಂದ ಕಡಿಮೆ ಮಾಡಿದರು. ಆನಂದರಾಯ, ಗೋವಿಂದರಾಯ, ವನಿತೆ, ಚಂಪಾವತಿ,ಕುಸುಮಾವತಿ,ಪರೀಕ್ಷಕಿಯಾದ ಸೋಫಿಯಾ ಬೇಗಮ ಮೊದಲಾದವರು ಮನೆಯನ್ನು ಸೇರಬೇಕಾಯಿತು.

ಮಾಧವ-ಶಕುಂತಲೆಯರು ಸುರೇಂದ್ರರಾಯ-ರಮಾದೇವಿಯರೊಡನೆ ಒಳ್ಳೇ ಸ್ನೇಹದಿಂದಿರತೊಡಗಿದರು.ವಸಂತನು ಶಕುಂತಲೆಯನ್ನು ಬಿಟ್ಟು ಅರೆಗಳಿಗೆ ಇರುತ್ತಿದ್ದಿಲ್ಲ. ಎರಡನೇ ಬಾಣಂತಿತನಕ್ಕಾಗಿ ತವರೂರಿಗೆ ಹೋಗಬೇಕೆಂದು ರಮಾದೇವಿಯ ಮನಸ್ಸಿನಲ್ಲಿತ್ತು; ಆದರೆ ವಸಂತನು ಶಕುಂತಲೆಯನ್ನು ಬಿಟ್ಟು ಬರಲಿಕ್ಕೆ ಒಪ್ಪಲೊಲ್ಲನು. ಆದ್ದರಿಂದ ರಮಾದೇವಿಯು ಬಾಣಂತಿತನಕ್ಕಾಗಿ ತವರೂರಿಗೆ ಹೋಗುವದನ್ನು ಬಿಡಬೇಕಾಯಿತು

ಕೃಷ್ಣರಾಯರ ತರುವಾಯ ವಿಜಯನಗರದ ಶಿಕ್ಷಣಸಂಸ್ಥೆಯ ಪುನರ್ರಚನೆಯು ಪ್ರಾರಂಭವಾಯಿತು. ಶಿಕ್ಷಣದಾನದ ಪವಿತ್ರ ಸಂಸ್ಥೆಯಲ್ಲಿ ಅಸೀತಿಯ ಸ್ತ್ರೀ-ಪುರುಷರನ್ನು ತುಂಬಿ, ಕನ್ಯಾಶಾಲೆಗಳನ್ನು ... ಬಿಚಾಗ ಶಾಲೆಗಳನ್ನಾಗ ಮಾಡಬಾರದೆಂದು ವೃತ್ತಪತ್ರಿಕೆಗಳಲ್ಲಿ ಸೂ...... ಪ್ರಸಿದ್ಧವಾಗತೊಡಗಿದವು. ಹೊಸ ಶಿಕ್ಷಣಾಧಿಕಾರಿಗಳು ಸರ್ವೋತ್ಕೃಷ್ಟರಿದ್ದುದರಿಂದ, ರಾಧಾದೇವಿಯರಂತಹ ಸ್ಕೂಲಮಿಸ್ಟ್ರೆಸ್ಸರು ಮುಂದೆಂದೂ ಅವತರಿಸಲಿಲ್ಲ.

ಸಂಪೂರ್ಣ